" Ah, Sir, a novel is a mirror carried along a high road. At one moment it reflects to your vision the azure skies at another the mire of the puddles at your feet. And the man who carries this mirror in his pack will be accused by you of being immoral! His mirror shews the mire, and you blame the mirror! Rather blame that high road upon which the puddle lies, still more the inspector of roads who allows the water to gather and the puddle to form. "

— STENDHAL

ಮೊದಲನೆಯ ಮುದ್ರಣ: ೧೯೫೦



ಪ್ರಕಾಶಕರು :

**ವಿಜಯ ಸಾಹಿತ್ಯ**

೩೯, ಹೆಚ್. ಬಿ. ಸಮಾಜ ರಸ್ತೆ

ಬಸವನಗುಡಿ, ಬೆಂಗಳೂರು ೪.

ಶಿವಮೊಗ್ಗೆಯಲ್ಲಿ

**ವಿಜಯಾನಂದ ಪ್ರೆಸ್**

ದೊಡ್ಡಪೇಟೆ.

**ಬೆಲೆ: ರೂ. ೪—೦—೦**

ಮುದ್ರಕರು :

ಎಂ. ಎಸ್. ಚಿಂತಾಮಣಿ, ಬಿ.ಎಸ್‌ಸಿ.

**ದಿ ಈಸ್ಟರ್ನ್ ಪ್ರೆಸ್**

೧೧-ಎ, ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ನಗರ

# ಪ್ರಕಾಶಕರ ಮಾತು

ಉತ್ತಮ ವರ್ಗದ ಸ್ವತಂತ್ರ ಕೃತಿಗಳನ್ನು, ವಿಶ್ವಸಾಹಿತ್ಯದ ಅಮರ ಕೃತಿಗಳ ಭಾಷಾಂತರಗಳನ್ನು, ಕನ್ನಡದಲ್ಲಿ ಇದುವರೆಗೆ ಕೃಷಿಯಾಗದಿರುವ ವಿಚಾರ, ವಿಜ್ಞಾನ, ಶಾಸ್ತ್ರಗಳ ಕ್ಷೇತ್ರಕ್ಕೆ ಸಂಬಂಧಿಸಿದ ಪರಿಚಯ ಹಾಗೂ ಪ್ರಚೋದಕ ಕೃತಿಗಳನ್ನು ಪ್ರಕಟಿಸಬೇಕೆಂಬ ಉದ್ದೇಶದಿಂದ 'ವಿಜಯ ಸಾಹಿತ್ಯ'ವನ್ನು ಆರಂಭಿಸಿದೇವೆ. ಇಂಥ ಪ್ರಕಟನ ಮಂದಿರಗಳನ್ನು ಪ್ರಾರಂಭಿಸುವಾಗ 'ನಾವು ಕನ್ನಡದ ಸೇವೆ ಮಾಡಲು ಹೊರಟಿದೇವೆ' ಎಂದು ಶೂರತನದ ಮಾತುಗಳನ್ನು, 'ವಾಚಕರ ಪ್ರೋತ್ಸಾಹವನ್ನು ಅನುಲಕ್ಷಿಸಿ ನಾವು ಹೆಚ್ಚು ಹೆಚ್ಚಾಗಿ ಸೇವೆ ಮಾಡುತ್ತೇವೆ' ಎಂಬಿತ್ಯಾದಿ ಪರಾವಲಂಬನದ ಮಾತುಗಳನ್ನು ಆಡುವುದು ಸಂಪ್ರದಾಯ. ನಮ್ಮ ಧೋರಣೆ ಈ ಪರಂಪರೆಗಿಂತ ಭಿನ್ನವಾದುದು ಎಂದರೆ ನಮಗೆ ವಾಚಕರ ಪ್ರೋತ್ಸಾಹ ಅನಗತ್ಯ ಎಂದು ಮಾತ್ರ ಅರ್ಥಮಾಡಬಾರದಾಗಿ ಕೋರುತ್ತೇವೆ. ನಮ್ಮ ಕೃತಿ ಸಾರ್ಥಕವಾದುದಾದರೆ, ವ್ಯವಸ್ಥಿತವಾದುದಾದರೆ, ಯಶಸ್ಸು ಸ್ವಯಂಸಿದ್ಧ ಎಂಬುದು ನಮ್ಮ ಭಾವನೆ ಅಷ್ಟೆ. 'ವಿಜಯ ಸಾಹಿತ್ಯ'ದ ಯೋಗ್ಯತೆಗನುಗುಣವಾದ ಪ್ರೋತ್ಸಾಹ ವಾಚಕರಿಂದ ದೊರೆಯುತ್ತದೆಂಬ ಭರವಸೆ ನಮಗಿದೆ.

ಸುಪ್ರಸಿದ್ಧ ಪ್ರಗತಿಶೀಲ ಸಾಹಿತಿಗಳಾದ ಶ್ರೀ ಅ. ನ. ಕೃಷ್ಣರಾಯರ ಕ್ರಾಂತಿಕಾರಕ "ನಗ್ನಸತ್ಯ" ಕಾದಂಬರಿ ನಮ್ಮ ಪ್ರಥಮ ಪ್ರಕಟನೆಯಾಗಿ ಹೊರಬೀಳುತ್ತಿದೆ. ಸಮಾಜದ ಪಾಪಕೂಪದ ಮೇಲೆ ಹಾಕಿದ ಆಟಂಬಾಂಬಿನಂತಿರುವ ಈ ಕಾದಂಬರಿಯನ್ನು ಕುರಿತು ನಾವು ಹೆಚ್ಚು ಹೇಳಬೇಕಾದ್ದಿಲ್ಲ. ಇಂತಹ ಸೊಗಸಾದ ಗ್ರಂಥವನ್ನು ನಮಗೆ ಇತ್ತುದಲ್ಲದೆ ಸರ್ವರೀತಿಯಿಂದಲೂ ನಮಗೆ ಮಾರ್ಗದರ್ಶಕರಾಗಿ ಆತ್ಮೀಯತೆಯಿಂದ ಆಶೀರ್ವದಿಸಿರುವ ಈ ನಿರ್ಗರ್ವಿ ಸಾಹಿತಿಗಳ ನೆರವಿನ ಹೊರೆಯನ್ನು ನಾವು ಎಷ್ಟು ತೀರಿಸಿದರೂ

ಸಾಲದು. ಶ್ರೀಯುತರ ಮತ್ತೊಂದು ಮಹಾಕಾದಂಬರಿಯನ್ನು ಸದ್ಯದಲ್ಲೇ ಪ್ರಕಟಿಸಲಿದೇವೆ ಎಂದು ಸಂತೋಷದಿಂದ ಹೇಳ ಬಯಸುತ್ತೇವೆ. ಇತರ ಪ್ರಸಿದ್ಧ ಲೇಖಕರ ಕಾದಂಬರಿಗಳನ್ನು ಪ್ರಕಟಿಸುವ ವ್ಯವಸ್ಥೆ ಮಾಡುತಿದೇವೆ.

ನಮ್ಮ ಪ್ರಕಟನೆಗಳ ವಿಚಾರದಲ್ಲಿ ವಾಚಕರ ಅಭಿಪ್ರಾಯಗಳನ್ನು ಸರ್ವದಾ ಬಯಸುತ್ತೇವೆ.

# ಮುನ್ನುಡಿ

ಜಗತ್ತಿನ ಅತ್ಯಂತ ಪ್ರಾಚೀನ ವೃತ್ತಿಯಾದ ವೇಶ್ಯಾವೃತ್ತಿಯ ಬಗ್ಗೆ ಈಗಾಗಲೇ ನಾನು 'ಜೀವನಯಾತ್ರೆ'† ಕಾದಂಬರಿಯಲ್ಲಿಯೂ, 'ಧರ್ಮ ಸಂಕಟ' ‡ ನಾಟಕದಲ್ಲಿಯೂ, 'ಪಾಪ-ಪುಣ್ಯ'ದ* ಹಿನ್ನುಡಿಯಲ್ಲಿಯೂ ಪ್ರಸ್ತಾಪಿಸಿದ್ದೇನೆ. ವ್ಯಕ್ತಿ, ಸಮಾಜ, ಧರ್ಮ ಹೇಗೆ ಅಬಲೆಯರ ದೌರ್ಬಲ್ಯವನ್ನು ಅಜ್ಞಾನವನ್ನು ತಮ್ಮ ಸ್ವಾರ್ಥಕ್ಕೆ ದುರುಪಯೋಗಪಡಿಸಿಕೊಳ್ಳುತ್ತವೆ ಎಂಬುದನ್ನು ಈ ಕೃತಿಗಳಲ್ಲಿ ಚರ್ಚಿಸಿದ್ದೇನೆ.

ವೇಶ್ಯಾಸಮಸ್ಯೆಗೆ ನಾಲ್ಕು ಮುಖಗಳಿವೆ. ವ್ಯಕ್ತಿ-ಧರ್ಮ-ಸಮಾಜ-ರಾಷ್ಟ್ರಮುಖಗಳೆಂದು ಅವುಗಳನ್ನು ಕರೆಯಬಹುದು. ಹೆಣ್ಣಿಗೆ ದೈವತ್ತ್ವ ಪಟ್ಟಕಟ್ಟಿದ ಈ ಪುಣ್ಯಭೂಮಿಯಲ್ಲಿ ವೇಶ್ಯಾಸಮಸ್ಯೆ ತಲೆದೋರಬೇಕಾದ ಪ್ರಮೇಯವಿರಲಿಲ್ಲ. ಆದರೆ ಸಾಂಘಿಕ ಜೀವನ ಹೆಣ್ಣನ್ನು ವೇಶ್ಯೆಯಾಗಿ-ದೇವದಾಸಿಯಾಗಿ ಬಳಸಿಕೊಂಡಿತು. ಶೂದ್ರಕ ಕ್ರಿ.ಶ. ನಾಲ್ಕನೆಯ ಶತಮಾನದಲ್ಲಿಯೇ ತನ್ನ 'ಮೃಚ್ಛಕಟಿಕ' ಪ್ರಕರಣದಲ್ಲಿ ವಸಂತಸೇನೆಯ ಸಮಸ್ಯೆಯನ್ನು ಚರ್ಚಿಸಿದ್ದಾನೆ. ವೇಶ್ಯೆ, ಭಾರತೀಯ ಸಾಮಾಜಿಕ ಜೀವನದಲ್ಲಿ ಒಂದು ಅನಿವಾರ್ಯಕವಾದ ಅಂಗವಾಗಿದ್ದಳು. ಕಲೆಯ ವ್ಯವಸಾಯ ಅವಳ ಸರ್ವಮಾನ್ಯವಾಗಿತ್ತು. ಅರಮನೆ ಗುರುಮನೆಗಳಲ್ಲಿ ವೇಶ್ಯೆಯಿಲ್ಲದೆ ಮಂಗಳಕಾರ್ಯ ನಡೆಯುತ್ತಿರಲಿಲ್ಲ. ಧರ್ಮ, ಸಮಾಜ ವೇಶ್ಯೆಗೆ ಒಂದು ಕೃತಕಸ್ಥಾನವೇರ್ಪಡಿಸಿ, ಅವಳು ಅದರಲ್ಲಿ ತೃಪ್ತಳಾಗುವಂತೆ ಮಾಡಿತು. ನಾಲ್ಕಾರು ವೇಶ್ಯೆಯರನ್ನು ಸಾಕುತ್ತಿದ್ದ ಶ್ರೀಮಂತ ಸಮಾಜದಲ್ಲಿ ಗಣ್ಯವ್ಯಕ್ತಿಯೆನಿಸಿಕೊಂಡಿದ್ದ; ಕುಲೀನಸ್ಥರ ಮನೆಗಳಲ್ಲಿ ಕೂಡ ಮಂಗಳಸೂತ್ರವನ್ನು ವೇಶ್ಯೆ ಮೊದಲು ಮುಟ್ಟಿ ಹರಸಬೇಕಾಗಿತ್ತು. ವೇಶ್ಯಾಜೀವನದ ಸುತ್ತ ಒಂದು

---

† ಜೀವನಯಾತ್ರೆ : ಪುಟ ೯೩

‡ ಬಣ್ಣದ ಬೀಸಣಿಗೆ ಸಂಗ್ರಹದಲ್ಲಿ

* ಪಾಪ-ಪುಣ್ಯ : ಪುಟ ೧೧೮

ಬಗೆಯ ಕೃತಕ ಕಳೆ, ವೈಭವ, ಗೌರವ, ಸೊಗಸು ಕಟ್ಟಿ ಧರ್ಮಾತ್ಮರಾದ ನಮ್ಮ ಪ್ರಾಚೀನರು ಆ ಸಂಸ್ಥೆಯನ್ನು ಸಾರೋದ್ಧಾರವಾಗಿ ನಡಸಿಕೊಂಡು ಬಂದರು. ಯುದ್ಧರಂಗದಲ್ಲಿ, ರಾಜಕಾರಣದ ಸಂಧಾನುಸಂಧಾನಗಳಲ್ಲಿ ವೇಶ್ಯೆ ಅನಿವಾರ್ಯಳಾಗಿದ್ದಳು. ಅವಳನ್ನು ಅಂಥ ಸಂದರ್ಭಗಳಲ್ಲಿ 'Minister without Portfolio' ಆಗಿ ಗಣಿಸುತ್ತಿದ್ದ ನಿದರ್ಶನಗಳೂ ನಮಗೆ ಇತಿಹಾಸದಲ್ಲಿ ದೊರೆಯುತ್ತದೆ.

ವೇಶ್ಯಾಸಮಸ್ಯೆ ಕೇವಲ ನಮ್ಮ ವೈಯಕ್ತಿಕ ಶೀಲಕ್ಕೆ ಸಂಬಂಧಪಟ್ಟ ಪ್ರಶ್ನೆಯಲ್ಲ. ಅದು ನಮ್ಮ ಜೀವನದರ್ಶನವನ್ನೇ ನಿರ್ದೇಶಿಸುತ್ತದೆ. ಹೆಣ್ಣನ್ನು ನಾವು ನೋಡುವ ಕಣ್ಣು ಯಾವದು ಎಂದು ಕೇಳುತ್ತದೆ.

ವೇಶ್ಯಾಸಮಸ್ಯೆ ತನ್ನ ನಿಜಸ್ವರೂಪವನ್ನು ಹೊರತೋರಿದ್ದು ಕಳೆದ ಶತಮಾನಾಂತ್ಯದಲ್ಲಿ. ಸ್ವಾತಂತ್ರ್ಯ ಭಾವನೆ ನಮ್ಮಲ್ಲಿ ಬೆಳೆದಾಗ – ಫ್ರಾನ್ಸಿನ ಮಹಾಕ್ರಾಂತಿ, ಇಂಗ್ಲೆಂಡಿನ ಔದ್ಯೋಗಿಕ ಕ್ರಾಂತಿ, ರಷ್ಯಾದ ಮಹಾಕ್ರಾಂತಿಯ ಬಿಸಿ ನಮಗೂ ತಟ್ಟಿ ನಮ್ಮ ರಾಷ್ಟ್ರೀಯ, ಸಾಮಾಜಿಕ, ವೈಯಕ್ತಿಕ ಆಗುಹೋಗುಗಳನ್ನು ಅಗ್ನಿಪರೀಕ್ಷೆಗೆ ಒಡ್ಡಿದಾಗ ಹೆಣ್ಣು ತನ್ನ ಸ್ಥಾನಮಾನವನ್ನು ಕುರಿತು ಆಲೋಚಿಸಲಾರಂಭಿಸಿದಳು. ಜಗತ್ತಿನ ಸಮಸ್ಯೆಗಳ ಸಿಂಹಾವಲೋಕನ ಮಾಡಿದ ಕಾರ್ಲ್‌ಮಾರ್ಕ್ಸ್ ಅಸಮಾನ ಹಾಗೂ, ಅಯೋಗ್ಯ ಅರ್ಥ ಹಂಚಿಕೆಯೇ ಎಲ್ಲ ಸಮಸ್ಯೆಗಳ ಮೂಲಕಾರಣವೆಂಬ ಮಹಾಶೋಧವನ್ನು ಮಾಡಿದ. ಅವನ ಶೋಧ ಶ್ರಮಜೀವಿಗಳಲ್ಲಿ ಜಾಗೃತಿಯನ್ನು ಹುಟ್ಟಿಸಿದಂತೆ, ಸ್ತ್ರೀಯರಲ್ಲಿಯೂ ಜಾಗೃತಿಯನ್ನುಂಟುಮಾಡಿತು. ಇಂಗ್ಲೆಂಡ್, ಅಮೇರಿಕಾ ದೇಶಗಳಲ್ಲಿ ಸ್ತ್ರೀ ಸ್ವಾತಂತ್ರ್ಯ (Suffragist) ಚಳುವಳಿ ಆರಂಭವಾಯಿತು. ಇದೇ ಕಾಲದಲ್ಲಿ ನೀಷೆ ಪರಂಪರಾಗತ ಅಭಿಪ್ರಾಯವನ್ನೇ ಪ್ರತಿಪಾದಿಸಿ ಸ್ವಾತಂತ್ರ್ಯಕ್ಕೆ ಸ್ತ್ರೀ ಅರ್ಹಳಲ್ಲ; ಅವಳು ಪಶುವರ್ಗಕ್ಕೆ ಸೇರಿದವಳು ಎಂದು ಸಾರಿದ. ಮಾರ್ಕ್ಸ್ ಮತ್ತು ನೀಷೆಯ ವಿಚಾರವಾದಗಳ ಮಧ್ಯೆ ಜಗತ್ತು ತೂಗಾಡಿತು.

ಮೊದಲನೆಯ ಮಹಾಯುದ್ಧ (೧೯೧೪) ಲೋಕನಾಶಕ್ಕೆ ಬುನಾದಿ ಹಾಕಿದರೂ, ಸ್ತ್ರೀಯ ಸುಪ್ತಚೇತನದ ವಿಕಾಸಕ್ಕೆ ನೆರವಾಯಿತು. ನಾಡಿನ ಸಮಸ್ತ ಸಬಲರೂ, ಪ್ರಾಪ್ತ ವಯಸ್ಕರೂ ಯುದ್ಧರಂಗಕ್ಕೆ ತೆರಳಿದಾಗ, ಅವರ

ಸ್ಥಾನಗಳನ್ನಾಕ್ರಮಿಸಿ ದೈನಂದಿನ ಜೀವನ ಸಾಗಿಸುವ ಹೊಣೆಗಾರಿಕೆ ಮನೆಯಲ್ಲಿದ್ದ ಸ್ತ್ರೀಯರ ಮೇಲೆ ಬಿತ್ತು. ಪುರುಷರು ಸರ್ವನಾಶದಲ್ಲಿ ಉದ್ಯುಕ್ತರಾಗಿದ್ದಾಗ ಮ್ಯಾಡಾಂ ಕ್ಯೂರಿ 'ರೇಡಿಯಂ' ಕಂಡುಹಿಡಿದು, ಲೋಕರಕ್ಷಣೆಗೆ ನೆರವಾದಳು. ಪುರುಷಜಗತ್ತು ರಾಕ್ಷಸೀ ವ್ಯಾಪಾರ ನಡಸದಿರಲು ಸ್ತ್ರೀಯ ಕಡಿವಾಣಬೇಕೆಂದು ಕಳೆದ ಮಹಾಯುದ್ಧ ತೋರಿಸಿಕೊಟ್ಟಿತು. ಆ ಯುದ್ಧದಲ್ಲಿ ನಾವು ಕಂಡುದು ಪೌರುಷದ (ಅಂದರೆ ನಾಶದ) ಪ್ರತಿನಿಧಿಯಾದ ಕೈಸರನನ್ನು; ಅದೇ ಯುದ್ಧ ಅಂತಃಕರಣವೇ ಮೂರ್ತಿವೆತ್ತಂತಿದ್ದ ಫ್ಲಾರೆನ್ಸ್ ನೈಟಿಂಗೇಲಳನ್ನೂ ನಮಗೆ ಪರಿಚಯಮಾಡಿಸಿತು.

ಜಾಗೃತ ಮಹಿಳೆ ಲೈಂಗಿಕ ಅಸಮಾನತೆಯನ್ನು ಹೋಗಲಾಡಿಸಲು ಪ್ರಯತ್ನಿಸಿದಳು. ಅವಕಾಶ ಮತ್ತು ಅನುಕೂಲವಿದ್ದರೆ ಪುರುಷನಂತೆ ಎಲ್ಲ ರಂಗಗಳಲ್ಲಿಯೂ ಸ್ತ್ರೀ ತನ್ನ ಪ್ರತಿಭೆಯನ್ನು ಮೆರೆಸಲು ಸಾಧ್ಯವೆಂಬುದನ್ನು ಸ್ಥಾಪಿಸಲೆತ್ನಿಸಿದಳು. ಸ್ತ್ರೀಯರಲ್ಲಿ ಉತ್ತಮ ಲೇಖಕರು, ಎಂಜನಿಯರುಗಳು, ಡಾಕ್ಟರುಗಳು, ಚಿತ್ರಕಾರರು, ಗಾಯಕಿಯರು, ರಾಜಕಾರಣಪಟುಗಳು, ವಾಗ್ಮಿಗಳು ಹುಟ್ಟಿಕೊಂಡರು. ರಣರಂಗದಲ್ಲಿ ಕೂಡ ಪುರುಷನ ಸರಿದೊರೆಯಾಗಿ ಸ್ತ್ರೀ ನಿಲ್ಲಬಲ್ಲಳೆಂಬುದನ್ನು ರಷ್ಯಾದ ಮಹಾಕ್ರಾಂತಿ, ನೂತನ ರಷ್ಯಾದ ಸಂಘಟನೆ ತೋರಿಸಿಕೊಟ್ಟಿತು. ಆರ್ಥಿಕ ದಾಸ್ಯವನ್ನು ನೀಗಿಕೊಳ್ಳಲು ಸ್ತ್ರೀ ಸರ್ವವಿಧದಲ್ಲಿಯೂ ಪ್ರಯತ್ನಿಸಿದಳು.

ಸ್ತ್ರೀಜಾಗೃತಿಯ ಚಳುವಳಿ ಅರ್ಧಶತಮಾನಕ್ಕೂ ಮಿಕ್ಕು ಯೂರೋಪು, ಅಮೇರಿಕಾಗಳಲ್ಲಿ ನಡೆದಿದ್ದರೂ ಸ್ತ್ರೀಯ ಪರಿಸ್ಥಿತಿ ಸುಧಾರಿಸಿದೆಯೇ? ಎನ್ನುವ ಪ್ರಶ್ನೆ ಇನ್ನೂ ನಿಂತೇ ಇದೆ. ಸ್ತ್ರೀ ಪುರುಷನೊಂದಿಗೆ ಮೇಲಾಟಕ್ಕೆ ನಿಂತಳು. ಅವನು ಮಾಡಬಹುದಾದುದೆಲ್ಲವನ್ನೂ ತಾನು ಮಾಡಲು ಸಾಧ್ಯ ಎಂದು ಸ್ಥಾಪಿಸಿದಳು. ಇದರಿಂದ ಸ್ತ್ರೀಪುರುಷರ ಜೀವನಕ್ಕೆ ಕಿಂಚಿತ್ತಾದ ಸೌಖ್ಯವಾದರೂ ಬಂದಿತೇ? ಈ ವ್ಯವಸ್ಥೆಯಿಂದ ಸ್ತ್ರೀಯ ಸಮಸ್ಯೆಗಳಿಗೆ ಪರಿಹಾರ ಒದಗಿತೇ?

ಸ್ತ್ರೀಯನ್ನು ಭಾರತ ಚಿರಂತನದಾಸ್ಯದಲ್ಲಿ ಕೆಡಹಿತೆಂದೂ, ಮನುಮಹಾಶಯನ 'ಪಿತಾರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ ಪುತ್ರೋ ರಕ್ಷತಿ ವಾರ್ಧಕ್ಯೇ' ಇದಕ್ಕೆ ಪರಮಾಧಾರವೆಂದು ಆಂಗ್ಲ ಆಳರಸರ ಪ್ರತಿ

ನಿಧಿಗಳಾದ ಇತಿಹಾಸಕಾರರು ಸಾರಿ, ಭಾರತದ ಅವಹೇಳನ ಮಾಡಿದರು. ಭಾರತ ಸಮಾಜದಲ್ಲಿ ಸ್ತ್ರೀಗೆ ಇದ್ದ ಸ್ಥಾನ ಯಥಾಯೋಗ್ಯವಾದುದೆಂದು ವಾದಿಸುವುದು ಸತ್ಯದ ಅಪಚಾರ. ಪಾಶ್ಚಾತ್ಯರ ದೃಷ್ಟಿಯ ಸ್ವಾತಂತ್ರ್ಯವನ್ನು ಸ್ತ್ರೀಗೆ ಕೊಡಲೊಪ್ಪದಿದ್ದ ಮನು, ಯಾಜ್ಞವಲ್ಕ್ಯರು ಪುರುಷನ ಜವಾಬು ದಾರಿಗೆ ವಿನಾಯಿತಿ ಕೊಡಲಿಲ್ಲ. ಸ್ತ್ರೀಯ ರಕ್ಷಣೆ ಪೋಷಣೆ ತಂದೆ, ಗಂಡ, ಮಗನಿಗೆ ಸೇರಿದುದೆಂದು ಒತ್ತಿ ಹೇಳಿದರು. ಸ್ತ್ರೀ ಸ್ವಾತಂತ್ರ್ಯ ಚಳುವಳಿ ಪ್ರಬಲಿಸಿರುವ ರಾಷ್ಟ್ರಗಳಲ್ಲಿ ಪುರುಷ ಈ ಜವಾಬುದಾರಿಯನ್ನು ಹೊರುತ್ತಿದ್ದಾನೆಯೇ? ಸ್ತ್ರೀ ಸ್ವಾತಂತ್ರ್ಯ ಚಳುವಳಿ ಒಂದು ರೀತಿಯಲ್ಲಿ ಪುರುಷನ ಸ್ವಚ್ಛಂದವೃತ್ತಿ ಬೆಳೆಯಲು ಇಂಬುಗೊಟ್ಟಿಲ್ಲವೇ?

ಹೊಸದಾಗಿ ಸ್ವಾತಂತ್ರ್ಯದ ಮುಖ ಕಂಡ ಸ್ತ್ರೀ ತನ್ನ ಜವಾಬುದಾರಿ ಅರಿತು ನಿರ್ವಹಿಸಿದಳೇ? ಪುರುಷನೊಂದಿಗೆ ಪೈಪೋಟಿ ಮಾಡುವುದಕ್ಕಿಂತ, ಸಾಮಾಜಿಕ ಸಂಘಟನೆ ಮಾಡುವುದು ಅಗತ್ಯ ಎಂಬ ಭಾವನೆ ಅವಳಲ್ಲಿ ಬೆಳೆಯಲಿಲ್ಲ. ಸ್ತ್ರೀ ಪುರುಷರಿಬ್ಬರೂ ಸಮಾಜ ರಥದ ಎರಡು ಚಕ್ರಗಳು; ಇಬ್ಬರ ಕಾರ್ಯಕ್ಷೇತ್ರ ಪ್ರತ್ಯೇಕವಾಗಿದ್ದರೂ ಗುರಿಯೊಂದೇ; ಇಬ್ಬರೂ ಸಮಯೋಧರಂತೆ ದುಡಿದರೇ ಸಮಾಜ ಸುಸಂಘಟಿತವಾಗುವುದು ಎನ್ನುವ ಭಾರತೀಯ ದರ್ಶನ ಅವ್ಯಾವಹಾರಿಕವೂ ಅಸಂಬದ್ಧವೂ ಅಲ್ಲವೆಂಬುದನ್ನು ಸುಧಾರಿತ ರಾಷ್ಟ್ರಗಳು ಇಂದು ಕಂಡುಕೊಳ್ಳುತ್ತಿವೆ.

ಪುರಾತನವಾದ ವೇಶ್ಯಾಸಮಸ್ಯೆಗೆ ಈ 'ಕಾರ್ಮಿಕ ಯುಗ' ಹೊಸ ಸ್ವರೂಪವನ್ನೂ ವಿಪುಲತೆಯನ್ನೂ ತಂದುಕೊಟ್ಟಿತು. ಹಳ್ಳಿಗಳು ಬರಿದಾಗಿ ಪಟ್ಟಣಗಳು ಬೆಳೆಯತೊಡಗಿದುದೂ ಈ ಸಮಸ್ಯೆಯ ವ್ಯಾಪ್ತಿಗೆ ಕಾರಣವಾಯಿತು. ಪಟ್ಟಣಗಳ ಜನಸಾಂದ್ರತೆ, ಆಹಾರ ವಸತಿಗಳ ಹಾಹಾಕಾರ ವೇಶ್ಯಾಸಮಸ್ಯೆಗೆ ಇಂಬುಗೊಟ್ಟಿತು. ಎಮಿಲ್ ಜೋಲಾ ತನ್ನ ಅಮರ ಕೃತಿ 'ಜರ್ಮಿನಾಲ್'ನಲ್ಲಿ ಈ ಜೀವನದ ಭಯಂಕರ ಚಿತ್ರವನ್ನು ಕೊಟ್ಟಿದ್ದಾನೆ. ಬಡತನ ನಿವಾರಣೆಯಾದಲ್ಲದೆ ವೇಶ್ಯಾಸಮಸ್ಯೆ ನೀಗದು ಎನ್ನುವುದನ್ನು ಔದ್ಯೋಗಿಕ ಪಟ್ಟಣಗಳು ಸ್ಥಿರಮಾಡಿಕೊಟ್ಟವು.

ಆದರೆ ಈ ಸಮಸ್ಯೆ ಕೇವಲ ಔದ್ಯೋಗಿಕ ಪಟ್ಟಣಗಳಿಗೇ ಹರಡಿಲ್ಲ. ಹಳ್ಳಿಹಳ್ಳಿಗಳಲ್ಲಿಯೂ ಸಾಂಕ್ರಾಮಿಕ ಜಾಡ್ಯದಂತೆ ಸಮಸ್ಯೆ ವ್ಯಾಪಿಸಿದೆ.

ನಮ್ಮ ನೈತಿಕ ಜೀವನ ತನ್ನ ಕ್ರತುಶಕ್ತಿಯನ್ನು ಕಳೆದುಕೊಂಡು ಕೆಲವು ಸಮಯಾಚಾರಗಳಿಗೆ ಅಧೀನವಾಯಿತು. ದೇವಾಲಯಕ್ಕೆ ಹೋಗುವುದು, ಸನ್ಯಾಸಿ, ಮಠಾಧಿಪತಿ, ಗುರುಗಳನ್ನು ಆರಾಧಿಸುವುದು ಧರ್ಮವಾಯಿತು. ವ್ಯಕ್ತಿ ಹೊರಗಿನ ಆಚಾರವನ್ನು ಧರ್ಮವೆಂದು ಭಾವಿಸತೊಡಗಿದ. ವ್ಯಕ್ತಿಯಲ್ಲಿ ಧರ್ಮ ಅಂತರ್ಗತವಾಗಿರುವುದಕ್ಕೆ ಅವನ ನಿತ್ಯಜೀವನವೇ ಕುರುಹು. ಅವನ ನಡೆ, ನುಡಿಯೇ ಕಸೋಟಿ. ಬೆಳಿಗ್ಗೆಯಿಂದ ಸಂಜೆಯವರೆಗೆ ದುರ್ವ್ಯಾಪಾರ ನಡೆಸಿ, ರಾತ್ರಿ ಶಿವಪೂಜೆ ಮಾಡಿ ಪಾಪತೊಳೆಯುವ ವ್ಯಕ್ತಿ, ಧರ್ಮಕ್ಕೂ ಪಾಪಲೇಪನ ಮಾಡುತ್ತಾನೆ. ಅವನ ಪ್ರತಿಯೊಂದು ಮಾತೂ, ಪ್ರತಿಯೊಂದು ಕೃತಿಯೂ ಸಮಷ್ಟಿಯ ಹಿತಕ್ಕೆ ಮೀಸಲಾದಾಗಲೇ ಅವನನ್ನು ಧರ್ಮಿಷ್ಠನೆಂದು ನಾವು ಒಪ್ಪಲು ಸಾಧ್ಯ. ನೈತಿಕ ನೆಲೆಗಟ್ಟನ್ನು ಸ್ಥಾಪಿಸುವ ಬಗೆ ಹೇಗೆ ಎಂಬುದನ್ನು ದೇಶದ ಪ್ರಗತಿಗಾಮಿಗಳು ವಿಚಾರ ಮಾಡಬೇಕು.

ಶೀಲ ಉಪದೇಶದಿಂದಾಗಲಿ ಒತ್ತಾಯದಿಂದಾಗಲಿ ಬರುವುದಿಲ್ಲ. ಅದು ಸ್ವಯಂಭೂಶಕ್ತಿ. ಅಶ್ಲೀಲ ಜೀವನದಲ್ಲಿ ಒಂದು ಬಗೆಯ ಕೃತಕ ಸೌಂದರ್ಯ, ಕೃತಕ ಆನಂದ, ಕೃತಕ ತೃಪ್ತಿ ಕಾಣುವ ವ್ಯಕ್ತಿ ಒಳಗಣ್ಣು ತೆರೆದು ನೋಡಿ ಶೀಲದಿಂದ ಲಭಿಸುವ ಶಾಶ್ವತ ಆನಂದ, ಸೌಂದರ್ಯ, ತೃಪ್ತಿಯನ್ನು ಗ್ರಹಿಸಬೇಕು. ಮನುಷ್ಯ ಬದುಕಬೇಕು – ಬಾಳಬೇಕು ನಿಜ; ಹೇಗಾದರೆ ಬಾಳಿದರೆ ಆಯಿತೇ? ಕಂಡವರ ರಕ್ತ ಹೀರಿ ಬದುಕುವುದು ಒಂದು ಬದುಕೇ! ಪರರ ಬಾಳನ್ನು ಮೆಟ್ಟಿ ಬಾಳುವುದು ಒಂದು ಬಾಳೇ !!

ವೇಶ್ಯಾಸಮಸ್ಯೆಗೆ ವೈಯಕ್ತಿಕ, ಸಾಮಾಜಿಕ ಮುಖಗಳಿರುವಂತೆ ರಾಷ್ಟ್ರೀಯ ಮುಖವೂ ಒಂದು ಇದೆ. ಪರಪೀಡನೆಯಿಂದ, ಪರರಕ್ತೋಪಜೀವನದಿಂದ ಬಾಳುವುದು ಅಧರ್ಮವೆಂಬ ಪ್ರಸ್ತಾನವನ್ನೊಪ್ಪಿಕೊಂಡರೆ ವೇಶ್ಯಾಜೀವನಕ್ಕೆ ಇಂಬುಗೊಡುವ ಎಲ್ಲರೂ, ಹೆಂಗಸನ್ನು ವೇಶ್ಯಾವಾಟಕ್ಕೆ ದೂಡುವ ರಾಷ್ಟ್ರದ ಸಾಂಘಿಕ, ಆರ್ಥಿಕ, ನೈತಿಕ ವ್ಯವಸ್ಥೆಯೂ ಮಹಾಪಾಪದ ಪಾಲುಗಾರರಾಗುತ್ತಾರೆ. ವೇಶ್ಯೆಯರಿಗೆ ಪ್ರೋತ್ಸಾಹ ಕೊಡುವ ಶ್ರೀಮಂತರೂ, ವೇಶ್ಯಾವಾಟಗಳನ್ನು ನಡೆಸುವ ಮಧ್ಯಸ್ಥಗಾರರೂ, ವೇಶ್ಯಾವೃತ್ತಿಗೆ ಮನೆ ಬಾಡಿಗೆಗೆ ಕೊಡುವ ಸ್ಥಿತಿವಂತರೂ, ವೇಶ್ಯಾಜೀವನದ ಸೊಬಗು

ಸೌಂದರ್ಯವನ್ನು ಬಣ್ಣಿಸುವ ಕವಿ ಕಲಾವಿದರೂ ವೇಶ್ಯೆಯರಿಗಿಂತ ಅಪರಾಧಿಗಳಾಗುತ್ತಾರೆ. ಸುವ್ಯವಸ್ಥಿತ ಸಹಕಾರ ಸಂಘದಂತೆ ಬೆಳೆದಿರುವ ಈ ವಿಷಚಕ್ರವನ್ನು ರಾಷ್ಟ್ರ ಭೇದಿಸಬೇಕು. ರಷ್ಯಾ ಇಂಥ ಪ್ರಯತ್ನ ನಡೆಸಿ ಲೋಕಕ್ಕೆ ಮೇಲ್ಪಂಕ್ತಿ ಹಾಕಿಕೊಟ್ಟಿದೆ.

ವೇಶ್ಯಾಸಮಸ್ಯೆಯನ್ನು ರುದ್ರಭೀಕರವಾಗಿ ತನ್ನ 'ಯಾಮಾ' ಕಾದಂಬರಿಯಲ್ಲಿ ಚಿತ್ರಿಸಿದ ಅಲೆಕ್ಸಾಂಡರ್ ಕುಪ್ರಿನ್ * ವೈಯಕ್ತಿಕ ಶೀಲ ಈ ಸಮಸ್ಯೆಯನ್ನು ಪರಿಹರಿಸಬಲ್ಲುದೆಂದು ಸೂಚಿಸಿದ್ದಾನೆ. ಮಾನವನ

* "And truly: what a great number there exists of oppressive, insuperable accursed problems, menacingly hanging over mankind, during the course of thousands of years, up to now, and at times bowing man down to earth, bringing him down to the level of a low beast War, prostitution, capital punishment, toil unendurable and poorly paid, the half-starved bondage of the greater majority in the service of the gluttonous minority Of these evils I have always found the most evil to be the traffic in the body of woman, the traffic in the love of woman,—the highest gift of God to mankind But to me it seemed that mankind's ancient malady—prostitution is the one most amenable to a speedy and successful cure. ......... It is no justification at all for you that the woman has become stupid and has sunk low because of her—Oh! far from easy work. The gist of the matter is this; that if her youth had been formed under conditions of kindness, care, and a minimum competance, she might be not only a happy mother, but a beloved sister, and a treasured daughter"

"Alexander Kuprin" in "YAMA"

ದಿವ್ಯಾಂತಃಕರಣವನ್ನು ಪ್ರಚೋದನಗೊಳಿಸಿ ಅವನು ಪರಿಶುದ್ಧ ಜೀವನ ನಡೆಸುವಂತೆ ಮಾಡುವ ವಿಷಯ ಅವಶ್ಯಕವಾದುದೆಂಬುದನ್ನು ನಾನು ಅಲ್ಲಗಳೆಯುವುದಿಲ್ಲ. ವ್ಯಕ್ತಿಯ ಮನಸ್ಸು ಪಕ್ವವಾಗಬೇಕಾದರೆ ಸಮಾಜವೂ ಸಾಕಷ್ಟು ಜಾಗೃತವಾಗಬೇಕು. ಜಾಗ್ರತ ಸಮಾಜದ ಪರಿಶುದ್ಧ ವಾತಾವರಣದಲ್ಲಿ ಬೆಳೆಯುವ ವ್ಯಕ್ತಿ ಅಪಮಾರ್ಗವನ್ನು ಹಿಡಿಯುವುದು ದುಸ್ಸಾಧ್ಯವಾಗುತ್ತದೆ.

ವೇಶ್ಯಾಸಮಸ್ಯೆಗೆ ನೈತಿಕ ದೃಷ್ಟಿಯಲ್ಲದೆ ಸಮಾಜ ಸ್ವಾಸ್ಥ್ಯ ದೃಷ್ಟಿಯೂ ಇದೆ. ತಮ್ಮ ತಾತ್ಕಾಲಿಕ ಸೌಖ್ಯವೇ ಹಿರಿದೆಂದು ಭಾವಿಸುವ ಸ್ತ್ರೀಪುರುಷರು ಸಮಾಜವನ್ನು ಹಾಗೂ ಭಾವೀಸಂತಾನವನ್ನು ರೋಗರುಜಿನಾದಿಗಳ ನುಡುವಿನಲ್ಲಿ ಕೆಡಹುತ್ತಾರೆ. ತಂದೆ, ತಾಯಿಗಳು ತಮ್ಮ ಪಾಪದ ಹೊರೆಯನ್ನು ತಮ್ಮ ಮಕ್ಕಳ ಮೇಲೆ, – ಅವರ ಮಕ್ಕಳ ಮೇಲೆ – ಹೇರುವುದು ಘೋರ ಅತ್ಯಾಚಾರ.

'ನಗ್ನಸತ್ಯ' ಕಾದಂಬರಿಯಲ್ಲಿ ವೇಶ್ಯಾಸಮಸ್ಯೆಯನ್ನು ಸಾಮಾಜಿಕ, ಕೌಟುಂಬಿಕ ಹಾಗೂ ರಾಷ್ಟ್ರೀಯ ದೃಷ್ಟಿಯಿಂದ ನೋಡಲು ಯತ್ನಿಸಿದ್ದೇನೆ. ಎಲ್ಲ ಸಮಸ್ಯೆಗಳ ಮೂಲಾಧಾರವಾಗಿರುವ ಬಡತನ ಪ್ರಶ್ನೆಯನ್ನು ನಿವಾರಿಸಿದರೆ ವೇಶ್ಯಾಸಮಸ್ಯೆಯ ಪರಿಹಾರವೂ ಒದಗುತ್ತದೆಂದು ಸೂಚಿಸಿದ್ದೇನೆ.

'ನಗ್ನಸತ್ಯ' ವೇಶ್ಯೆಯ ಕಥೆಯಲ್ಲ — ವೇಶ್ಯಾಸಮಸ್ಯೆಯ ಕಥೆ. ಇದರಲ್ಲಿ ವೇಶ್ಯೆ, ವಿಟರ ಹಾವಭಾವಗಳನ್ನು, ಮೋದ ಪ್ರಮೋದಗಳನ್ನು ಚಿತ್ರವತ್ತಾಗಿ ಬಣ್ಣಿಸುವುದಕ್ಕೆ ನಾನು ಹೋಗಿಲ್ಲ. ಈ ಕಥೆಯಲ್ಲಿ ಹಾಗೂ ವೇಶ್ಯೆಯರ ಜೀವನಕಥೆಯಲ್ಲಿ ಬರುವ ಮುತ್ತಮ್ಮ ನಮ್ಮ ಸಮಾಜದ ವಿಗಡ ಸ್ವರೂಪದ ಪ್ರತೀಕವಾಗಿದ್ದಾಳೆ. ಉದರಂಭರಣಕ್ಕೆ – ಶೀಘ್ರಸಂಪತ್ತಿಗೆ ಯಾವ ಮಾರ್ಗವೂ ಅನೀತಿಯುತವಾದುದಲ್ಲ ಎಂದು ಭಾವಿಸುವ ರಾಜಕಾರಣಪಟುಗಳು, ಕಲಾವಿದರು, ವ್ಯಾಪಾರಿಗಳು, ಧರ್ಮಬೋಧಕರಂತೆ ಮುತ್ತಮ್ಮನೂ ನೀತಿಯ ನೆಲೆಗಟ್ಟಿಗೆ ನಿಲುಕದ ಬಾಳುವೆ ಬಾಳುತ್ತಾಳೆ. ಅವಳ ಜೀವನದ ಮಹಾಗ್ನಿಕುಂಡಕ್ಕೆ ಹಲವು ಪತಂಗಗಳು ಬಿದ್ದು ನಾಶ ಹೊಂದುತ್ತವೆ.

ಮುತ್ತಮ್ಮನಂಥ ವ್ಯಕ್ತಿಗಳನ್ನು, ಕಮಲ, ನಾಗು, ಬಾಲು,

ವೆಂಕಟೆಯಂಥ ವ್ಯಕ್ತಿಗಳನ್ನು ಕಾಯಿದೆ ಕಾನೂನುಗಳಿಂದ ಹತೋಟಿಯಲ್ಲಿಡ ಬಹುದು; ಕಾಲಾನುಕಾಲಕ್ಕೆ ನಿವಾರಿಸಲೂಬಹುದು. ಆದರೆ ವ್ಯಾಧಿಯ ಬುಡ ಕಡಿಯದೆ ಮೇಲೆ ಮೇಲೆ ಚಿಕಿತ್ಸೆ ಮಾಡಿದರೇನು ಪ್ರಯೋಜನ? ಕಾಯಿದೆ ಕಾನೂನುಗಳು ಪೋಲೀಸಿನವರು, ಮ್ಯಾಜಿಸ್ಟ್ರೇಟರ ಕೈ ಬಲಪಡಿಸುವುದಲ್ಲದೆ ಮೂಲಸಮಸ್ಯೆಯನ್ನೆದುರಿಸುವುದಿಲ್ಲ.

'ನಗ್ನಸತ್ಯ' ಮನಸ್ಸನ್ನು ಅರಳಿಸುವ ಕಾದಂಬರಿಯಲ್ಲ, ಕೆರಳಿಸುವ ಕಾದಂಬರಿ. ಇಂಥ ಅಸಭ್ಯ ಕಥೆಗಳನ್ನು ಬರೆದು ಓದುಗರ ಅಭಿರುಚಿಯನ್ನೇಕೆ ಕೆಡಿಸಬೇಕು ಎಂದು ಮಡಿವಂತರು ಕೇಳಬಹುದು. ಅವರ ಪ್ರಶ್ನೆಗೆ ಪ್ರತಿಯಾಗಿ ನಾನು ಒಂದು ಪ್ರಶ್ನೆ ಕೇಳಲು ಬಯಸುತ್ತೇನೆ 'ಜೀವನ ಸಭ್ಯ ವಾಗಿದೆಯೇ – ಸಹನೀಯವಾಗಿದೆಯೇ – ಶುಭ್ರವಾಗಿದೆಯೇ?' ಸತ್ಯಪ್ರಿಯ ನಾದ ಸಾಹಿತಿ ಜೀವನಕ್ಕೆ ಮೆರುಗುಗೊಟ್ಟು (window – dressing) ಅದರ ಕೃತ್ರಿಮ ಸೌಂದರ್ಯವನ್ನು ವರ್ಣಿಸಬೇಕೇ? ಸಾಹಿತಿ ದರ್ಜಿಯಲ್ಲ, ಮೊಚ್ಚೆಗಾರನಲ್ಲ. ಅವನು ದೃಷ್ಟಾರನೆಂಬುದು ನಿಜವಾದರೆ ಇದ್ದ ಸಂಗತಿ ಯನ್ನು ಇದ್ದಂತೆ ವರ್ಣಿಸಲು ಅವನು ಹಿಂಜರಿಯಬಾರದು. ಸತ್ಯದ ಆಭಾಸಮಾಡುವ ಸಾಹಿತಿ ಲೋಕಮಾರಕನೇ ವಿನಾ ಲೋಕತಾರಕನಲ್ಲ. ಸಾಹಿತ್ಯದಲ್ಲಿ ಬರುವ ಒಂದು ಭೀಭತ್ಸ – ಭಯಂಕರ ಚಿತ್ರವನ್ನು ಕಂಡು ಅಶಾಂತರಾಗುವ ಜನ, ಜೀವನದಲ್ಲಿ ಇದೇ ಚಿತ್ರ ಸಹಸ್ರಮುಖ ಹೊತ್ತು ನಿಂತಿರುವುದನ್ನು ಕಂಡು ಏನು ಹೇಳುತ್ತಾರೆ? ಸಾಹಿತ್ಯದಲ್ಲಿ ಈ ಚಿತ್ರ ಬೇಡವೆನ್ನುವವರು ಜೀವನದಲ್ಲಿಯೂ ಈ ಚಿತ್ರವಿಲ್ಲದ ಹಾಗೆ ಮಾಡಬೇಕು.

"ನಗ್ನಸತ್ಯ" ಕಾದಂಬರಿಯನ್ನು ವಿಮರ್ಶಿಸಹೊರಡುವ ಓದುಗರು, ವಿಮರ್ಶಕರು ಎಡ್ವರ್ಡ್ ಕಾರ್ಪೆಂಟರನ ಈ ಮಾತುಗಳನ್ನು ಸ್ವಲ್ಪ ವಿಚಾರ ಮಾಡಬೇಕಾಗಿ ಪ್ರಾರ್ಥಿಸುತ್ತೇನೆ.*

> "The commercial prostitution of love is the last outcome of our whole social system, and its most clear condemnation It flaunts in our streets, it hides itself in the garment of respectability under

---

* Edward Carpenter in "Love's Coming of Age"

the name of matrimony, it eats in actual physical disease and death right through our midst; it is fed by the oppression and the ignorance of women, by their poverty and denied means of livelihood, and by the hypocritical puritanism which forbids them by millions not only to gratify but even to speak of their natural desires, and it is encouraged by the callousness of an age which has accustomed men to buy and sell for money every most precious thing - even the life - long labor of their brothers, therefore why not also the very bodies of their sisters"

ವೇಶ್ಯಾಜೀವನದ ಎಲ್ಲ ಮುಖಗಳನ್ನೂ 'ನಗ್ನಸತ್ಯ'ದಲ್ಲಿ ಗ್ರಂಥ ವಿಸ್ತಾರ ಭಯದಿಂದ ನಾನು ಚಿತ್ರಿಸಲಾಗಿಲ್ಲ. ಭಾವಿಸಂತಾನದ ಮೇಲೆ ವೇಶ್ಯಾಜೀವನ ಮೂಡುವ ಪ್ರಭಾವ ಭಯಂಕರವಾದುದು. ಅದನ್ನೂ ಒಮ್ಮೆ ಕೂಲಂಕಷವಾಗಿ ಚಿತ್ರಿಸಬೇಕೆಂಬ ಉದ್ದೇಶವಿದೆ.

ನನ್ನ ಸಾಹಿತ್ಯಕೃತಿಗಳ ಬಗ್ಗೆ ಅಪಾರ ವಿಶ್ವಾಸ ತೋರಿಸಿ, 'ನಗ್ನಸತ್ಯ' ಕಾದಂಬರಿಯನ್ನು ಪ್ರಕಟಿಸಲು ಮುಂದೆ ಬಂದ 'ವಿಜಯ ಸಾಹಿತ್ಯ' ಪ್ರಕಟನಾಲಯದ ಶ್ರೀ ಎಂ. ಆರ್. ಲಕ್ಷ್ಮಯ್ಯನವರಿಗೂ, ಶ್ರೀ ಕೆ. ಎಸ್. ರಾಮಕೃಷ್ಣಮೂರ್ತಿಯವರಿಗೂ, ಎಂದಿನಂತೆ ಅಚ್ಚುಗಟ್ಟಾಗಿ ಮುದ್ರಿಸಿ ಕೊಟ್ಟಿರುವ ಈಸ್ಟರ್ನ್ ಪ್ರೆಸ್ ಒಡೆಯರಾದ ಶ್ರೀ ಎಂ. ಎಸ್. ಚಿಂತಾಮಣಿ ಯವರಿಗೂ, ಹೊದಿಕೆಯ ಚಿತ್ರ ಬರೆದುಕೊಟ್ಟ ಮದರಾಸಿನ ಚಿತ್ರಗಾರರಾದ ಶ್ರೀ ಎಸ್. ರಾಮಂ ಅವರಿಗೂ ನನ್ನ ಕೃತಜ್ಞತೆಯನ್ನರ್ಪಿಸುತ್ತೇನೆ.

"ಅನ್ನಪೂರ್ಣ"
ವಿಶ್ವೇಶ್ವರಪುರ, ಬೆಂಗಳೂರು – ೨.
೫–೧೨–೧೯೫೦

**ಅ. ನ. ಕೃಷ್ಣರಾಯ**

# ನಗ್ನಸತ್ಯ

## ೧

ಮುತ್ತಮ್ಮ ಅಂದು ಎಡದ ಮಗ್ಗುಲಲ್ಲಿ ಎದ್ದಿದ್ದಳೆಂದು ಕಾಣುತ್ತದೆ. ಹಾಸಿಗೆ ಬಿಟ್ಟು ಏಳುವಾಗಲೇ ಸಿಡಿಸಿಡ ಎಂದುಕೊಂಡೇ ಎದ್ದಳು. ತಲೆ ಬೇರೆ ನೋಯುತ್ತಿತ್ತು.

ಎದ್ದವಳು ಮುಖತೊಳೆದ ಶಾಸ್ತ್ರ ಮಾಡಿ ಸೇರು ತೆಗೆದುಕೊಂಡು ಹೋಗಿ ಎಮ್ಮೆ ತೊಳೆದು, ಹಾಲು ಕರೆಯುವುದಕ್ಕೆ ಕುಳಿತಳು. ಪ್ರತಿದಿನ ಒಂದು ಸೇರು ಹಾಲು ಕೊಡುತ್ತಿದ್ದ ಎಮ್ಮೆಗೂ ಅಂದು ಮುಳ್ಳೋಗರ ಬರ ಬೇಕೇ–ಅದು ಮೂರು ಪಾವೇ ಹಾಲು ಕೊಟ್ಟಿತು. ಮುತ್ತಮ್ಮ ಎಮ್ಮೆಯನ್ನು ಪಾಚಾಮಗೋಚರ ಬಯ್ದಳು. 'ಇದರ ಹಾಲು ಹೊಟ್ಟೆ ಸೇರದೆ ಹೋಗ–ಒಂದು ಬಂದಿ ತಿನ್ನುತ್ತೆ. ಸೇರು ಹಾಲು ಕೊಡುವುದಕ್ಕೆ ಆಗತ್ತೆ' ಎಂದುಕೊಂಡಳು.

ಹಾಲು ಕರೆದುಕೊಂಡು ಒಳಗೆ ಬಂದರೂ ಪುಟ್ಟಿ, ನಾಗರಾಜ ಇಬ್ಬರೂ ಎದ್ದಿರಲಿಲ್ಲ. ಅವರಿಗಷ್ಟು ಛೀಮಾರಿ ಮಾಡಿ, ಮುಸುಗೆಳೆದು ಎಬ್ಬಿಸಿದಳು

ನಾಗರಾಜ, ಪುಟ್ಟಿ ಮುಖ ತೊಳೆದುಕೊಂಡು ಬರುವಷ್ಟರಲ್ಲಿ ಮುತ್ತಮ್ಮ ಒಲೆ ಹೊತ್ತಿಸಿ ಕಾಸಿಗೆ ಸೇರಿಟ್ಟಳು.

ನಾಗರಾಜ ಮುಖ ತೊಳೆದುಕೊಂಡು ಬಂದು ಅಡಿಗೆಯ ಮನೆಯಲ್ಲಿ ಮುಂಡಿಸಿದ. ಪುಟ್ಟಿ ಹೊರಗೆ 'ಟೈಗರ್' ನ್ನು ಸೇವುತ್ತಾ ನಿಂತಳು. ಮುತ್ತಮ್ಮ ಸಿಡುಕಿನಿಂದ

“ಎಂಟು ಗಂಟೆಗೆ ಮೊದಲೆ ಹಾಗೆ ಹೇಳುತ್ತೀಯಲ್ಲಾ. ಹಾಲು ತೆಗೆದು ಕೊಂಡು ಹೋಗಿ ಕೊಡುವವರು ಯಾರು?”

“ರಾತ್ರಿ ಮಲಗೋದು ಹೊತ್ತಾಯಿತು ಮುತ್ತಾ. ನಿದ್ರೆ ಹತ್ತಲಿಲ್ಲ ಬೆಳಗಿನ ಝಾವಕ್ಕೆ ನಿದ್ರೆ ಬಂತು. ನಾಳೆಯಿಂದ ಬೇಗ ಏಳುತ್ತೇನೆ.”

"ನಿತ್ಯ ನಿನ್ನದು ಇದೇ ಪುರಾಣ. ರಾತ್ರಿಯೆಲ್ಲಾ ಗೊರಕೆ ಹೊಡೆಯುತ್ತೀ–ಬೆಳಿಗ್ಗೆಯಲ್ಲಾ ನಿದ್ರೆ ಮಾಡುತ್ತೀ–ಇನ್ನೂ ನಿದ್ರೆ ಸಾಲದೇ ?"

"ಈ ಸಲ ನಾನು ಕಾಹಿಲೆ ಬಿದ್ದೆದ್ದ ಮೇಲೆ ತುಂಬ ನಿಶ್ಶಕ್ತಿಯಾಗಿದೆ. ನಿದ್ರೆ ಸರಿಯಾಗಿ ಬರುವುದಿಲ್ಲ."

"ಇನ್ನಷ್ಟು ಸೇಂದಿ ಕುಡಿ, ನಿದ್ರೆ ಹತ್ತುತ್ತದೆ. ಶೀಷೆ ನೋಡಿದರೆ ಅನಗೆ ಮೈಮೇಲೆ ಪರಿಷೆಯೇ ಹೋಗಿಬಿಡುತ್ತದೆ."

"ಇಲ್ಲಾ ಮುತ್ತಾ–ಕಾಫಿ ನೀರು ಕಾಯಿತೇನು ನೋಡು."

ಮರಳುತ್ತಿದ್ದ ನೀರಿಗೆ ಮೂರು ಚಮಚ ಪುಡಿ, ಸಕ್ಕರೆ ಹಾಕಿ ಮುತ್ತಮ್ಮ ಕಾಫಿ ಕಷಾಯ ಕೆಳಗಿಳಿಸಿದಳು. ಒಲೆಯ ಮೇಲೆ ಹಾಲಿಟ್ಟು ಶೋಧಿಸಿದ ಕಷಾಯ ಅದಕ್ಕೇ ಹಾಕಿ ಬಿಸಿಮಾಡಿ

"ಪುಟ್ಟನ್ನ ಕರಿ" ಎಂದಳು.

ನಾಗರಾಜ ಕುಳಿತಿದ್ದ ಕಡೆಯಿಂದಲೇ 'ಪುಟ್ಟಾ, ಪುಟ್ಟಾ' ಎಂದು ಕೂಗಿದ. ಪುಟ್ಟ ನಾಯಿಯನ್ನೆತ್ತಿಕೊಂಡು ಅಡಿಗೆ ಮನೆಗೆ ಬಂದಳು.

"ಟೈಗರನ್ನ ಹೊರಗೆ ಸಾಗಿಸೇ – ಅಡಿಗೆಮನೆಗೆ ಬರೋ ಅಭ್ಯಾಸ ಮಾಡಿಸಬೇಡ."

ಎಂದು ಮುತ್ತಮ್ಮ ಗರ್ಜಿಸಿದಳು. ಪುಟ್ಟ ಮರುಮಾತಾಡದೆ ನಾಯಿಯನ್ನೆತ್ತಿಕೊಂಡು ಹೊರಗೆ ಕಟ್ಟಿಬಂದಳು.

ಮುತ್ತಮ್ಮ ಕಾಫಿಯನ್ನು ಮೂರು ಲೋಟಕ್ಕೆ ಹಾಕಿ ನಾಗರಾಜ, ಪುಟ್ಟಿಗೆ ಕೊಟ್ಟು ತಾನು ಕುಡಿದಳು.

"ಹಾಲು ಕೊಡುತ್ತೀಯಾ, ಹೋಗಿಬರುತ್ತೇನೆ." ಎಂದ ನಾಗರಾಜ.

ಮುತ್ತಮ್ಮ ಅರ್ಧ ಸೇರು ಹಾಲಿಗೆ ಅರ್ಧ ಸೇರು ನೀರು ಹಾಕಿ ಹಿಡಿಯುವ ಒಂದು ಡಬ್ಬಕ್ಕೆ ಅದನ್ನು ಸುರಿದು ನಾಗರಾಜನ ಕೈಗಿತ್ತಳು.

ನಾಗರಾಜ ಬೈಸಿಕಲ್ಲನ್ನು ಹೊರಗಿಟ್ಟುಕೊಂಡು, ಹಾಲಿನ ಡಬ್ಬ ತೆಗೆದುಕೊಂಡು ಹೋಗುವುದಕ್ಕೆ ಒಳಕ್ಕೆ ಬಂದ. ಪುಟ್ಟ ಅವನ ಬಳಿ ಬಂದು

"ಅಣ್ಣಯ್ಯ–ನನಗೆ ಚಾಕಲೇಟು" ಎಂದಳು.

"ಆಗಲಿ."

"ಆಗಲಿಯೆಂತೀ. ಮರೆತುಬಿಡ್ತೀ."

"ಇಲ್ಲಾ ಪುಟ್ಟಾ. ಮರೆಯುವುದಿಲ್ಲ."

"ಇವತ್ತು ನೀನು ಮರೆತರೆ ನಾನು ನಿನ್ನ 'ಅಣ್ಣಯ್ಯ' ಎಂದು ಕೂಗುವುದೇ ಇಲ್ಲ ನೋಡು."

"ಇನ್ನೇನೆಂದು ಕೂಗುತ್ತೀ ?"

"ಏನೂ ಕೂಗುವುದಿಲ್ಲ. ಮಾತೇ ಆಡುವುದಿಲ್ಲ."

"ಹಾಗೆ ಮಾಡಬೇಡಮ್ಮ."

ಮುತ್ತಮ್ಮ ಅವರಿಬ್ಬರ ಸರಸ ಪ್ರಲಾಪ ಕಂಡು

"ಸಾಕು ನಡೀಯೋ–ವರ್ತನೆ ಮನೆಯವರು ಶಂಖ ಹೊಡೆಯುತ್ತಿರು ತ್ತಾರೆ. ಇವಳ ಹತ್ತಿರ ಏನು ಹರಟೆ"

ಎಂದು ಗದರಿಸಿದಳು.

"ಬರೋವಾಗ ಏನಾದರೂ ಪೇಟೆಯಿಂದ ತರಬೇಕೇ ಮುತ್ತಾ"

ಎಂದು ನಾಗರಾಜ ಕೇಳಿದ.

"ಮೊಟ್ಟೆ, ಹಸೀ ಮೆಣಸಿನಕಾಯಿ, ಕೊತ್ತುಂಬರಿ ಸೊಪ್ಪು, ಈರುಳ್ಳಿ ತೆಗೆದುಕೊಂಡು ಬಾ."

"ಸಾಯಂತ್ರ ದೋಸೆಮಾಡ್ತೀಯೇನೆ ಅಮ್ಮ"

ಎಂದು ಪುಟ್ಟಿ ಕೇಳಿದಳು.

"ಹೂ – ಮಾಡ್ತೇನೆ"

"ಅಮ್ಮ ದೋಸೆ ಮಾಡ್ತಾಳೆ. ದೋಸೆ"

ಎಂದು ಸಂತೋಷದಿಂದ ಪುಟ್ಟಿ ಚಪ್ಪಾಳೆ ತಟ್ಟಿಕೊಂಡು ಕುಣಿ ದಾಡಿದಳು.

"ಬರುವಾಗ ಹಾಗೇ ಚಾಮರಾಜಪೇಟೆಗೆ ಹೋಗಿ ವೆಂಕಟಮ್ಮನ್ನ ಬಾ ಅನ್ನು."

"ಕಮಲಾ ಬರ್ತಾಳೇನೋ ?"

"ಬರ್ತಾಳೋ ಇಲ್ಲವೋ. ಅವಳದು ಯಾವ ನೆಚ್ಚಿಗೆ. ವೆಂಕಟೇನ ಬಾ ಅನ್ನೋ ?"

"ಬಂದು ಖಾಲಿ ಹೋಗಬೇಕಲ್ಲಾ ಎಂದವಳು ಬಡಕೋತಾಳೆ."

"ಹೇಳಿದಷ್ಟು ಮಾಡೋ ನಾಗರಾಜ. ಅತಿ ಮಾತಾಡಬೇಡ."

ನಾಗರಾಜ ಉಸಿರೆತ್ತಲಿಲ್ಲ. ಹಾಲಿನ ಡಬ್ಬ ಕೈಯಲ್ಲಿ ಹಿಡಿದು ಬೈಸಿಕಲ್ ಹತ್ತಿ ಹೊರಟುಬಿಟ್ಟ.

ಮುತ್ತಮ್ಮನಿಗೆ ಪುರಸತ್ತೇ ಇಲ್ಲ. ದನದ ಕೊಟ್ಟಿಗೆ ಶುಚಿಮಾಡಿ, ಸಾಯಿವ್ವೆ ತೊಳೆದು, ಮನೆ ಗುಡಿಸಿಕೊಂಡು, ಅಡಿಗೆಗೆ ಒಲೆ ಹೊತ್ತಿಸುತ್ತಿದ್ದಳು.

ಅಡಿಗೆ, ಊಟ ನಿತ್ಯ ಒಂದು ಗಂಟೆಗೆ ಮುಂಚೆಯಾಗುತ್ತಿರಲಿಲ್ಲ. ಪುಟ್ಟಿ ಹಸಿವೆಂದರೆ ಅವಳ ಕೈಯಲ್ಲೇ ಹೋಟೆಲಿನಿಂದ ನಾಲ್ಕು ಇಡ್ಲಿ ತರಿಸಿ ಅವಳಿಗೂ ಇತ್ತು ತಾನೂ ತಿಂದು ಕೂಡುತ್ತಿದ್ದಳು.

ನಿತ್ಯ ಸ್ನಾನಕ್ಕೆ ಒಲೆ ಹಚ್ಚುವ ಪರಿಪಾಠ ಮುತ್ತಮ್ಮನ ಮನೆಯಲ್ಲಿರಲಿಲ್ಲ. ವಾರಕ್ಕೆ ಎರಡು ಅಥವಾ ಮೂರು ಬಾರಿ ಅವಳೂ, ಪುಟ್ಟಿ, ನಾಗರಾಜ ಸ್ನಾನಮಾಡಿದರೆ ಹೆಚ್ಚು.

ಮುತ್ತಮ್ಮನಿಗೆ ನಲವತ್ತು ವರ್ಷ ದಾಟಿತ್ತು. ಅವಳನ್ನು ಎಂಥ ಎಂಥ ರಸಿಕನೂ ಸುಂದರಿಯೆಂದು ಕರೆಯಲು ಸಾಧ್ಯವಾಗಿರಲಿಲ್ಲ. ತಾರುಣ್ಯದಲ್ಲಿಯೂ ಮುತ್ತಮ್ಮ ಸುಂದರಿಯೆನಿಸಿಕೊಂಡಿರಲಿಲ್ಲ. ಮುಖ ತಕ್ಕ ಮಟ್ಟಿಗೆ ಲಕ್ಷಣವಾಗಿತ್ತು. ಕಣ್ಣು ಮೂಗು ನೇರವಾಗಿದ್ದವು. ಆದರೆ ಮುಂದೆ ಚಾಚಿದ್ದ ದಂತಪಂಕ್ತಿ ಅವಳ ಮುಖದ ಮಾಟವನ್ನು ಕೆಡಿಸಿತ್ತು. ಮುತ್ತಮ್ಮನ ಕೇಶರಾಶಿ ಮಾತ್ರ ಅಸೂಯೆ ಹುಟ್ಟಿಸುವ ಹಾಗಿತ್ತು. ಆ ಇಳಿ ವಯಸ್ಸಿನಲ್ಲಿಯೂ ಅವಳ ತಲೆಗೂದಲು ರಾಶಿರಾಶಿಯಾಗಿ ಹಿಮ್ಮಡಿ ಮುಟ್ಟುತ್ತಿತ್ತು. ತಲೆಗಂಟು ಒಂದು ಮೂಟೆಯಷ್ಟಾಗುತ್ತಿತ್ತು.

ಮುತ್ತಮ್ಮ ಸ್ವಭಾವತಃ ಕೆಡುಕಿಯಲ್ಲ, ಸಿಡುಕಿ. ಬಹಳ ದಿವಸಗಳಿಂದ ವಾತರೋಗ (Rhuematism) ಅವಳನ್ನು ಹಿಂಡಿ ಹಾಕಿತ್ತು. ಚಳಿಗಾಲ ಬಂದರೆ ಅವಳ ಪಾಡುಬೇಡ. ರಾತ್ರಿಯೆಲ್ಲಾ ನೀಲಗಿರಿ ಎಣ್ಣೆ ಉಜ್ಜಿಸಿಕೊಂಡು, ಬಿಸಿನೀರಿನ ಕಾವುಟ ಕೊಡಿಸಿಕೊಂಡು ನರಕಯಾತನೆ ಅನುಭವಿಸುತ್ತಿದ್ದಳು. ಅವಳ ಯಾತನೆಗೆ ವಾಸವಾಗಿದ್ದ ಮನೆ, ನಾಗರಾಜನ ನಡವಳಿಕೆ ಎರಡೂ ಕಾರಣವಾಗಿದ್ದವು.

ಮುತ್ತಮ್ಮ ವಾಸವಾಗಿದ್ದುದು ಬಸವನಗುಡಿಯ ಕೊಟ್ಟಕೊನೆಯಲ್ಲಿ ಸುಂಕೇನಹಳ್ಳಿ ಸಮೀಪದಲ್ಲಿ. ಬೆಂಗಳೂರು ವಿಸ್ತರಿಸುತ್ತಾ ವಿಸ್ತರಿಸುತ್ತಾ ಸುತ್ತಮುತ್ತಲಿನ ಹಳ್ಳಿಗಳನ್ನೆಲ್ಲಾ ಏಕಾಪೋಶನ ತೆಗೆದುಕೊಳ್ಳುತ್ತಿತ್ತು.

ಕೆರೆ ಕುಂಟೆಗಳೆಲ್ಲಾ ಸೈಟುಗಳಾದವು. ಹೊಲಗದ್ದೆಗಳೆಲ್ಲಾ ವಾಸದ ಮನೆಗಳಾದವು.

ಮುತ್ತಮ್ಮನ ಮನೆ ಮಾಲಿಕ ಕಸಾಯಿ ಅಂಗಡಿ ಗುಜ್ಜಪ್ಪ. ಸುಂಕೇನಹಳ್ಳಿ ಸಮೀಪದಲ್ಲಿ ಅವನಿಗೆ ಸ್ವಲ್ಪ ರೆವಿನ್ಯೂಭೂಮಿ ಇತ್ತು. ಅದನ್ನು ಮುನಿಸಿಪಲ್ ಭೂಮಿಯಾಗಿ ಮಾರ್ಪಡಿಸಿ, ಬಾಡಿಗೆಗೆ ಕೊಡುವುದಕ್ಕೆ ಕೆಲವು ಮನೆಗಳನ್ನು ಕಟ್ಟಿಸಿದ್ದ. ಮುತ್ತಮ್ಮ ವಾಸವಾಗಿದ್ದ ಮನೆ ಮೊದಲು ಗುಜ್ಜಪ್ಪ ವಾಸಿಸುತ್ತಿದ್ದುದು. ಹೊಸಮನೆಗಳು ಕಟ್ಟಿಯಾದಮೇಲೆ ಅವುಗಳಲ್ಲಿ ಒಂದಕ್ಕೆ ತಾನು ವಾಸಹೋಗಿ ತನ್ನ ಮನೆಯನ್ನು ಬಾಡಿಗೆಗೆ ಕೊಟ್ಟಿದ್ದ.

ಗುಜ್ಜಪ್ಪನಿಗೆ ಕಸಾಯಿ ಅಂಗಡಿ ಸಂಪಾದನೆಯಲ್ಲದೆ ಮನೆಬಾಡಿಗೆ ಸಂಪಾದನೆಯೂ ಆಗುತ್ತಿತ್ತು. ಇವುಗಳ ಜತೆಗೆ ಎಂಟು ಎಮ್ಮೆ, ಆರು ಹಸು ಸಾಕಿಕೊಂಡು ಹಾಲಿನ ವ್ಯಾಪಾರವನ್ನೂ ಮಾಡುತ್ತಿದ್ದ. ಮುತ್ತಮ್ಮ ಮನೆಯಲ್ಲಿದ್ದ ಎಮ್ಮೆಯನ್ನು ಅವನಿಂದಲೇ ಇನ್ನೂರು ರೂಪಾಯಿಗೆ ಕೊಂಡಿದ್ದಳು.

ಮುತ್ತಮ್ಮ ಬಹಳ ಕಷ್ಟಪಟ್ಟು ಆ ಮನೆ ದೊರಕಿಸಿಕೊಂಡಿದ್ದಳು. ಪ್ರದೇಶ ಜೌಗಾಗಿದ್ದುದರಿಂದ ಚಳಿಗಾಲ, ಮಳೆಗಾಲಗಳಲ್ಲಿ ಮನೆ ಭತ್ತದ ಗದ್ದೆಯಾಗುತ್ತಿತ್ತು. ಮುನಿಸಿಪಲ್ ರಸ್ತೆಗೆ ಮನೆ ಸ್ವಲ್ಪ ದೂರವಾಗಿತ್ತು. ಸರಿಯಾದ ರಸ್ತೆಯಿರಲಿಲ್ಲ. ಬರುವವರು ಹೋಗುವವರು ಕೊಚ್ಚೆಯಲ್ಲಿಯೇ ಈಜಾಡಿಕೊಂಡು ಹೋಗಬೇಕಾಗಿತ್ತು. ಎಲೆಕ್ಟ್ರಿಕ್ ಲೈನು ದೂರವಿದ್ದುದರಿಂದ ತಾನೇ ಕಂಬ ನೆಡಿಸಿ, ತಂತೀ ಹಾಕಿಸಿ ದೀಪ ತೆಗೆದುಕೊಳ್ಳುವುದಕ್ಕೆ ಗುಜ್ಜಪ್ಪ ಪ್ರಯತ್ನಿಸಿರಲಿಲ್ಲ. ಮುತ್ತಮ್ಮ ಸೀಮೆಎಣ್ಣೆ ದೀಪದಲ್ಲಿಯೇ ಕಾಲ ಹಾಕಬೇಕಾಗಿತ್ತು.

ಇಷ್ಟು ಹೊಲಸು, ಕೊಳಕು, ಅನಾರೋಗ್ಯದಲ್ಲಿ ಮುತ್ತಮ್ಮ ಬಾಳುವೆ ನೂಕುವುದು ಅವಳ ಜಾಯಮಾನವಾಗಿರಲಿಲ್ಲ. ಆದರೆ ಪರಿಸ್ಥಿತಿ ಅವಳಿಗೆ ಸಹನೆಯನ್ನು ತಂದುಕೊಟ್ಟಿತ್ತು. ನಾಗರಾಜನಿಗೆ ಒಂದು ದಾರಿ ತೋರಬೇಕೆಂದು ಅವಳು ವಿಶ್ವಪ್ರಯತ್ನ ಮಾಡಿದ್ದಳು. ಅವನು ಎಲ್ಲಿಯೂ ಅಂಟಿಕೊಳ್ಳದೆ ಹೋದ ಹೋದ ಕಡೆ ಕೆಟ್ಟ ಹೆಸರು ಸಂಪಾದಿಸಿಕೊಂಡು ಹೊರಬಂದಿದ್ದ. ಮುತ್ತಮ್ಮ ಅದನ್ನೂ ಮನಸ್ಸಿಗೆ ಹಚ್ಚಿಕೊಂಡಿರಲಿಲ್ಲ. ಆದರೆ

ನಾಗರಾಜನ ವಿಚಿತ್ರ ಸ್ವಭಾವ, ಚಂಚಲತೆ ಅವಳ ಯೋಚನೆಗೆ ಕಾರಣವಾಗಿ ಅವಳ ರಕ್ತವನ್ನು ಒಣಗಿಸುತ್ತಿತ್ತು. ರಾತ್ರಿ ಹಗಲು ಅವಳಿಗೆ ಅದೇ ಚಿಂತೆಯಾಗಿತ್ತು.

ಮುತ್ತಮ್ಮನಿಗೂ ನಾಗರಾಜನಿಗೆ ಋಣಾನುಬಂಧ ಬೆಳೆದು ಐದು ವರ್ಷಗಳಾಗಿದ್ದವು. ನಾಗರಾಜನ ಸಮಸ್ತ ಕಷ್ಟ ಸುಖವನ್ನೂ ಮುತ್ತಮ್ಮನೇ ನೋಡಿಕೊಂಡು ಹೋಗುತ್ತಿದ್ದಳು. ಅದಕ್ಕೆ ಪ್ರತಿಯಾಗಿ ಅವನಿಂದ ವಿಶ್ವಾಸ, ಸೇವೆಗಳನ್ನು ನಿರೀಕ್ಷಿಸುತ್ತಿದ್ದಳು.

ನಾಗರಾಜ ಮುತ್ತಮ್ಮನ ಮೇಲೆ ಅವಲಂಬಿಸಬೇಕಾಗಿರಲಿಲ್ಲ. ಅವನ ಮಾವನವರು ವಿಶ್ವನಾಥಯ್ಯ ರೆವಿನ್ಯೂ ಸೆಕ್ರೆಟೇರಿಯಟ್ಟಿನಲ್ಲಿ ಗುಮಾಸ್ತರಾಗಿದ್ದರೂ ತುಂಬ ಪ್ರಭಾವಶಾಲಿಗಳಾಗಿದ್ದರು. ತಮ್ಮ ಒಬ್ಬಳೇ ಮಗಳು ಸುನಂದೆಯನ್ನು ನಾಗರಾಜನಿಗೆ ಕೊಟ್ಟು ಮದುವೆಮಾಡಿ ಅಳಿಯ, ಮಗಳನ್ನು ಮನೆಯಲ್ಲಿಯೇ ಇಟ್ಟುಕೊಂಡು ಸಾಕುತ್ತಿದ್ದರು.

ವಿಶ್ವನಾಥಯ್ಯ ತಮ್ಮ ಸ್ನೇಹಿತರೊಬ್ಬರಿಗೆ ಹೇಳಿಕೊಂಡು ಅವರ ಜವಳಿ ಅಂಗಡಿಯಲ್ಲಿ ನಾಗರಾಜನಿಗೆ ಒಂದು ಕೆಲಸ ಮಾಡಿಸಿಕೊಟ್ಟಿದ್ದರು. ಕೆಲಸವಾದ ಮೂರೇ ತಿಂಗಳಿಗೆ ನಾಗರಾಜ ಅಂಗಡಿ ಬಿಟ್ಟು ಹೊರಗೆ ಬರಬೇಕಾಗಿ ಬಂತು. ಅಂಗಡಿಯಲ್ಲಿದ್ದ ಸೀರೆ, ಕಣ, ಸಿಲ್ಕುಬಟ್ಟೆ ಇದ್ದಕ್ಕಿದ್ದಂತೆ ಮಾಯವಾಗುತ್ತಿತ್ತು. ನಾಗರಾಜನ 'ಕೈ ಚಳಕ' ಪತ್ತೆಯಾಗಿ ಅಂಗಡಿ ಯಜಮಾನರು ಅವನಿಗೆ ಅಪ್ಪಣೆ ಚೀಟಿ ದಯಪಾಲಿಸಿದ್ದರು. ಅಲ್ಲಿಂದ ಮುಂದೆ ಅಳಿಯನಿಗೆ ಕೆಲಸ ಮಾಡಿಸಿಕೊಡುವ ಜವಾಬ್ದಾರಿ ವಿಶ್ವನಾಥಯ್ಯ ಹೊತ್ತುಕೊಳ್ಳಲಿಲ್ಲ. 'ಮನೆಯಲ್ಲಿ ತಿಂದುಕೊಂಡು ಬಿದ್ದಿರು' ಎಂದು ಹೇಳಿ ಸಮಾಧಾನ ತಂದುಕೊಂಡಿದ್ದರು.

ನಿರುದ್ಯೋಗಿಯಾಗಿದ್ದ ನಾಗರಾಜನಿಗೆ ಅಕ್ಕಪಕ್ಕದವರ ಮನೆಗೆ ಹೋಗಿ ಕುಳಿತು ಹರಟೆಕೊಚ್ಚಿ ಬರುವುದು ತುಂಬ ಪ್ರಿಯವಾಗಿತ್ತು. ಮುತ್ತಮ್ಮ ವಿಶ್ವನಾಥಯ್ಯನವರ ಮನೆಗೆ ಮೂರನೆಯ ಮನೆಯಲ್ಲಿ ವಾಸಿಸುತ್ತಿದ್ದಳು. ವಿಶ್ವನಾಥಯ್ಯನವರ ಮನೆಗೆ ಹೋಗಿ ಬರುವ ರೂಢಿಯೂ ಇತ್ತು.

ಯಾವದೋ ವಿಷಗಳಿಗೆಯಲ್ಲಿ ಮುತ್ತಮ್ಮ ನಾಗರಾಜರ ಪರಿಚಯ, ಸ್ನೇಹವಾಯಿತು. ಮುತ್ತಮ್ಮನ ಮನೆಗೆ ಅರ್ಧಗಂಟೆ ಹೋಗಿ ಕುಳಿತು

ಬರುತ್ತಿದ್ದ ನಾಗರಾಜ ಅವಳ ಮನೆಯಲ್ಲಿ ಗಂಟೆ ಗಂಟೆಗಳನ್ನು ಕಳೆಯ ಲಾರಂಭಿಸಿದ.

ಬಹಳ ದಿವಸದವರೆಗೆ ಈ ಗುಟ್ಟು ಹೊರಬೀಳಲಿಲ್ಲ. ವಿಶ್ವನಾಥಯ್ಯ ನವರ ಹೆಂಡತಿ ಸುಬ್ಬಮ್ಮ ಗಂಡನಿಗೆ ಇದನ್ನು ಪರ್ಯಾಯವಾಗಿ ಸೂಚಿಸಿ ದ್ದರು. ತಮ್ಮ ಅನುಮಾನವನ್ನು ವ್ಯಕ್ತಪಡಿಸಿದ್ದರು. ಮಗಳಿಗೆ ಬಂದೊದ ಗಿದ ಆಪತ್ತನ್ನು ನೆನೆದು ಹಗಲಿರುಳು ಕಣ್ಣೀರು ಸುರಿಸಿದ್ದರು. ವಿಶ್ವನಾಥಯ್ಯ ಹೆಂಡತಿಯ ಮಾತನ್ನು ಕಿವಿಯಮೇಲೆ ಹಾಕಿಕೊಳ್ಳಲಿಲ್ಲ.

"ಮನೇಲಿ ಚಿನ್ನದಗೊಂಬೆ ಹಾಗಿರೋ ಹೆಂಡತಿಯನ್ನು ಬಿಟ್ಟುಬಿಟ್ಟು ಆ ಮುದಿಹೆಂಕನ ಸಹವಾಸ ಮಾಡ್ತಾನೇನೇ?"

ಎಂದು ಸುಬ್ಬಮ್ಮನವರ ಬಾಯಿ ಬಡಿದಿದ್ದರು.

ಹೆಂಡತಿಯ ಬಾಯಿ ಬಡಿಯಲು ವಿಶ್ವನಾಥಯ್ಯನವರಿಗೆ ಎಷ್ಟು ಸುಲಭ ಸಾಧ್ಯವಾಯಿತೋ, ನೆರೆಹೊರೆಯವರ ಬಾಯಿ ಬಡಿಯಲು ಅಷ್ಟು ಸುಲಭ ಸಾಧ್ಯವಾಗಲಿಲ್ಲ. ನೆರೆಹೊರೆಯವರು ಬಂದು ಮುತ್ತಮ್ಮನ ಶೃಂಗಾರ ಲೀಲೆ ಗಳನ್ನು ಸಾದ್ಯಂತವಾಗಿ ವಿಶ್ವನಾಥಯ್ಯನವರಿಗೆ ವರದಿಮಾಡಲಾರಂಭಿಸಿದರು.

ವಿಶ್ವನಾಥಯ್ಯ ಸುಮ್ಮನೆ ಕೂಡುವುದಕ್ಕಾಗಲಿಲ್ಲ. ಒಂದು ದಿನ ಮುತ್ತಮ್ಮನನ್ನು ಮನೆಗೆ ಕರೆಸಿ ಚೆನ್ನಾಗಿ ಛೀಮಾರಿ ಮಾಡಿದರು. ಮುತ್ತಮ್ಮ ದಿಟ್ಟತನದಿಂದ ಎಲ್ಲ ಆಪಾದನೆಗಳನ್ನೂ ನಿರಾಕರಿಸಿ, ತನಗೂ ನಾಗರಾಜನಿಗೂ ಯಾವ ಸಂಬಂಧವೂ ಇಲ್ಲವೆಂದು ಸಾಧಿಸಿದಳು.

ಮಾತು ಇಷ್ಟುದೂರ ಬೆಳೆದಮೇಲೆ ವಿಶ್ವನಾಥಯ್ಯ ಮತ್ತು ನೆರೆಹೊರೆ ಯವರು ತನ್ನನ್ನು ಅಲ್ಲಿ ಬಾಳಿಸುವುದಿಲ್ಲವೆಂದು ಮುತ್ತಮ್ಮ ತಿಳಿದುಕೊಂಡು ಬಸವನಗುಡಿ ಮೂಲೆಯಲ್ಲಿ ಬೇರೆ ಮನೆ ಹುಡುಕಿಕೊಂಡು ಒಂದು ದಿನ ಹೊರಟು ಹೋದಳು.

ಅವಳ ಹಿಂದೆ ನಾಗರಾಜನೂ ಹೋದ.

ಈ ಪರಿಸ್ಥಿತಿಯನ್ನು ಹೇಗೆ ಎದುರಿಸಬೇಕೆಂಬುದು ವಿಶ್ವನಾಥಯ್ಯನವರಿಗೆ ಮಹಾ ಸಮಸ್ಯೆಯಾಯಿತು. ಮುತ್ತಮ್ಮ ದಾರಿಗೆ ಬರುವಂತಿರಲಿಲ್ಲ. ಅಲ್ಲದೆ ಅವಳು ಮೂರೂ ಬಿಟ್ಟು ನಿಂತ ಹೆಂಗಸು. ಅವಳನ್ನು ಕೆಣಕುವುದೆಂದರೆ ರಾಡಿಯ ಮೇಲೆ ಕಲ್ಲೊಗೆದಂತೆ! ಯಾವ ವ್ಯಾಮೋಹ ಕಾಡುತ್ತಿತ್ತೋ!

ನಾಗರಾಜ ಅವಳ ಸಹವಾಸ ಬಿಡಲೊಲ್ಲ. ಅಳಿಯನಿಗೆ ಒತ್ತಿ ಹೇಳಿದರೆ ಉಳಿದಿದ್ದ ಅಲ್ಪ ಸ್ವಲ್ಪ ಮಧುರ ಸಂಬಂಧ ಸಂಪೂರ್ಣವಾಗಿ ನೀಗಿ ಹೋಗುವ ಸಂಭವ.

ವಿಶ್ವನಾಥಯ್ಯನಿಗೆ ದಾರಿ ತೋರಲಿಲ್ಲ. 'ಮಗಳ ತಲೆಯ ಮೇಲೆ ನಾನೇ ಕಲ್ಲು ಎತ್ತಿ ಹಾಕಿದೆನಲ್ಲಾ' ಎಂದು ಕೊರಗಲಾರಂಭಿಸಿದರು.

ನಾಗರಾಜ ಎರಡು ದಿನ ಮೂರು ದಿನಕ್ಕೊಮ್ಮೆ ಮನೆಗೆ ಬಂದು ಮುಖ ತೋರಿಸುತ್ತಿದ್ದ. ಬಂದವನು ಹೆಂಡತಿಯೊಡನೆ ಸರಿಯಾಗಿ ಮಾತನಾಡುತ್ತಿರಲಿಲ್ಲ. ಸ್ನಾನಮಾಡಿ ಬಟ್ಟೆ ಬದಲಾಯಿಸಿಕೊಂಡು, ಊಟದ ಶಾಸ್ತ್ರ ಮುಗಿಸಿ ಮತ್ತೆ ಹೊರಗೆ ಹೊರಟು ಬಿಡುತ್ತಿದ್ದ.

ಅವನಿಗಿದ್ದುದು ಒಂದೇ ನೆಲೆ–ಮುತ್ತಮ್ಮನ ಮನೆ.

ವಿಶ್ವನಾಥಯ್ಯನವರಿಗೆ ನೋಡಿ ನೋಡಿ ಸಾಕಾಗುತ್ತ ಬಂತು. ನಾಗರಾಜನಿಗೆ ಪರಿಚಯವಿದ್ದವರಿಗೆ ಹೇಳಿಕೊಂಡು ಅವನಿಗೆ ಉಪದೇಶ ಕೊಡಿಸಿ ನೋಡಿದರು; ಮುತ್ತಮ್ಮನಲ್ಲಿಗೆ ರಾಯಭಾರಿಗಳನ್ನು ಕಳುಹಿಸಿ ಅವಳಿಗೆ ಉಪದೇಶ ಕೊಡಿಸಿ ನೋಡಿದರು. ಏನೂ ಪ್ರಯೋಜನವಾಗಲಿಲ್ಲ.

ಈ ಗಂಡನನ್ನು ನಂಬಿಕೊಂಡು ಮಗಳು ಬದುಕುವುದು ಸಾಧ್ಯವಿಲ್ಲವೆಂದು ವಿಶ್ವನಾಥಯ್ಯನವರಿಗೆ ಖಚಿತವಾಯಿತು. ಸುನಂದೆಯನ್ನು ಮತ್ತೆ ಶಾಲೆಗೆ ಕಳುಹಿಸಿ ಅವಳಿಗೆ ವಿದ್ಯಾಭ್ಯಾಸ ಆರಂಭಿಸಿದರು.

ಮೈಯಲ್ಲಿ ಸರಿಯಿಲ್ಲವೆಂದು ಒಂದು ದಿನ ವಿಶ್ವನಾಥಯ್ಯ ಕಛೇರಿಯಲ್ಲಿ ಅರ್ಧ ದಿನ ಕೆಲಸಮಾಡಿ ಮೂರು ಗಂಟೆಗೆ ಮನೆಗೆ ಬಂದು ಮಲಗಿದರು. ಅವರು ಮನೆಗೆ ಬಂದಿರುವುದು ನಾಗರಾಜನಿಗೆ ಗೊತ್ತಿಲ್ಲ. ನಾಗರಾಜ ಬಂದ. ಅವನ ಧ್ವನಿ ಕೇಳಿದೊಡನೆಯೇ ವಿಶ್ವನಾಥಯ್ಯ ಕೆಣಕಿದ ಫಣಿಯಂತೆದ್ದು ಬಂದು

"ಏನು ಬಂದೆಯಯ್ಯಾ" ಎಂದು ಕೇಳಿದರು.

ಮಾವನವರಿಗೆ ಕೋಪಬಂದಿದೆಯೆಂದು ನಾಗರಾಜನಿಗೆ ಗೊತ್ತು. ಆದರೆ ಅವರ ಕೋಪತಾಪಕ್ಕೆ ಅವನು ಅಂಜುತ್ತಿರಲಿಲ್ಲ.

'ಬಟ್ಟೆ ಬೇಕಾಗಿತ್ತು–ಬಂದಿದ್ದೆ" ಎಂದು ಹೇಳಿದ.

'ನಿನ್ನ ಬಟ್ಟೆ ಏನೇನಿವೆ ಎಲ್ಲಾ ಗಂಟುಕಟ್ಟಿಕೋ."

## ನಗ್ನ ಸತ್ಯ

ನಾಗರಾಜ ಮಾವನವರ ಮುಖ ನೋಡಿದ.

"ಏನು ನೋಡುತ್ತಾ ನಿಂತಿರುವೆ. ಗಂಟು ಕಟ್ಟಿಕೊಂಡು ಹೊರಡು. ಇನ್ನು ಈ ಮನೆಗೆ ಕಾಲಿಡಬೇಡ. ನಿನಗೂ ಈ ಮನೆಗೂ ಇದ್ದ ಋಣಾನುಬಂಧ ಎಂದೋ ಹರಿದು ಹೋಯಿತು."

ನಾಗರಾಜ ಮರುಮಾತಾಡದೆ ಒಳಕ್ಕೆ ಬಂದು ತನ್ನ ಬಟ್ಟೆಯನ್ನೆಲ್ಲಾ ಗಂಟು ಕಟ್ಟಿ ಅತ್ತಿತ್ತ ನೋಡಿದ. ಸುನಂದ ಒಳಕ್ಕೆ ಸುಳಿಯದಿರಲು ಅವಳ ಎರಡು ಧರ್ಮಾವರದ ಸೀರೆ, ಪೆಟ್ಟಿಗೆಯಲ್ಲಿದ್ದ ಚಿನ್ನದ ಸರ ತನ್ನ ಗಂಟಿಗೆ ಸೇರಿಸಿದ.

ಒಳಗೆ ವಿಶ್ವನಾಥಯ್ಯನವರಿಗೆ ಸುಬ್ಬಮ್ಮನವರು ಸಮಾಧಾನ ಹೇಳುತ್ತಿದ್ದುದು ನಾಗರಾಜನಿಗೆ ಕೇಳಿ ಬಂತು. ಅವರ ಕಣ್ಣಿಗೆ ಬೀಳದೆ ನಾಗರಾಜ ನೊಪ್ಲಿನ ಮನೆಯಿಂದ ಜಾರಿಬಿಟ್ಟ.

ಅವನು ಹೊರಟು ಹೋದ ಸ್ವಲ್ಪ ಹೊತ್ತಿನ ಮೇಲೆ ವಿಶ್ವನಾಥಯ್ಯ, ಸುಬ್ಬಮ್ಮ ಒಳಗೆ ಬಂದು ನೋಡಿದರು. ಹಕ್ಕಿ ಹಾರಿ ಹೋಗಿತ್ತು.

"ಹೋಗು ಎಂದರೆ ಹೋಗೇಬಿಟ್ಟ ಭಡವಾ" ಎಂದರು.

"ಇನ್ನೇನು ಮಾಡಬೇಕಾಗಿತ್ತು. ನಿಮ್ಮ ಕೈಯಲ್ಲಿ ಬಯ್ಯಿಸಿಕೊಂಡು ಎದುರಿಗೇ ನಿಂತಿರಬೇಕಾಗಿತ್ತೇನು ?"

"ನೀನು ಅವನ ಪರ ವಾದ ಮಾಡಬೇಡ—ಹೋದರೆ ಹೋಗಲಿ. ಇರುವವಳು ಒಬ್ಬಳು ಮಗಳು. ಅವಳನ್ನೇ ಮಗನೆಂದು ಭಾವಿಸಿಕೊಂಡು ಬೆಳೆಸುತ್ತೇನೆ.'

"ಕೋಪ ಸ್ವಲ್ಪ ತಡೆದುಕೊಂಡಿದ್ದರೆ ಚೆನ್ನಾಗಿತ್ತು. ಇಂದಲ್ಲ ನಾಳೆ ಅವನಿಗೇ ಬುದ್ಧಿ ಬರುತ್ತಿತ್ತು."

"ಅವನಿಗೆ ಬುದ್ಧಿ ಬರೋದೂ ನನಗೆ ಪ್ರಾಯ ಬರೋದೂ ಒಂದೇ ಕಾಲಕ್ಕೆ."

ಎಂದು ಗೊಣಗುಟ್ಟಿದರು.

ರೂಮಿಗೆ ಹೋದ ಸುನಂದ ತನ್ನ ಸೀರೆ, ಚಿನ್ನದ ಸರ ಮಾಯವಾಗಿದ್ದುದನ್ನು ಕಂಡು

"ಅಮ್ಮಾ" ಎಂದು ರೋಧಿಸುತ್ತ ಬಂದಳು.

"ಏನಾಯ್ತೇ ಮಗೂ" ಎಂದು ವಿಶ್ವನಾಥಯ್ಯ ಕೇಳಿದರು.

"ನನ್ನ ಎರಡು ಧರ್ಮಾವರದ ಸೀರೆ-ಚಿನ್ನದ ಸರ...."

"ನೋಡು-ಅಲ್ಲೇ ಎಲ್ಲೋ ಇರಬೇಕು."

"ನೋಡಿದೆ ಅಣ್ಣಾ-ಬೆಳಿಗ್ಗೆ ತಾನೆ ನಾನೇ ತೆಗೆದಿಟ್ಟಿದ್ದೆ."

"ಹೋಯಿತೂಂದ್ರೆ ಏನಮ್ಮ. ಇದ್ದವರಲ್ಲಿ ಮೂವ್ವರಲ್ಲಿ ಕದ್ದವರು ಯಾರು ಎಂದ ಹಾಗೆ."

ಎಂದು ಮಗಳೊಂದಿಗೆ ರೂಮಿಗೆ ಬಂದು ತಾವೇ ಹುಡುಕಿದರು. ವಸ್ತುಗಳು ಕಣ್ಣಿಗೆ ಬೀಳಲಿಲ್ಲ. ವಿಶ್ವನಾಥಯ್ಯನವರು ಕಿಡಿಕಿಡಿಯಾಗಿ

"ಆ ಭಡವನ್ನ ಪೋಲೀಸಿಗೆ ಕೊಟ್ಟು ಬಿಡುತ್ತೇನೆ. ಅಳಿಯನಂತೆ ಅಳಿಯ-ಮನೆ ತೊಳೆಯ" ಎಂದು ಆರ್ಭಟಿಸಿದರು.

ಸುಬ್ಬಮ್ಮನವರು

"ಹೋಗಲಿ ಸುಮ್ಮನಿರೀಂದ್ರೆ. ಹಗಲು ಹಗರಣ ಏಕೆ ಮಾಡುವಿರಿ."

"ಏನೇ ಹೋಗೋದು! ಅದು ಕದ್ದದ್ದು ಕೆಟ್ಟದ್ದು ಅಲ್ಲ-ರಕ್ತ ಸುರಿಸಿ ಸಂಪಾದಿಸಿದ್ದು."

"ಪೋಲೀಸಿಗೆ ತಿಳಿಸಿ ಸುನಂದೆಯನ್ನು ಬೀದಿಗೆಳೆಯುವಿರಾ? ಈಗಾಗಲೇ ಮಗೂ ಅನುಭವಿಸಿರೋದು ಸಾಲದೇ?"

ಅಳಿಯನನ್ನು ಶಿಕ್ಷಿಸುವುದಕ್ಕೆ ಹೋಗಿ ಮಗಳಿಗೆ ಶಾಶ್ವತ ಅಪಕೀರ್ತಿಯನ್ನು ತಾವೇ ತಂದೊದಗಿಸುವ ವಿಷಯ ವಿಶ್ವನಾಥಯ್ಯನವರಿಗೆ ಹೊಳೆದಿರಲಿಲ್ಲ. ಏನು ಮಾಡಲಿಕ್ಕೂ ತೋರದೆ ದುಃಖಿಸುತ್ತ ಕುಕ್ಕರಿಸಿಬಿಟ್ಟರು.

ನಾಗರಾಜ ನೇರವಾಗಿ ಮುತ್ತಮ್ಮನ ಮನೆಗೆ ಓಡಿ ಸಂಭ್ರಮದಿಂದ

"ಮುತ್ತಾ-ಮುತ್ತಾ" ಎಂದು ಕೂಗಿದ.

ಮುತ್ತಮ್ಮ ಬಂದು ಎದುರಿಗೆ ನಿಂತಳು. ತನ್ನ ಗಂಟು ಇಳುಹಿ, ಅದರ ಒಳಗಿನಿಂದ ಸೀರೆ, ಒಡವೆ ತೆಗೆದು ಮುತ್ತಮ್ಮನ ಕೈಯಲ್ಲಿಟ್ಟ.

"ಎಲ್ಲಿ ಬಂತೋ ಇದು" ಎಂದು ಕೇಳಿದಳು.

"ಅವಳಿಗೆ ಕೊಟ್ಟಿದ್ದೆ, ತೆಗೆದುಕೊಂಡು ಬಂದೆ."

"ನಿಮ್ಮ ಮಾವ ಸುಮ್ಮನೆ ಇರುತ್ತಾನೇನೋ?"

"ಅವನದೇನೂ ಅಲ್ಲವಲ್ಲ. ಮಾವ, ಅಳಿಯನ ಕಥೆ ಮುಗಿಯಿತು

ಮುತ್ತಾ–ನಾನಿನ್ನು ಅಲ್ಲಿ ಕಾಲಿಕ್ಕುವುದಿಲ್ಲ. ಮಾವ ನನಗೆ ಬಹಳ ಅವಮಾನ ಮಾಡಿದ"

"ನಿನ್ನ ಮಾವನ ಪೋಲೀಸ್ ಕಂಪ್ಲೇಂಟ್ ಕೊಟ್ಟರೇನೋ ಮಾಡುವುದು."

"ಅಷ್ಟು ದೂರ ಹೋಗಲ್ಲ. ಹೋದರೆ ಅವನಿಗೇ ಅಪಮಾನ ನಾನು ಅವನ ಎದುರಿಗೇ ಹೊರಟು ಬಂದೆ."

"ಹೋಗಬೇಡ ಎಂದು ಕೇಳಿಕೊಳ್ಳಲಿಲ್ಲವೇ?"

"ಕೇಳಿಕೊಂಡ–ನೀನೆಷ್ಟು ನಿನ್ನ ಮನೆಯೆಷ್ಟು–ನಿನ್ನ ಮಗಳನ್ನ ನೀನೇ ಸಾಕಿಕೋ ಎಂದು ಹೇಳಿ ಹೊರಟು ಬಂದೆ."

"ಸತ್ಯ ಹೇಳುತ್ತಾ ಇದ್ದೀಯೇನೋ?"

"ನಿನ್ನಾಣೆಗೂ ಸತ್ಯ ಮುತ್ತಾ."

ಮುತ್ತಮ್ಮನಿಗೆ ಅತ್ಯಾನಂದವಾಯಿತು. ನಾಗರಾಜನಿಗೆ ವಿಶೇಷ ಉಪಚಾರ ಮಾಡಿದಳು. ಅವಳ ಪ್ರಿಯವಚನದಲ್ಲಿ ನಾಗರಾಜನಿಗೆ ಸ್ವರ್ಗವೇ ಕಂಡಿತು.

ಬಹಳ ದಿವಸ ಮುತ್ತಮ್ಮ ನಾಗರಾಜನನ್ನು ಕೂಡಿಸಿ ಪೂಜೆ ಮಾಡಲಿಲ್ಲ. ಒಂದೊಂದಾಗಿ ಮನೆಗೆಲಸ ಅವನಿಗೆ ಅಂಟಿಸುತ್ತ ಬಂದಳು. ವಾಯುನೋವು ಹೆಚ್ಚಾಗಿ ಅವಳ ಮೊಣಕಾಲು ಊದಿಕೊಂಡ ದಿವಸ ಅಡಿಗೆ ಕೆಲಸ ನಾಗರಾಜನೇ ನಿರ್ವಹಿಸಬೇಕಾಗಿತ್ತು. ಮುತ್ತಮ್ಮನ ಮನೆಯಲ್ಲಿ ನಲ್ಲಿಯಿರಲಿಲ್ಲ. ಸುಮಾರು ಒಂದು ಫರ್ಲಾಂಗು ದೂರದಲ್ಲಿ ರಸ್ತೆ. ರಸ್ತೆಯಲ್ಲಿದ್ದ ಮುನಿಸಿಪಲ್ ನಲ್ಲಿಯಿಂದ ಕುಡಿಯುವ ನೀರು ಹೊರಬೇಕಾಗಿತ್ತು. ನಾಗರಾಜನಿಗೆ ಆ ಕೆಲಸ ವಿಧಾಯಕವಾಯಿತು.

ಪುಟ್ಟನ ಯೋಗಕ್ಷೇಮ ನೋಡಿಕೊಳ್ಳುವ ಜವಾಬ್ದಾರಿಯೂ ನಾಗರಾಜನ ಮೇಲೇ ಬಿತ್ತು. ಅವಳನ್ನು ಬೇಗ್ಗೆ ಎಬ್ಬಿಸಿ ಹಲ್ಲು ಉಜ್ಜಿ, ಮುಖ ತೊಳೆದು, ಬಟ್ಟೆ ಬದಲಾಯಿಸಿ ಅವಳನ್ನು ಹೊರಗೆ ಕರೆದುಕೊಂಡು ಹೋಗಿ ತಿರುಗಾಡಿಸಿಕೊಂಡು ಬರುವ ಕೆಲಸವೂ ನಾಗರಾಜನದೇ ಆಗಿತ್ತು.

ಮುತ್ತಮ್ಮನ ಮನೆಯ ಜೀವನ ನಾಗರಾಜನ ಮೈಗೆ ಚೆನ್ನಾಗಿ ಅಂಟಿತ್ತು. ಅವಳ ಮನೆಯ ಕೆಲಸಕಾರ್ಯ, ಅವಳ ವೃತ್ತಿಗೆ ಸಂಬಂಧಪಟ್ಟ

ಕೆಲಸಕಾರ್ಯ ನಿರ್ವಹಿಸುವುದು ಅವನಿಗೆ ಅಗೌರವವೆನಿಸಿರಲಿಲ್ಲ. ಆ ಜೀವನದಲ್ಲಿ ಅವನು ವಿಚಿತ್ರ ಸುಖ ಕಂಡುಕೊಂಡು ನಗೆಮೊಗನಾಗಿದ್ದ.

## ೨

ಪುಟ್ಟಿ ಮುತ್ತಮ್ಮನ ಹೊಟ್ಟೆಯಲ್ಲಿ ಹುಟ್ಟಿದ ಮಗಳಲ್ಲ, ಸಾಕು ಮಗಳು. ಹುಟ್ಟಿದಂದಿನಿಂದಲೂ ಪುಟ್ಟಿ ಮುತ್ತಮ್ಮನನ್ನಲ್ಲದೆ ಬೇರೆ ತಾಯಿಯನ್ನು ಕಂಡಿರಲಿಲ್ಲ. ಮುತ್ತಮ್ಮ ಪುಟ್ಟಿಗೆ ಏನೂ ಕಡಿಮೆ ಮಾಡಿರಲಿಲ್ಲ. ತನ್ನ ಪರಿಸ್ಥಿತಿಯಲ್ಲಿ ಪುಟ್ಟನಿಗೆ ಎಷ್ಟು ಸೌಖ್ಯ, ಕೊಡಬಹುದೋ ಅಷ್ಟನ್ನೂ ಕೊಟ್ಟಿದ್ದಳು: ಎಷ್ಟು ವಿಶ್ವಾಸ ತೋರಿಸಬಹುದೋ ಅಷ್ಟನ್ನೂ ತೋರಿಸಿದ್ದಳು.

ತನ್ನ ಚರಿತಾರ್ಥವೇ ಸಾಗದಿದ್ದ ಒಂದೊಂದು ದಿನ ‘ ಇದೊಂದು ಶನಿ-ಗಂಟು ಬಿತ್ತು ’ ಎಂದು ಪುಟ್ಟನಿಗೆ ಶಾಪ ಹಾಕುತ್ತಿದ್ದಳು. ಮುತ್ತಮ್ಮನ ಬಾಯಲ್ಲಿ ಶಾಪದ ವಚನಗಳು ಬರುವುದು ಸ್ವಾಭಾವಿಕವಾಗಿದ್ದುದರಿಂದ ಪುಟ್ಟಿ ಅವುಗಳನ್ನು ಮನಸ್ಸಿಗೆ ತಂದುಕೊಳ್ಳುತ್ತಿರಲಿಲ್ಲ—ಅವು ಶಾಪದ ವಚನಗಳೆಂದು ಅರ್ಥಮಾಡಿಕೊಳ್ಳುವಷ್ಟು ಪುಟ್ಟನ ಬುದ್ಧಿಶಕ್ತಿಯೂ ಕುದುರಿರಲಿಲ್ಲ.

ಮಗಳನ್ನು ಮುತ್ತಮ್ಮ ಮುದ್ದಿಗೆ ‘ ಬೆದರಿದ ಜಕ್ಕಿ ’ ಎಂದು ಕರೆಯುತ್ತಿದ್ದಳು. ಪುಟ್ಟಿ ಕಂಡುಕಂಡುದಕ್ಕೆ ಹೆದರುತ್ತಿದ್ದುದೇ ಕಾರಣವಾಗಿತ್ತು. ಹೊರಗೆ ಹೋಗಿ ಬಂದರೆ ಸಾಕು, ಎದುರಿಗೆ ಒಂದು ನಾಯಿ ಬಂದರೆ ಸಾಕು, ಸ್ವಲ್ಪ ಕತ್ತಲಾದರೆ ಸಾಕು ಪುಟ್ಟಿ ಗಡಗಡನೆ ನಡುಗುತ್ತಿದ್ದಳು. ಒಂದೊಂದು ದಿನ ಹೆದರಿಕೆಯಿಂದ ಪುಟ್ಟನಿಗೆ ರಾತ್ರಿ ಜ್ವರ ಬಂದುಬಿಡುತ್ತಿತ್ತು. ಮಾರನೆಯ ದಿನ ಮುತ್ತಮ್ಮ ಪುಟ್ಟನನ್ನು ಅರಳೀಪೇಟೆ ಮಸ್ತಾನ ಸಾಹೇಬರ ಮಸೀದಿಗೆ ಕರೆದೊಯ್ದು ಫಕೀರನಿಂದ ಬೂದಿ ಇಡಿಸಿ, ನವಿಲುಗರಿಯಲ್ಲಿ ಬಡಿಸಿ, ಯಂತ್ರ ಕಟ್ಟಿಸಿ ಕರೆತರುತ್ತಿದ್ದಳು.

ಪುಟ್ಟಿ ಹುಟ್ಟುವ ಕಾಲಕ್ಕೆ, ಅವಳು ತಾಯಿಯ ಗರ್ಭದಲ್ಲಿದ್ದಾಗ, ತಾಯಿಯ ಹೃದಯದಲ್ಲಿ ಮೂಡಿದ್ದ ಭಯವೇ ಅವಳಿಗೂ ಬಂದಿತ್ತು.

ಅಚ್ಚಮ್ಮನ ದುರಂತ ಜೀವನಕ್ಕೆ ಪುಟ್ಟನ ಅವಶ್ಯಕತೆಯಿರಲಿಲ್ಲ. ಆದರೆ ನಿಸರ್ಗ ಅಚ್ಚಮ್ಮನ ಮೇಲೆ ಸೇಡು ತೀರಿಸಿಕೊಳ್ಳಲು ಅವಳ ಹೊಟ್ಟೆಗೆ ಪುಟ್ಟನನ್ನು ಹಾಕಿತ್ತು. ಅಚ್ಚಮ್ಮ ಭಯದಿಂದ ಝರ್ಝರಿತಳಾಗಿದ್ದಳು.

ಅಚ್ಚಮ್ಮನಿಗೆ ತಾರುಣ್ಯದಲ್ಲಿಯೇ ಗಂಡ ತೀರಿಹೋಗಿದ್ದ. ತವರು ಮನೆ ಕಡೆ ಅವಳಿಗಾಶ್ರಯವಿರಲಿಲ್ಲ. ಗಂಡ ಚಿಲ್ಲರೆ ಸಾಲ ಬಿಡುವುದಕ್ಕೆ ಪ್ರಯತ್ನಿಸಿದ್ದನೇ ವಿನಾ ಹಣಕಾಸು ಬಿಡುವುದಕ್ಕೆ ಯೋಚಿಸಿರಲಿಲ್ಲ. ಹೊಟ್ಟೆಪಾಡಿಗೆ ಅವಳು ಪಡುತ್ತಿದ್ದ ಪ್ರಯಾಸ ನೋಡಿ ಯಾರೋ ಪುಣ್ಯಾತ್ಮರು ಅವಳನ್ನು 'ಜನರಲ್ ಸ್ಟೋರ್ಸ್' ವಲ್ಲಭರಾಯಪ್ಪನವರ ಮನೆಯಲ್ಲಿ ಅಡಿಗೆಗೆ ಸೇರಿಸಿದರು.

ವಲ್ಲಭರಾಯಪ್ಪನವರ ಹೆಂಡತಿ ಸುಂದರಮ್ಮನವರಿಗೆ ನಿತ್ಯ ಕಾಯಿಲೆ. ಗಂಡನಿಗೆ ಮಗನಿಗೆ ಎರಡು ಹೊತ್ತು ಅನ್ನ ಕಾಣಿಸುವುದೇ ಅವರಿಗೆ ದೊಡ್ಡ ಸಮಸ್ಯೆಯಾಗಿತ್ತು. ಸುಂದರಮ್ಮ ಕೊನೆಗೆ ಧೈರ್ಯವಾಗಿ ಅಡಿಗೆಯವಳನ್ನು ಇಟ್ಟುಕೊಳ್ಳಲು ನಿರ್ಧರಿಸಿದರು.

ಅಚ್ಚಮ್ಮನಿಗೆ ಮೊದಲು ಮೊದಲು ಸುಂದರಮ್ಮನವರ ಮನೆಗೆಲಸ ಅರ್ಥವಾಗದೆ ತೊಂಚಾವಂಚವಾಯಿತು. ಸುಂದರಮ್ಮ ಸಹನೆಯಿಂದ ಅವಳಿಗೆ ಪಾಠಹೇಳಿ ತಮ್ಮ ಅಭಿರುಚಿಗೆ ಅವಳನ್ನು ತಿದ್ದಿಕೊಂಡರು.

ವಲ್ಲಭರಾಯರ ಮಗ ಶೇಷಗಿರಿ ಡಿಗ್ರಿಕ್ಲಾಸಿನಲ್ಲಿ ಓದುತ್ತಿದ್ದ. ಪೂರಾ ರಸಿಕ ಎಂದು ಹೆಸರಾಗಿದ್ದ. ಅವನ ರಸಿಕತೆಯ ಕಥೆ ತಂದೆ ತಾಯಿಗಳ ಕಿವಿಯ ಮೇಲೂ ಬಿದ್ದಿತ್ತು. ಸರಿಯಾದ ಕಡೆ ನೋಡಿ ವರ್ಷ ಕಳೆಯುತ್ತಲೂ ಮಗನಿಗೆ ಮದುವೆ ಮಾಡಿಬಿಡಬೇಕೆಂದು ವಲ್ಲಭರಾಯರು ನಿರ್ಧರಿಸಿಕೊಂಡಿದ್ದರು.

ಮನೆಯಲ್ಲಿ ಅಡಿಗೆಯವಳಿದ್ದರೂ ಸುಂದರಮ್ಮನವರಿಗೆ ಕೆಲಸ ಕಡಿಮೆಯಾಗಿರಲಿಲ್ಲ. ಬೆಳಗ್ಗೆ ವಲ್ಲಭರಾಯರು ಅಂಗಡಿಗೆ ಹೋಗುವ ಹೊತ್ತಿಗೆ ಚಪ್ಪಾತಿಯೋ, ಉಪ್ಪಿಟ್ಟೋ, ಸಜ್ಜಿಗೆಯೋ ಏನಾದರೂ ತಿಂಡಿಯಾಗಬೇಕು. ಹತ್ತು ಗಂಟೆಗೆ ಶೇಷಗಿರಿ ಕಾಲೇಜಿಗೆ ಹೋಗುವ ಹೊತ್ತಿಗೆ ಅಡಿಗೆಯಾಗಬೇಕು. ವಲ್ಲಭರಾಯರು ಒಂದು ಗಂಟೆಗೆ ಅಂಗಡಿ ಮುಗಿಸಿಕೊಂಡು ಊಟಕ್ಕೆ ಬರುತ್ತಿದ್ದರು. ಗಂಡ ಮನೆಗೆ ಬರುವವರೆಗೆ ಕಾದಿದ್ದು ಅವರೊಂದಿಗೆ ಸುಂದರಮ್ಮ

ಊಟ ಮಾಡುತ್ತಿದ್ದರು. ಮೂರು ಗಂಟೆಗೆ ವಲ್ಲಭರಾಯರು ಅಂಗಡಿಗೆ ಪುನಃ ಹೋದರೆ ಅವರು ಬರುತ್ತಿದ್ದುದು ರಾತ್ರಿ ಒಂಭತ್ತು, ಹತ್ತು ಗಂಟೆಗೆ. ಸಂಜೆ ಐದಕ್ಕೆ ಶೇಷಗಿರಿ ಮನೆಗೆ ಬಂದು ತಿಂಡಿ ಮುಗಿಸಿಕೊಂಡು ಹೋಗುತ್ತಿದ್ದ. ರಾತ್ರಿ ಪದ್ಧತಿಯಂತೆ ಅಡಿಗೆಯಾಗಬೇಕಾಗಿತ್ತು. ಸುಂದರಮ್ಮ 'ದಿವಾಕು' ನೋಡುವುದಕ್ಕೆ ಹೋಗದೆ ಅಚ್ಚಮ್ಮನ ಜತೆಯಲ್ಲಿ ಕೆಲಸಕಾರ್ಯ ಮಾಡುತ್ತಿದ್ದರು. ಒಲೆಯ ಮುಂದೆ ಕೂಡುವುದೊಂದು ಅವರಿಗೆ ಸಾಧ್ಯವಾಗುತ್ತಿರಲಿಲ್ಲ.

ಮಗ ಊಟಕ್ಕೆ ಕುಳಿತರೆ ಸುಂದರಮ್ಮನವರು ಜತೆಯಲ್ಲಿ ಕುಳಿತುಕೊಂಡು ಅವನಿಗೆ ಸರಿಯಾಗಿ ಬಡಿಸಿಸುತ್ತಿದ್ದರು.

ಒಂದೊಂದು ದಿನ ಶೇಷಗಿರಿ ರಾತ್ರಿ ಹತ್ತು, ಹನ್ನೊಂದು ಗಂಟೆಗೆ ಮನೆಗೆ ಬರುತ್ತಿದ್ದ. ಸುಂದರಮ್ಮನವರೇ ಎದ್ದು ಎಲೆಹಾಕಿ ಮಗನಿಗೆ ಬಡಿಸುತ್ತಿದ್ದರು.

"ನೀನು ಯಾಕಮ್ಮ ಎದ್ದು ಬಡಿಸಬೇಕು. ಅಚ್ಚಮ್ಮ ಬಡಿಸುತ್ತಿದ್ದಳು" ಎಂದು ಮಗ ತಾಯಿಗೆ ಉಪಚಾರ ಹೇಳುತ್ತಿದ್ದ.

"ಬೆಳಿಗ್ಗೆಯಿಂದ ದುಡಿದು ಸಾಕಾಗಿ ಮಲಗಿರುತ್ತಾಳೆ. ಅವಳನ್ನೇಕೆ ಎಬ್ಬಿಸಬೇಕು ಹೇಳು. ಅದು ಸರಿ–ಇವತ್ತು ಮನೆಗೆ ಬರುವುದಕ್ಕೇಕೆ ಇಷ್ಟು ಹೊತ್ತು?"

"ಕಾಲೇಜ್ ಸೆಮಿನಾರಿನಲ್ಲಿ ಮೀಟಿಂಗಿತ್ತು."

"ರಾತ್ರಿ ಹತ್ತು ಗಂಟೆವರೆಗೆ."

"ಇಲ್ಲ. ಮೀಟಿಂಗಾದ ಮೇಲೆ ಹರಟೆ, ಕಾಫಿ ಹೊಡೆದುಕೊಂಡು ಹೋಗುವುದು."

"ಮನೆಗೆ ಬೇಗಬರುವುದು ಅಭ್ಯಾಸ ಮಾಡಿಕೋ ಶೇಷಗಿರಿ. ನೀನೂ ವಯಸ್ಸಿನ ಹುಡುಗ–ರಾತ್ರಿ ಬಹಳ ಹೊತ್ತು ಹೊರಗಿರುವುದು ನ್ಯಾಯವಲ್ಲ."

"ಹಾಗೇ ಆಗಲಮ್ಮ."

ಎಂದು ತಾಯಿಗೆ ಸಮಾಧಾನ ಹೇಳುತ್ತಿದ್ದ.

ಶೇಷಗಿರಿ ಕಾಲೇಜ್ ಸೆಮಿನಾರಿಗೆ ಕಾಲಿಟ್ಟ ದಿನವೇ ಇಲ್ಲ. ತಾಯಿಗೆ ನಿರಾತಂಕವಾಗಿ ಸುಳ್ಳು ಹೇಳುವ ಕಲೆಯನ್ನು ಅವನು ಚೆನ್ನಾಗಿ ಸಾಧಿಸಿದ್ದ. ಅವನ ಸೆಮಿನಾರ್ ಮುತ್ತಮ್ಮನ ಮನೆಯಲ್ಲಿ ಕಳೆದು ಹೋಗುತ್ತಿತ್ತು.

ಶೇಷಗಿರಿಯ ಸಹಾಧ್ಯಾಯಿಗಳಾದ ಸಹವ್ಯಸನಿಗಳು ಅವನಿಗೆ ಒಂದು ವರ್ಷದ ಹಿಂದೆ ಮುತ್ತಮ್ಮನ ಪರಿಚಯ ಮಾಡಿಕೊಟ್ಟಿದ್ದರು. ಪರಿಚಯ ವಾದಂದಿನಿಂದ ಶೇಷಗಿರಿ ಅವಳ ಆತಿಥ್ಯ, ಸತ್ಕಾರ ಪೂರ್ಣವಾಗಿ ಅನುಭವಿ ಸುತ್ತಿದ್ದ. ಮದುವೆಯಾಗದಿದ್ದರೂ ಅವನಿಗೆ ಮದುವೆಯ ಪೂರ್ಣ ಅನುಭವ ವಿತ್ತು; ಹೆಣ್ಣನ್ನು ಹೆಂಡತಿಯಾಗಿ ಅವನಿನ್ನೂ ಕಾಣದಿದ್ದರೂ ಹೆಣ್ಣನ್ನು ಹೆಣ್ಣಾಗಿ ನೋಡಿದ್ದ.

ಅಚ್ಚಮ್ಮ ನೋಡಲಿಕ್ಕೆ ಚಂದೊಳ್ಳೆಯ ಹೆಂಗಸಲ್ಲ. ಪೃಥವಾದ ಮೈ ಕಟ್ಟು, ಎಣ್ಣೆಗೆಂಪು ವರ್ಣ. ಅಳತೆಮೀರಿ ತುಂಬಿದ ಸ್ತನ, ನಿತಂಬ. ಮೂಗು, ಕಣ್ಣು, ಹಣೆಯೆಲ್ಲಾ ಅತಿ ಸಣ್ಣದಾಗಿದ್ದವು. ಒಲೆಯ ಮುಂದೆ ಕುಳಿತಿರುವು ದಕ್ಕೋ ಏನೋ ಮುಖದಲ್ಲಿ ಮೇಲೆ ಸದಾ ಜಿಡ್ಡು ತೇಲುತ್ತಿತ್ತು. ಆದರೆ ಅವಳ ಕಣ್ಣಲ್ಲಿ ಆಸೆ, ಅತೃಪ್ತಿ, ಚಾಪಲ್ಯ ತುಂಬ ತುಳುಕುತ್ತಿತ್ತು.

ಅವಳನ್ನು ನೋಡಿದರೆ ಶೇಷಗಿರಿಗೆ ಉಸಿರು ಗಂಟಲಲ್ಲಿ ಸಿಕ್ಕಿದಂತೆ ಆಗುತ್ತಿತ್ತು. 'ಎಷ್ಟು ಸಮೀಪ—ಆದರೆಷ್ಟು ದೂರ!' ಎಂದು ಮನಸ್ಸಿನಲ್ಲೇ ಕೊರಗುತ್ತಿದ್ದ.

ಮಾತಾಡಿಸಬೇಕೆಂದು ಮನಸ್ಸು ತವಕಪಡುತ್ತಿತ್ತು. ಊಟಕ್ಕೆ ಕುಳಿತಾಗ ಮಾತನಾಡುತ್ತಿದ್ದ. ಆದರದೆಲ್ಲಾ ಲೋಕಾಚಾರದ ಶುಷ್ಕವಾದ ಮಾತುಗಳು. ಸಲಿಗೆಯಿಂದ ಮಾತನಾಡಿಸಲು ಅವಕಾಶವಿಲ್ಲ. ತಾಯಿ ಸದಾ ಎದುರಿಗಿರುತ್ತಿದ್ದರು.

ಅಚ್ಚಮ್ಮನನ್ನು ಮಾತನಾಡಿಸಬೇಕೆಂದು ಶೇಷಗಿರಿ ಹಲವು ಸಾರಿ ಪ್ರಯತ್ನಿಸಿದ. ಸಫಲವಾಗಲಿಲ್ಲ. ಆದರೆ ಅವನು ಹತಾಶನಾಗಲಿಲ್ಲ. ಸರಿ ಯಾದ ಅವಕಾಶಕ್ಕೆ ಹೊಂಚು ಹಾಕುತ್ತಿದ್ದ.

ಅಂಥ ಅವಕಾಶ ಬಹಳ ದೂರ ಉಳಿಯಲಿಲ್ಲ. ಒಂದು ದಿನ ಸುಂದ ರಮ್ಮ ಹಾಸಿಗೆ ಹಿಡಿದು ಮಲಗಿಬಿಟ್ಟರು. ಮೈಯಲ್ಲಿ ಜ್ವರ. ತಾಯಿಯ ಉಪಚಾರ ಮಾಡುವುದಕ್ಕೆ ಶೇಷಗಿರಿ ಕಾಲೇಜಿಗೆ ರಜಾ ತೆಗೆದುಕೊಂ[redacted] ಯಲ್ಲಿ ನಿಂತ.

ತಾಯಿಗೆ ಬಿಸಿನೀರು, ಹಾಲು, ಗಂಜಿ ಅಡಿಗೆಯ ಮನೆಯಿಂದ ತಂದು

ಕೊಡಬೇಕಾಗಿತ್ತು. ಶೇಷಗಿರಿ ಹೇಳಿ ಬರುತ್ತಿದ್ದ: ಅಚ್ಚಮ್ಮ ಅವುಗಳನ್ನು ಸುಂದರಮ್ಮನವರ ರೂಮಿಗೆ ತಂದುಕೊಡುತ್ತಿದ್ದಳು.

ಜ್ವರದ ತಾಪ ಹೆಚ್ಚಾಗಿತ್ತು. ತಲೆ ಸುಡುತ್ತಿತ್ತು. ತಲೆಯಮೇಲೆ ಶೇಷಗಿರಿ ಆಗಿಂದಾಗ್ಗೆ ಬಟ್ಟೆ ನೆನಸಿ ಹಾಕುತ್ತಿದ್ದ.

ಮಧ್ಯಾಹ್ನ ಅಂಗಡಿಯಿಂದ ಮನೆಗೆ ಬಂದ ವಲ್ಲಭರಾಯರ ಯೋಗ ಕ್ಷೇಮವನ್ನು ಶೇಷಗಿರಿಯೇ ನೋಡಿಕೊಳ್ಳಬೇಕಾಗಿತ್ತು. ತಂದೆ ಸ್ನಾನಮಾಡಿ ಬರುವುದರೊಳಗಾಗಿ ಅವರಿಗೆ ತಟ್ಟೆ, ಮಣೆ ಹಾಕಿ ತಾನೇ ನಿಂತುಕೊಂಡು ಅವರಿಗೆ ಬಡಿಸಿಸಿದ.

ವಲ್ಲಭರಾಯರು ಅಂಗಡಿಗೆ ಹೋದ ಮೇಲೆ ಶೇಷಗಿರಿ ತಾಯಿಗೆ ಸ್ವಲ್ಪ ಬಿಸಿಗಂಜಿ ಕುಡಿಸಿ, ಅವರ ಅಪ್ಪಣೆ ಪಡೆದು ಬೈಸಿಕಲ್ ಮೇಲೆ ಹೊರಟ.

ಶೇಷಗಿರಿಗೆ ಹೊರಗೆ ಹೋಗಬೇಕಾದ ಕೆಲಸವಿರಲಿಲ್ಲ. ಕಾಲೇಜ್ ಕಡೆ ಹೋಗಿ ಬರುತ್ತೇನೆಂದು ತಾಯಿಗೆ ಹೇಳಿ ಹೊರಟಿದ್ದ.

ಅವನ ಮನಸ್ಸಿನಲ್ಲಿ ತರಂಗ ತರಂಗವಾಗಿ ವಿಚಾರಗಳೇಳುತ್ತಿದ್ದವು. ಕಾಲೇಜ್ ಕಡೆ ಹೋಗಲಿಲ್ಲ. ನೇರವಾಗಿ ಕಬ್ಬನ್ ಪಾರ್ಕಿಗೆ ಹೋಗಿ ಒಂದು ಮರದ ಕೆಳಗೆ ಬೈಸಿಕಲ್ ನಿಲ್ಲಿಸಿ ಹುಲ್ಲು ಹಾಸಿನ ಮೇಲೆ ಕುಳಿತ. ಅರ್ಧ ಗಂಟೆಯಾಗಿರಬಹುದು—ಒಂದು ಗಂಟೆ ಜಾರಿತು. ಗರಿಕೆ ಕಿತ್ತು ಕಿತ್ತು ರುಚಿ ನೋಡಿದ್ದು ಸಾಕಾಗಿತ್ತು. ಶೇಷಗಿರಿಯ ಮನಸ್ಸಿನಲ್ಲಿ ಏನೋ ಕಳವಳ, ಭಯ. ಇದ್ದಕ್ಕಿದ್ದಂತೆ ಮೈ ನಡುಗುತ್ತಿತ್ತು. ಕುಳಿತಿದ್ದ ಜಾಗ ಬಿಡಬೇಕಾಗಿತ್ತು.

ಶೇಷಗಿರಿ ಎದ್ದು ಎದುರಿಗಿದ್ದ 'ಕಬ್ಬನ್‌ಪಾರ್ಕ್ ರೆಸ್ಟೊರಾ'ಗೆ ಬಂದು ಕುಳಿತು ಒಂದು ಉಪ್ಪೇರಿಗೆ ಆರ್ಡರ್ ಮಾಡಿದ. ಎದುರಿಗೆ ಬಂದು ಕುಳಿತ ಉಪ್ಪೇರಿಯನ್ನು ಕಡಿಯುತ್ತಾ ಕುಳಿತ. ಕಾಫಿ ಬಂತು. ನಾಲ್ಕು ಉಪ್ಪೇರಿ ಬಾಯಿಗೆ ತುರುಕಿಕೊಂಡು, ಅದು ಗಂಟಲಲ್ಲಿ ಇಳಿಯುವುದಕ್ಕೆ ಕಾಫಿ ಹೊಯ್ದು ಎದ್ದು ಹೊರಟ.

ಅವನು ಮನೆಬಿಟ್ಟು ಹೊರಟಿದ್ದ ಕಾರ್ಯದ ನೆನಪಾಯಿತು. ಬಳೇಪೇಟೆಗೆ ಬಂದು, ಅಲ್ಲಿ ಒಂದು ಔಷಧದ ಅಂಗಡಿಯಲ್ಲಿ 'ಬಿಸಿ ನೀರಿನ ಚೀಲ' (Hot water bag) ಒಂದನ್ನು ಖರೀದಿ ಮಾಡಿದ.

ಅಲ್ಲಿಂದ ಬೈಸಿಕಲ್ ಹತ್ತಿ ನೇರವಾಗಿ ಚಿಕ್ಕಪೇಟೆಗೆ ಬಂದ. ಜವಳಿ ಅಂಗಡಿಯೊಂದರ ಮುಂದೆ ಬೈಸಿಕಲ್ ನಿಲ್ಲಿಸಿ ಒಳಗೆ ಹೋಗಿ ಎರಡು ಕಣ, ಎರಡು ಸಿಲ್ಕ್ ಪೀಸ್ ವ್ಯಾಪಾರಮಾಡಿದ.

ಮನೆಗೆ ಬಂದವನು ನೇರವಾಗಿ ಒಳಗೆ ಹೋಗಲಿಲ್ಲ. ಕಾಂಪೌಂಡಿನ ಒಂದು ಮೂಲೆಯಲ್ಲಿ ಬೈಸಿಕಲ್ ಒರಗಿಸಿ, ಅಲ್ಲಿಯೇ ತನ್ನ ಚಪ್ಪಲಿ ಒಗೆದು ನಿಶ್ಶಬ್ದವಾಗಿ ಮನೆಯೊಳಗೆ ಕಾಲಿಟ್ಟ.

ತಾಯಿ ಸುಖವಾಗಿ ಮಲಗಿದ್ದರು. ಅಚ್ಚಮ್ಮ ಅವರ ರೂಮಿನ ಬಾಗಿಲ ಬಳಿ ಕುಳಿತಿದ್ದಳು.

ಅಚ್ಚಮ್ಮನಿಗೆ ಕಾಣಿಸಿಕೊಂಡು ಕೈಸನ್ನೆಮಾಡಿ ಅವಳನ್ನು ಒಳಕ್ಕೆ ಬಾರೆಂದು ಕರೆದ.

ಶೇಷಗಿರಿಯ ಸಂಜ್ಞೆ ಅಚ್ಚಮ್ಮನಿಗೆ ಮೊದಲು ಅರ್ಥವಾಗಲಿಲ್ಲ. ಅವಳು ಕಕ್ಕಾಬಿಕ್ಕಿಯಾಗಿ ನೋಡಿದಳು. ಕೈಸನ್ನೆಯನ್ನು ಮತ್ತಷ್ಟು ಸ್ಪಷ್ಟಮಾಡಿ, ತಾನೇ ಅಡಿಗೆಯ ಮನೆ ಕಡೆ ನಡೆದು, ಬಾಗಿಲಲ್ಲಿ ನಿಂತು ಮತ್ತೆ ಅಚ್ಚಮ್ಮನನ್ನು ಕರೆದ.

ಅವಳು ಎದ್ದು ಬಂದಳು.

ಅಡಿಗೆಯ ಮನೆಯಲ್ಲಿ ಶೇಷಗಿರಿ ನಿಂತ. ಅವನ ಕೈಗಳೆರಡೂ ಗಡಗಡ ನಡುಗುತ್ತಿದ್ದವು. ಅಚ್ಚಮ್ಮ ಬಾಗಿಲಲ್ಲೇ ನಿಂತುದನ್ನು ನೋಡಿ ಮೆಲ್ಲನೆ

"ಒಳಕ್ಕೆ ಬಾ" ಎಂದ.

ಅಚ್ಚಮ್ಮ ಒಳಕ್ಕೆ ಬಂದಳು.

ಶೇಷಗಿರಿ ತನ್ನ ಕೈಯಲ್ಲಿದ್ದ ಪೊಟ್ಟಣ ಬಿಚ್ಚುತ್ತಾ

"ಅಮ್ಮನಿಗೆ ನಿದ್ದೆ ಬಂದಿದೆಯೇ?"

"ಮಂಪರು. ನಿದ್ದೆ ಬಂದಿಲ್ಲ."

"ನನ್ನ ಕೇಳಿದಳೇ?"

"ಒಂದು ಸಲ ಕೇಳಿದರು."

ಕೈಯಲ್ಲಿ ಕಣ, ಸಿಲ್ಕ್‌ಬಟ್ಟೆ ಹಿಡಿದು ಮೆಲ್ಲನೆ

"ತೆಗೆದುಕೋ" ಎಂದ.

"ನನಗೇ...."

"ಹೌದು ನಿನಗೇ–ಇನ್ನು ಯಾರಿಗೆ ?"

"ನನಗೇಕೆ ?"

ಶೇಷಗಿರಿ ಅಚ್ಚಮ್ಮನ ಕೈ ಎಳೆದುಕೊಂಡು ಅವಳ ಕೈಗೆ ಬಟ್ಟೆಯ ಸುರುಳಿಯನ್ನಿತ್ತ. ಅಂಗೈಗೆ ತಾಗಿದ ರೇಷ್ಮೆಯ ಮೃದುತ್ವವನ್ನು ಅಚ್ಚಮ್ಮ ಅನುಭವಿಸುತ್ತಿದ್ದಂತೆ ಶೇಷಗಿರಿಯ ಕೈಗಳು ಅವಳ ತೋಳನ್ನು ಬಳಸಿದವು. ಅಪ್ಪಿ ಮುದ್ದಿಟ್ಟ. ಅಚ್ಚಮ್ಮ ಬೇಡವೆನ್ನಲಿಲ್ಲ, ತುಟಿಗೆ ತುಟಿ ಸೇರಿಸಿದಳು. ಮರುಕ್ಷಣದಲ್ಲಿ ಎಚ್ಚೆತ್ತು

"ಅಮ್ಮ ಎದ್ದರೆ !"

ಎಂದಳು. ಶೇಷಗಿರಿ ತನ್ನ ತೋಳು ತೆಗೆದ.

"ರಾತ್ರಿ....ಬರುತ್ತೇನೆ. ಎಚ್ಚರವಾಗಿರು. ನಿದ್ರೆ ಮಾಡಿಬಿಡಬೇಡ."

"ಗೊತ್ತಾಗಿ ಹೋದರೆ...."

"ಎಲ್ಲಾ ಮಲಗಿರುತ್ತಾರೆ....ನಾನು ನೋಡಿ ಬರುತ್ತೇನೆ. ಭಯಪಡಬೇಡ"

ಎಂದು ನಿಶ್ಶಬ್ದವಾಗಿ ಹೊರಗೆ ಬಂದು ಚಪ್ಪಲಿ ಹಾಕಿಕೊಂಡು, ಬೈಸಿಕಲ್ ತೆಗೆದುಕೊಂಡು ಒಳಕ್ಕೆ ಬಂದ.

ಹೊರಬಾಗಿಲಿನಲ್ಲಿ ಶಬ್ದವಾಗಲು ಸುಂದರಮ್ಮನವರು ಕಣ್ಣು ಬಿಟ್ಟು

"ಅಚ್ಚಮ್ಮ....ಯಾರು ನೋಡು" ಎಂದರು.

"ಶೇಷಗಿರಿರಾಯರಮ್ಮ...." ಎಂದು ಅಚ್ಚಮ್ಮ ಉತ್ತರ ಹೇಳಿದಳು.

ಶೇಷಗಿರಿ ಕೈಯಲ್ಲಿ ಬಿಸಿ ನೀರಿನ ಚೀಲ ಹಿಡಿದು ತಾಯಿಯ ಬಳಿ ಬಂದು ಕುಳಿತ. ತಾಯಿಯ ಮೈಕೈ ಮುಟ್ಟಿನೋಡಿ

"ಜ್ವರ ಇಳಿದಿಲ್ಲಾ."

"ಇನ್ನೇನು ಇಳಿಯುವ ಹೊತ್ತು."

"ಸ್ವಲ್ಪ ಕಾಫಿ ತೆಗೆದುಕೊಂಡಿದ್ದರೆ..."

"ನೀನು ಬರಲಿ ಎಂತಿದ್ದೆ. ಎಲ್ಲಿಗೆ ಹೋಗಿದ್ದೆ ?"

"ಕಾಲೇಜಿನಲ್ಲಿ ಸ್ವಲ್ಪ ಕೆಲಸವಿತ್ತು. ಬರುವಾಗ ಬಿಸಿನೀರಿನ ಚೀಲ ತಂದೆ."

"ಇದು ಯಾಕೆ ತಂದೆಯಪ್ಪಾ ?"

"ಶೀತದ ಜ್ವರ....ಮೈ ಬೆಚ್ಚಗಿರಬೇಕು."

"ಅಚ್ಚಮ್ಮ...."

ಎಂದು ಸುಂದರಮ್ಮ ಕೂಗಿದರು. ಅಚ್ಚಮ್ಮ ಬಾಗಿಲಿನಲ್ಲಿ ನಿಂತು "ಏನಮ್ಮ" ಎಂದಳು.

"ಕಾಫಿ ಮಾಡಿದೆಯಾ ?" ಎಂದು ಕೇಳಿದರು.

"ಡಿಕಾಕ್ಷನ್ ಹಾಕಿದ್ದೇನೆ, ಬಿಸಿಮಾಡಿ ಕೊಡುತ್ತೇನೆ" ಎಂದು ಒಳಗೆ ಹೋದಳು.

"ಮನೆಯಲ್ಲೂ ಏನೂ ತಿಂಡಿಯಿಲ್ಲ. ಹೋಟಲಿನಲ್ಲಿ ಏನಾದರೂ ತೆಗೆದುಕೊಳ್ಳಬೇಕಾಗಿತ್ತು."

"ಹಸಿವಿರಲಿಲ್ಲ. ಈಗ ಕ್ರಿಕೆಟ್ಟಿಗೆ ಹೋಗುತ್ತೇನಲ್ಲಾ, ಏನಾದರೂ ತೆಗೆದುಕೊಳ್ಳುತ್ತೇನೆ."

"ನಾಳೆಯೂ ಕಾಲೇಜ್ ತಪ್ಪಿಸಿಕೊಳಬೇಡಪ್ಪಾ. ಅಚ್ಚಮ್ಮ ನನ್ನ ನೋಡಿಕೊಳ್ಳುತ್ತಾಳೆ."

"ಹಾಗೇ ಆಗಲಮ್ಮ"

ಎಂದ. ಅಚ್ಚಮ್ಮ ಕಾಫಿಮಾಡಿ ತಂದು ತಾಯಿ ಮಗನಿಗೆ ಕೊಟ್ಟಳು. ಶೇಷಗಿರಿ ತಾಯಿಗೆ ಕಾಫಿ ಕುಡಿಸಿ ತಾನೂ ಕುಡಿದು ಬಟ್ಟೆ ಬದಲಾಯಿಸಿಕೊಂಡು ಹೊರಕ್ಕೆ ಹೊರಟ.

ನಿತ್ಯದಂತೆ ಮನೆಗೆ ಬರುವುದಕ್ಕೆ ತಡಮಾಡದೆ ಶೇಷಗಿರಿ ಎಂಟು ಗಂಟೆಗೇ ಬಂದ. ಅವನು ಬರುವುದರೊಳಗಾಗಿ ತಂದೆ, ಬೇಗ ಅಂಗಡಿ ಮುಗಿಸಿಕೊಂಡು ಬಂದಿದ್ದರು.

ಸುಂದರಮ್ಮ[redacted]ಮೈ ಬೆವರಿ ಜ್ವರ ಇಳಿಮುಖವಾಗಿತ್ತು. ವಲ್ಲಭರಾಯರು [redacted] ಚೀಲಕ್ಕೆ ಬಿಸಿನೀರು ತುಂಬ ಕೊಟ್ಟಿದ್ದರು.

ತಂದೆ ಮಗ ಇ[redacted]ಟ ಮುಗಿಸಿದರು. ಶೇಷಗಿರಿ ಕೇಳಿದ

"ಅಮ್ಮನಿಗೇನು [redacted] ಆಹಾರ ?"

"ಏನೂ ಬೇಡ—ಸ್ವಲ್ಪ ಬಿಸಿ ಹಾಲು ಕೊಟ್ಟರೆ ಸಾಕು. ನಾನು ನೋಡಿಕೊಳ್ಳುತ್ತೇನೆ, ನೀನು ಓದಿಕೋ ಹೋಗು."

ಎಂದರು. ಶೇಷಗಿರಿ ಕೂಡಲೆ ರೂಮು ಸೇರಲಿಲ್ಲ. ಕಾಸಿದ ಹಾಲನ್ನು ತಾನೇ ತೆಗೆದುಕೊಂಡು ಹೋಗಿ ತಾಯಿಗೆ ಉಪಚಾರ ಮಾಡಿ ಕುಡಿಸಿದ.

ವಲ್ಲಭರಾಯರು ಅಂದಿನ ಪತ್ರಿಕೆಯನ್ನು ತಿರುವಿಹಾಕುತ್ತಾ ಕುಳಿತರು.

ಅಚ್ಚಮ್ಮ ಊಟವುಗಿಸಿ, ಮುಸುರೆಯ ಪಾತ್ರೆ ಹೊರಗೆ ಹಾಕಿ, ಅಡಿಗೆಯ ಮನೆ ಸಾರಿಸಿ, ಕಾಸಿದ ನೀರು, ಹಾಲನ್ನು ತೆಗೆದುಕೊಂಡು ಹೋಗಿ ಸುಂದರಮ್ಮನವರ ಕೋಣೆಯಲ್ಲಿಟ್ಟು ನಡುಮನೆಯಲ್ಲಿ ತನ್ನ ಹಾಸಿಗೆ ಉರುಳಿಸಿ ಕೊಂಡಳು. ಮಲಗುವುದಕ್ಕೆ ಮುಂಚೆ ನಡುಮನೆಯ ಬಾಗಿಲು ಒಳಗೆ ಅಗಳಿ ಹಾಕಿಕೊಳ್ಳುವುದು ಅವಳ ಅಭ್ಯಾಸವಾಗಿತ್ತು. ಅಂದು ಬಾಗಿಲು ಮುಂದೆ ಮಾಡಿ, ಅಗಳಿ ಹಾಕದೆ ಬಿಟ್ಟಳು.

ಶೇಷಗಿರಿ ರೂಮು ಸೇರಿ ಪುಸ್ತಕ ಹಿಡಿದು ಕುಳಿತ. ಅಕ್ಷರಗಳೆಲ್ಲಾ ಕಲಸಿ ಹೋಗುತ್ತಿದ್ದವು. ಅವನ ಕಣ್ಣು, ಲಕ್ಷ್ಯವೆಲ್ಲಾ ಪತ್ರಿಕೆ ಓದುತ್ತಿದ್ದ ತಂದೆಯ ಕಡೆಗಿತ್ತು.

ವಲ್ಲಭರಾಯರು ಸಾವಕಾಶವಾಗಿ ಮುದ್ರಕನ ಹೆಸರಿನವರೆಗೆ ಪತ್ರಿಕೆ ಓದಿ ಮುಗಿಸಿ, ಕನ್ನಡಕ ತೆಗೆದು ಅದರ ಚೀಲಕ್ಕೆ ಸೇರಿಸಿ ಹೊರಗೆ ಎದ್ದು ಹೋದರು.

ಹಿಂದಿರುಗುತ್ತಾ ಮಗನ ರೂಮಿನಲ್ಲಿ ದೀಪ ಉರಿಯುತ್ತಿರುವುದನ್ನು ಕಂಡು

"ನಿದ್ರೆ ಬರಲಿಲ್ಲವೇ ಶೇಷಗಿರಿ." ಎಂದರು.

"ಸ್ವಲ್ಪ ಓದಿಕೊಳ್ಳುವುದಿತ್ತು."

"ಹತ್ತುಗಂಟೆ ಹೊಡೆಯಿತು. ಮಲಗಿಕೋಪ್ಪ. ಬೆಳಗ್ಗೆ ಬೇಗ ಎದ್ದು ಓದಿಕೊಳ್ಳುವೆಯಂತೆ"

"ಹಾಗೇ ಆಗಲಣ್ಣಾ"

ಎಂದು ಹೇಳಿ ಹೊರಗೆ ಹೋಗಿ ಬಂದು ರೂಮಿನ ದೀಪ ಆರಿಸಿದ.

ವಲ್ಲಭರಾಯರು ಹೋಗಿ ಮಲಗಿಕೊಂಡರು.

ಶೇಷಗಿರಿ ಹಾಸಿಗೆಯ ಬಳಿ ಸುಳಿಯಲಿಲ್ಲ. ಬೀದಿಯ ದೀಪದಿಂದ ಅರೆಮೊಬ್ಬಾಗಿ ಬೆಳಕುಗೊಂಡಿದ್ದ ತನ್ನ ರೂಮಿನಲ್ಲಿ ಶತಪಥ ತಿರುಗುತ್ತಿದ್ದ. ಒಂದೊಂದು ನಿಮಿಷ ಕಳೆಯುವುದು ಅವನಿಗೆ ಒಂದೊಂದು ಯುಗ ಕಳೆ ದಂತಾಗುತ್ತಿತ್ತು.

ತೊಟ್ಟಿಯ ಗಡಿಯಾರ ಅರ್ಧಗಂಟೆ ಹೊಡೆಯಿತು. ಶೇಷಗಿರಿ ಮೆಲ್ಲನೆ ಹೊರಗೆ ಬಂದು ತಂದೆ ಮಲಗಿದ್ದ ರೂಮಿನ ಬಾಗಿಲಲ್ಲಿ ನಿಂತು ಆಲಿಸಿ ಕೇಳಿದ. ತಂದೆಗೆ ನಿದ್ರೆ ಹತ್ತಿರಲಿಲ್ಲ. ಹಾಸಿಗೆಯಮೇಲೆ ಅವರು ಹೊರಳಾಡುತ್ತಿದ್ದರು.

ಶೇಷಗಿರಿ ರೂಮು ಸೇರಿ ಜಪಮಾಡುತ್ತ ಕುಳಿತ. ಮತ್ತೆ ಅರ್ಧ ಗಂಟೆ ಕಳೆದ. ಗಡಿಯಾರ ಹನ್ನೊಂದು ಗಂಟೆ ಹೊಡೆಯಿತು. ಪುನಃ ಹೊರಗೆ ಬಂದು ತಂದೆಯ ರೂಮಿನ ಬಾಗಿಲಲ್ಲಿ ನಿಂತು ಆಲಿಸಿದ. ವಲ್ಲಭರಾಯರು ಗೊರಕೆ ಹೊಡೆಯುತ್ತಿದ್ದರು.

ಆನಂದದಿಂದಾದ ಉದ್ವೇಗದಿಂದ ಶೇಷಗಿರಿ ಮೈ ಕಂಪಿಸಿತು. ಹಣೆಯ ಮೇಲೆ ಬೆವರು ಹನಿಗಳು ಕಾಣಿಸಿಕೊಂಡವು. ನಿಶ್ಶಬ್ದವಾಗಿ ತನ್ನ ರೂಮಿನ ಬಳಿ ಬಂದು ಬಾಗಿಲು ಮುಂದಕ್ಕೆಳೆದುಕೊಂಡು ನಡುಮನೆಯತ್ತ ಸಾಗಿದ.

ಕತ್ತಲೆಯಲ್ಲಿ ದಾರಿ ತಡಕಾಡಿಕೊಂಡು ಅಚ್ಚಮ್ಮನ ಹಾಸಿಗೆಯ ಬಳಿ ಬಂದ. ಅಚ್ಚಮ್ಮ ಹಾಸಿಗೆಯ ಮೇಲೆ ಕುಳಿತಿದ್ದಳು. ಶೇಷಗಿರಿ ಅವಳ ಬಳಿ ಕುಳಿತ. ಪಿಸುಮಾತಿನಲ್ಲಿ ಅಚ್ಚಮ್ಮ ಕೇಳಿದಳು

"ಯಾಕೆ ಇಷ್ಟು ಹೊತ್ತು ?'

'ತಂದೆ ಎಚ್ಚರವಾಗಿದ್ದರು."

"ಅವರಿಗೆ ನಿದ್ರೆ ಬಂತೇ ?"

"ಬಂತು. ನಿನಗೆ ನಿದ್ರೆ ಬಂದಿತ್ತೇ ?"

"ಇಲ್ಲ–ಹೇಗೆ ಬರುತ್ತದೆ."

ಶೇಷಗಿರಿ ಕೈಗಳು ಅಚ್ಚಮ್ಮನನ್ನು ಬಳಸಿ ಅಪ್ಪಿದವು. ಅವಳ ಮೇಲೆ ಮುತ್ತಿನ ಮಳೆಗರೆದ. ಅವನ ಆವೇಗ ನೋಡಿ ಅಚ್ಚಮ್ಮ

"ನಿಮ್ಮ ಕೈ ನಡುಗುತ್ತಿದೆ."

"ಹೌದು."

"ಇದು ಪತ್ತೆಯಾಗಿಬಿಟ್ಟರೆ ನನ್ನ ಗತಿ ?"

"ಹುಷಾರಾಗಿರೋಣ. ನಿತ್ಯದ ನಡವಳಿಕೆಯಲ್ಲಿ ಸ್ವಲ್ಪವೂ ಹೆಚ್ಚು ಕಡಿಮೆಯಾಗಬಾರದು"

"ನನ್ನ ಕೈಬಿಡುವುದಿಲ್ಲವೇ ?"

"ಎಂದೆಂದಿಗೂ ಬಿಡುವುದಿಲ್ಲ."

" ನಾನು ನಿಮ್ಮನ್ನೇ ದೃಢವಾಗಿ ನಂಬುತ್ತೇನೆ.'

" ನೀನು ನಂಬಬೇಕೆಂದೇ ನನ್ನ ಆಸೆ."

" ಕತ್ತಲೆ–ದೀಪಕೂಡ ಹಚ್ಚುವ ಹಾಗಿಲ್ಲ."

" ಬೇಡ–ದೀಪ ಏಕೆ ಹಚ್ಚಬೇಕು."

" ನಿಮ್ಮ ಮುಖ ಕಾಣುವುದಿಲ್ಲ."

" ಮುಖ ಕಾಣದಿದ್ದರೇನು–ವಿಶ್ವಾಸ ಕಾಣುವುದಿಲ್ಲವೇ ?"

ಎಂದು ಅಚ್ಚಮ್ಮನನ್ನು ತನ್ನ ತೋಳತೆಕ್ಕೆಯೊಳಗೆ ಅಡಗಿಸಿಕೊಂಡ.

ಶೇಷಗಿರಿ ತನ್ನ ರೂಮಿಗೆ ಹಿಂದಿರುಗುವ ಹೊತ್ತಿಗೆ ಎರಡು ಗಂಟೆಯಾಗಿತ್ತು. ಮತ್ತೊಮ್ಮೆ ತಂದೆಯ ರೂಮಿನ ಬಳಿ ನಿಂತು ಆಲಿಸಿದ. ವಲ್ಲಭರಾಯರ ಗೊರಕೆ ಸಾಂಗವಾಗಿ ಸಾಗಿತ್ತು.

ಸುಂದರಮ್ಮನವರು ಹಾಸಿಗೆ ಬಿಟ್ಟು ಏಳುವುದಕ್ಕೆ ಒಂದು ವಾರ ಬೇಕಾಯಿತು. ಜ್ವರ ನಿಂತಿತ್ತು. ಆದರೆ ದೇಹ ತುಂಬ ಕೃಶವಾಗಿತ್ತು. ಸುಂದರಮ್ಮನವರು ಎದ್ದು ಸ್ವಲ್ಪ ತಿರುಗಾಡುವಂತಾದ ಮೇಲೆ ಪ್ರತಿ ಶುಕ್ರವಾರ ಲಲಿತಾ ಸಹಸ್ರನಾಮ, ಅನ್ನಪೂರ್ಣಾಷ್ಟೋತ್ತರ ಪೂಜೆಯನ್ನಾರಂಭಿಸಿದರು.

ತನ್ನ ಮತ್ತು ಅಚ್ಚಮ್ಮನ ಪ್ರಣಯ ಪ್ರಸಂಗ ಹೊರಬೀಳದಂತೆ ಶೇಷಗಿರಿ ಎಚ್ಚರವಾಗಿದ್ದ. ತಾಯಿಯ ಎದುರಿಗೆ ಆಗಾಗ್ಗೆ ಅಚ್ಚಮ್ಮನನ್ನು ಗದರಿಸುವುದಕ್ಕೂ ಅವನು ಅನುಮಾನ ಮಾಡುತ್ತಿರಲಿಲ್ಲ.

ಶೇಷಗಿರಿ ವಾರಕ್ಕೆ ಮೂರು ನಾಲ್ಕು ದಿವಸವಾದರೂ ರಾತ್ರಿ ಸ್ವಲ್ಪ ಹೊತ್ತನ್ನು ಅಚ್ಚಮ್ಮನ ಜತೆ ಕಳೆದು ಬರುತ್ತಿದ್ದ. ಆದರೂ ಅವನ ಮನಸ್ಸಿಗೆ ತೃಪ್ತಿ ಸಿಗಲಿಲ್ಲ. ತಂದೆ ತಾಯಿಯ ಭಯದಲ್ಲಿ ಅವನು ಧೈರ್ಯವಾಗಿ ಒಂದು ಗಳಿಗೆ ಅಚ್ಚಮ್ಮನ ಜತೆ ಇರಲು ಸಾಧ್ಯವಾಗುತ್ತಿರಲಿಲ್ಲ. ಇದಕ್ಕೊಂದು ಪರಿಹಾರ ಯೋಚಿಸಿ ಒಂದು ರಾತ್ರಿ ಅಚ್ಚಮ್ಮನನ್ನು ಕೇಳಿದ

"ನಾಳೆ ಮಧ್ಯಾಹ್ನ–ತಂದೆ ಬಂದು ಊಟಮಾಡಿಕೊಂಡು ಹೋದ ಮೇಲೆ ಹೊರಕ್ಕೆ ಬರುವೆಯಾ ?"

" ಏಕೆ ?"

" ಬೇರೆ ಕಡೆ ಹೋಗಿ ಒಂದೆರಡು ಗಂಟೆ ಸುಖವಾಗಿ ಕಳೆದುಬರೋಣ. ಮನೆಯಲ್ಲಿ ಅಷ್ಟು ಆತಂಕ ಜಹಳ."

" ಎಲ್ಲಿಗೆ ಹೋಗುವುದು ?"

" ನನ್ನ ಗುರುತಿನವರು ಒಬ್ಬರಿದ್ದಾರೆ. ಬಹಳ ಒಳ್ಳೆಯವರು. ಅವರ ಮನೆಗೆ ಹೋಗೋಣ."

" ಅಮ್ಮಾವರಿಗೆ ಏನು ಹೇಳಲಿ ?"

" ಯಾರೋ ನಿನ್ನ ಸಂಬಂಧದವರ ಮನೆಗೆ ಹೋಗುತ್ತೇನೆಂದು ಹೇಳು."

" ಅವರಿಗೆ ಅನುಮಾನ ಬಂದರೆ ?"

" ಅನುಮಾನ ಏಕೆ ಬರುತ್ತದೆ ?"

" ನೀವೆಲ್ಲಿ ಸಿಕ್ಕುವಿರಿ ?"

" ನಾನು ಚೌಕದಲ್ಲಿರುತ್ತೇನೆ. ಅಲ್ಲಿಗೆ ಬಂದುಬಿಡು. ಒಂದು ಗಾಡಿ ಮಾಡಿಕೊಂಡು ಹೋಗೋಣ."

" ಹಾಗೇ ಆಗಲಿ. ನನ್ನ ಕಾಯಿಸಬೇಡಿ."

" ನಾನು ಮೂರು ಗಂಟೆಗೆ ಸರಿಯಾಗಿ ಚೌಕಕ್ಕೆ ಬರುತ್ತೇನೆ. ನೀನೂ ಅಷ್ಟು ಹೊತ್ತಿಗೆ ಬಂದು ಬಿಡು."

ಎಂದು ಹೇಳಿದ.

ಮಾರನೆಯ ದಿನ ಬೈಸಿಕಲ್ ಮನೆಯಲ್ಲಿಯೇ ಬಿಟ್ಟು ಕಾಲುನಡಗೆ ಯಲ್ಲಿ ಶೇಷಗಿರಿ ಕಾಲೇಜಿಗೆ ಹೋದ.

ತಾನು ಮಧ್ಯಾಹ್ನ ಸ್ವಲ್ಪ ಹೊರಗೆ ಹೋಗಿಬರಬೇಕೆಂದು ಅಚ್ಚಮ್ಮ ಬೆಳಿಗ್ಗೆಯಿಂದಲೇ ಪೀಠಿಕೆ ಹಾಕಿದ್ದಳು. ಏಕೆಯೆಂದು ಸುಂದರಮ್ಮನವರು ಕೇಳುವುದಕ್ಕೆ ಮೊದಲೇ

" ನಮ್ಮಣ್ಣನ ಮನೆ ಚಾಮರಾಜಪೇಟೆಯಲ್ಲಿದೆ. ಮಕ್ಕಳನ್ನು ನೋಡಿ ಬಹಳ ದಿವಸಗಳಾದವು. ನೀವು ಹೋಗಿ ಬಾರೆಂದರೆ ಹೋಗಿಬರುತ್ತೇನೆ "

" ಅವಶ್ಯಕವಾಗಿ ಹೋಗಿ ಬಾಮ್ಮ. ನಿನಗೆ ಒಬ್ಬ ಅಣ್ಣ ಇರುವ ಸಂಗತಿ ಇದುವರೆಗೆ ಹೇಳಲೇ ಇಲ್ಲವಲ್ಲ."

" ನನಗೂ ಅವನಿಗೂ ಚೆನ್ನಾಗಿಲ್ಲ. ಅತ್ತಿಗೆ ಒಳ್ಳೆಯವಳು. ಅದಕ್ಕೇ ಅವನು ಕಛೇರಿಗೆ ಹೋಗಿರುವಾಗ ಹೋಗಿ ಮಕ್ಕಳನ್ನು ನೋಡಿಕೊಂಡು ಬರುತ್ತೇನೆ."

"ಎಷ್ಟು ಹೊತ್ತಿಗೆ ಬರುತ್ತೀಯಮ್ಮ."

"ಸಂಜೆ ಬಂದು ಬಿಡುತ್ತೇನೆ."

"ನೀನು ಬರುವ ಹೊತ್ತಿಗೆ ಒಲೆಯಮೇಲೆ ಬೇಳೆ ಹಾಕಿರುತ್ತೇನೆ."

"ಏನೂ ಬೇಡಿಯಮ್ಮ. ನಾನು ಬಂದು ಎಲ್ಲಾ ಮಾಡುತ್ತೇನೆ. ಚಿಕ್ಕರಾಯರಿಗೆ ತಿಂಡಿ ಮಾಡಿಟ್ಟು ಕಾಫಿ ಡಿಕಾಕ್ಷನ್ ಹಾಕಿ ಹೋಗುತ್ತೇನೆ." ಎಂದಳು.

ಶೇಷಗಿರಿ ಕಾಲೇಜಿಗೆ ಹೋದವನು ಅಟೆಂಡೆನ್ಸ್ ಹಾಕಿ ಅಲ್ಲಿಂದ ನೇರ ವಾಗಿ ಮುತ್ತಮ್ಮನ ಮನೆಗೆ ಬಂದ. ಮುತ್ತಮ್ಮ ಲೊಟಗುಟ್ಟುತ್ತಾ, ಹಸಿ ಸೌದೆಯ ಮೇಲೆ ರೇಗಾಡುತ್ತಿದ್ದಳು–ಶೇಷಗಿರಿಯನ್ನು ನೋಡಿ

"ಏನಪ್ಪಾ, ಬಹಳ ದಿವಸಕ್ಕೆ ಬಂದುಬಿಟ್ಟೆ. ಬಡವಳ ಜ್ಞಾಪಕ ಬಂತೇ?"

"ನಿನ್ನ ಮರೆತರೆ ಆಗತ್ತ್ಯೆ ಮುತ್ತಮ್ಮ."

"ಎಲ್ಲಾ ಬಾಯಿ ಉಪಚಾರದಲ್ಲಿಯೇ ಆಗಿಹೋಯ್ತು. ಹಬ್ಬಕ್ಕೊಂದು ಸೀರೆಯಾದರೂ ತಂದುಕೊಡಪ್ಪಾ."

"ಹಬ್ಬ ಯಾವಾಗ?"

"ನೋಡು....ಇದು ಭಾದ್ರಪದ ಶುದ್ಧ....ಮುಂದಿನ ತಿಂಗಳೇ ಹಬ್ಬ."

ಶೇಷಗಿರಿ ಪರ್ಸ್‌ತೆಗೆದು ಹತ್ತುರೂಪಾಯಿನ ನೋಟೊಂದನ್ನು ಹೊರಗೆಳೆದು ಮುತ್ತಮ್ಮನ ಕೈಯಲ್ಲಿಟ್ಟು

"ಸಂತೋಷವಾಗಿ ಸೀರೆ ತೆಗೆದುಕೊಂಡು ಉಟ್ಟುಕೋಮ್ಮ."

"ಹತ್ತುರೂಪಾಯಿಗೇನು ಬರತಪ್ಪಾ. ಇನ್ನೊಂದು ಐದಾದರೂ ಕೊಡು."

"ಇವತ್ತಿಲ್ಲ....ನಾಳೆ ನಾಡಿದ್ದು ಕೊಡುತ್ತೇನೆ....ಏನು ಸಮಾಚಾರ.... ಯಾರಾದರೂ ಬಂದಿದ್ದರೇನು?"

"ಹೊಸಬರು ಯಾರೂ ಇಲ್ಲ. ವೆಂಕಟಮ್ಮ ಮೂರುಗಂಟೆಗೆ ಬರುತ್ತಾಳೆ. ನೀನೂ ಅಷ್ಟುಹೊತ್ತಿಗೆ ಬಾ."

"ಬರುತ್ತೇನೆ. ಇವತ್ತು ವೆಂಕಟಮ್ಮ ಬೇಡ, ನಾನೇ ಒಬ್ಬರನ್ನು ಕರೆದುಕೊಂಡು ಬರುತ್ತೇನೆ."

"ಯಾರಪ್ಪಾ ಅದು ?"

"ಹೀಗೇ–ಹಳೇ ಸಂಬಂಧ."

"ಜತೇಲೇ ಬಂದು ಜತೇಲೇ ಹೋಗಪ್ಪ. ಈ ಮನೆಯವನು ಮಹಾ ನೀಚ. ಅವನಿಗೆ ಯಾವಾಗಲೂ ನನ್ನ ಮನೆಯ ಮೇಲೇ ಕಣ್ಣು."

"ಮಧ್ಯಾಹ್ನ ಏನಾದರೂ ತಿಂಡಿ ತೀರ್ಥ ತರಿಸಿರುತ್ತೀಯಾ ?"

"ದುಡ್ಡು ಕೊಡು. ನಾನೇ ತರುತ್ತೇನೆ."

ಶೇಷಗಿರಿ ಅವಳ ಕೈಗೆ ಐದುರೂಪಾಯಿ ನೋಟು ಹಾಕಿ

"ಸ್ವಲ್ಪ ಹಣ್ಣು ತೆಗೆದುಕೊಂಡುಬಾ. ಕಾಫೀ ಬೇಕಲ್ಲಾ."

"ಹೋಟಲಿನಿಂದ ತಂದಿರುತ್ತೇನೆ. ನೀನು ಕೇಳಿದಾಗ ಬಿಸಿಮಾಡಿ ಕೊಡುತ್ತೇನೆ. ಎಷ್ಟು ಹೊತ್ತಿಗೆ ಬರುತ್ತೀ."

"ಎರಡೂವರೆ-ಮೂರು ಗಂಟೆಗೆ ಬರುತ್ತೇನೆ."

ಎಂದು ಹೇಳಿ ಅಲ್ಲಿಂದ ಹೊರಟ.

ಗಂಟೆ ಆದೇ ಒಂದೂವರೆಯಾಗಿತ್ತು. ಶೇಷಗಿರಿ ಇನ್ನು ಒಂದೂವರೆ ಗಂಟೆಕಾಲ ಕಳೆಯಬೇಕಾಗಿತ್ತು.

ಹೊತ್ತು ನೂಕುವುದೇ ಶೇಷಗಿರಿಗೆ ದೊಡ್ಡ ಸಮಸ್ಯೆಯಾಯಿತು. ಮುತ್ತಮ್ಮನ ಮನೆ ಬಿಟ್ಟವನು ಹೋಗಿ ಒಂದು ಹೋಟೆಲಿನಲ್ಲಿ ಕುಳಿತ. ಅರ್ಧ ಕಪ್ಪು ಕಾಫಿ ತರಿಸಿಕೊಂಡು, ಒಂದು ಸಿಗರೇಟ್ ಹಚ್ಚಿಕೊಂಡು ಸ್ವಲ್ಪ ಕಾಲ ಕಳೆದ.

ಹೋಟೆಲಿನಲ್ಲಿ ಶೇಷಗಿರಿಯ ಸಹಾಧ್ಯಾಯಿ ಅಪ್ಪೂ ಸಿಕ್ಕಿದ.

"ಏನೋ ಶೇಷಗಿರಿ-ಕಾಲೇಜಿಗೆ ಹೋಗಲಿಲ್ಲವೇ ?"

"ಹೋಗಿದ್ದೆ. ಏನೋ ಬೇಜಾರಾಗಿತ್ತು ಬಂದುಬಿಟ್ಟೆ. ನೀನೇಕೆ ಕಾಲೇಜಿಗೆ ಚಕ್ಕರ್."

"ಸಾಯಂಕಾಲ ನನ್ನ ತಂಗಿ ನೋಡೋಕೆ ಯಾರೂ ಬರ್ತಾರಂತಪ್ಪಾ. ಅದಕ್ಕೆ ಓಡಾಡಬೇಕಾಗಿತ್ತು."

"ಓಡಾಡೋನು ಹೋಟೆಲಿನಲ್ಲಿ ಬಂದು ಕುಳಿತಿದ್ದೀ ?"

"ದುಡಿಯೋನಿಗೆ ಒಂದು ಕಪ್ ಕಾಫಿ ಬೇಡವೇನಯ್ಯಾ ?"

ಶೇಷಗಿರಿ ಅಪ್ಪುವಿಗೂ ಕಾಫಿ ತರಿಸಿಕೊಟ್ಟ. ಕಾಫಿ ಮುಗಿಸಿ ಅಪ್ಪು ಹೆಚ್ಚು ಹೊತ್ತು ನಿಲ್ಲದೆ ಹೊರಟುಬಿಟ್ಟ. ಗಂಟೆ ಎರಡೂ ಕಾಲಾಗಿತ್ತು. ಇನ್ನು ಮುಕ್ಕಾಲು ಗಂಟೆ ಕಳೆಯಬೇಕು.

ಶೇಷಗಿರಿ ಎದ್ದು ತನ್ನ ಮನೆಯ ಸಮೀಪದಲ್ಲಿದ್ದ ಚೌಕದ ಬಳಿಗೆ ಬಂದ. ಅಚ್ಚಮ್ಮ ಬರುತ್ತಿರುವ ಸೂಚನೆ ಕಾಣಬರಲಿಲ್ಲ. ಸುತ್ತಮುತ್ತಲಿನ ರಸ್ತೆಗಳಲ್ಲಿ ಓಡಿಯಾಡಿ ಹಾಗೂ ಹೀಗೂ ಮುಕ್ಕಾಲು ಗಂಟೆ ತಳ್ಳಿದ.

ಮೂರು ಹೊಡೆದದ್ದೇ ತಡ ಶೇಷಗಿರಿಯ ಆತಂಕ ಹೆಚ್ಚಾಯಿತು. ಅಚ್ಚಮ್ಮ ಬರುವ ರಸ್ತೆಯನ್ನೇ ದಿಟ್ಟಿಸಿ ನೋಡುತ್ತ ನಿಂತ.

ಅಚ್ಚಮ್ಮ ಬರುತ್ತಿರುವ ಹಾಗಿರಲಿಲ್ಲ. ಶೇಷಗಿರಿಯ ಮನಸ್ಸಿನಲ್ಲಿ ದುಗುಡ ಹೆಚ್ಚಾಯಿತು.

"ಬರುತ್ತಾಳೊ ಬರುವುದಿಲ್ಲವೋ? ಅಮ್ಮಾ ಏನಂದರೋ?"

ಎಂದು ವಿಚಾರ ಮಾಡುತ್ತಾ ನಿಂತ.

ಮೂರೂಕಾಲಾಯಿತು. ದೂರದಲ್ಲಿ ಅಚ್ಚಮ್ಮ ಬರುತ್ತಿರುವುದು ಕಂಡು ಬಂತು. ಶೇಷಗಿರಿ ಒಂದು ಗಾಡಿಯನ್ನು ಗೊತ್ತುಮಾಡಿ ಸಿದ್ಧವಾಗಿ ನಿಂತಿದ್ದ.

ಅಚ್ಚಮ್ಮ ಬಂದೊಡನೆಯೇ ಅವಳನ್ನು ಗಾಡಿಯಲ್ಲಿ ಕುಳಿತುಕೊಳ್ಳಲು ಹೇಳಿ ತಾನೂ ಕುಳಿತ.

"ಏಕೆ ಇಷ್ಟು ಹೊತ್ತು?"

"ದೊಡ್ಡರಾಯರು ಈಗ ತಾನೇ ಮನೆಬಿಟ್ಟು ಹೋದರು."

"ಅಮ್ಮ ಹೋಗಬೇಡವೆನ್ನಲಿಲ್ಲವಲ್ಲಾ."

"ಇಲ್ಲ. ಬೇಗ ಬಾ ಎಂದರು. ಎಲ್ಲಿಗೆ ಹೋಗುವುದು?"

"ಸ್ವಲ್ಪ ತಡೀ–ನಿನಗೇ ಗೊತ್ತಾಗುತ್ತದೆ."

ಗಾಡಿ ನಡೆಯುತ್ತಿದ್ದಂತೆ ಶೇಷಗಿರಿ ಅವನಿಗೆ ಗುರುತು ಹೇಳುತ್ತಿದ್ದ. ಗಾಡಿ ಮುತ್ತಮ್ಮನ ಮನೆ ಸಮೀಪದ ರಸ್ತೆಗೆ ಬಂತು. ಅಲ್ಲಿಯೇ ಇಳಿದು ಗಾಡಿಯವನಿಗೆ ಬಾಡಿಗೆಕೊಟ್ಟು, ಅಚ್ಚಮ್ಮನನ್ನು ಕರೆದುಕೊಂಡು ಶೇಷಗಿರಿ ಹೊರಟ.

ಮುತ್ತಮ್ಮ ಬಾಗಿಲಿನಲ್ಲಿಯೇ ಸ್ವಾಗತ ಬಯಸಿದಳು.

ಶೇಷಗಿರಿ ಅಚ್ಚಮ್ಮನೊಂದಿಗೆ ಒಳಗಿನ ತೊಟ್ಟಿಯಲ್ಲಿ ಬಂದು ಕುಳಿತ.

ತೊಟ್ಟಿಯ ಬಲಗಡೆಯಿದ್ದ ರೂಮಿನ ಬಾಗಿಲು ಹಾಕಿತ್ತು. ಒಳಗೆ ಪಿಸಪಿಸ್ ಯಾರೋ ಮಾತನಾಡುವಂತಿತ್ತು.

"ಯಾರದು ?" ಎಂದು ಶೇಷಗಿರಿ ಕೇಳಿದ.

"ವೆಂಕಟಮ್ಮ" ಎಂದಳು ಮುತ್ತಮ್ಮ.

"ಬಂದಿರುವವರು ಯಾರು ?"

"ಅದನೇ ರಾಮರಾಜಪ್ಪ."

ಬಾಗಿಲೆದುರಿಗೆ ನಿಂತಿದ್ದ ಅಚ್ಚಮ್ಮನನ್ನು ಸ್ವಲ್ಪ ಗಡುಸಾಗಿ ಮುತ್ತಮ್ಮ

"ರೂಮಿಗೆ ಹೋಗಮ್ಮ....ಬಾಗಿಲಲ್ಲಿ ನಿಂತುಕೊಳ್ಳಬೇಡ"

ಎಂದಳು. ಅವಳು ತೋರಿಸಿದ ತೊಟ್ಟಿಯ ಎಡಗಡೆಯಿದ್ದ ರೂಮಿಗೆ ಅಚ್ಚಮ್ಮ ಹೋದಳು.

"ಮನೆಯವನನ್ನು ಕಂಡೆಯಾ" ಎಂದು ಮುತ್ತಮ್ಮ ಕೇಳಿದಳು.

"ಯಾರೂ ಇರಲಿಲ್ಲ" ಎಂದು ಶೇಷಗಿರಿ ಉತ್ತರಿಸಿದ.

"ಒಳಗೆ ಹೋಗಪ್ಪಾ........ಅಲ್ಲೀಗೇ ತಿಂಡಿ ಕಾಫಿ ತಂದುಕೊಡುತ್ತೇನೆ"

ಎಂದಳು. ಶೇಷಗಿರಿ ಒಳಕ್ಕೆ ಹೋದ.

ಮನೆಯ ವಾತಾವರಣ, ಮುತ್ತಮ್ಮನ ಗದರುಮಾತು, ಎದುರು ರೂಮಿನ ಪಿಸಪಿಸ ಶಬ್ದ ಅಚ್ಚಮ್ಮನಿಗೆ ಭಯವನ್ನುಂಟುಮಾಡಿತ್ತು. ರೂಮಿಗೆ ಬಂದವಳು ಶಿಲಾಪ್ರತಿಮೆಯಂತೆ ಒಂದೆಡೆ ಅಲುಗಾಡದೆ ನಿಂತಿದ್ದಳು. ಶೇಷಗಿರಿ ಅವಳ ಕೈಹಿಡಿದು ಅಕ್ಕರೆಯಿಂದ, ನುರುಳಿ ಸುತ್ತಿಟ್ಟಿದ್ದ ಹಾಸಿಗೆಯ ಮೇಲೆ ಕೂಡಿಸಿ ಕೊಂಡು, ಅವಳ ಗಲ್ಲ ಹಿಡಿದು ಮುದ್ದಿಸಿ

"ಭಯವಾಗುತ್ತದೆಯೇ ?"

"ಯಾರದೂಂಪ್ರೆ ಈ ಮನೆ ? ಈಕೆ ಯಾರು ?"

"ಹೀಗೇ–ನನಗೆ ಬಹಳ ದಿವಸದಿಂದ ತಿಳಿದವಳು."

"ಇದೇ ಇವಳ ಕಸುಬೋ ?"

"ಕಸುಬೇನಲ್ಲ–ತಿಳಿದವರಿಗೆ ಸಹಾಯ ಮಾಡುತ್ತಾಳೆ. ಎಮ್ಮೆ ಕಟ್ಟಿಕೊಂಡಿದ್ದಾಳೆ–ಹಾಲು ಮಾರುತ್ತಾಳೆ."

"ನೀವು ಏನೋಂತಿದ್ದೆ. ಅಸಾಧ್ಯರು."

ಬಾಗಿಲ ಹೊರಗೆ ಮುತ್ತಮ್ಮ ಕೂಗಿದಳು. ಶೇಷಗಿರಿ ಅವಳಿತ್ತ ತಿಂಡಿ, ಕಾಫಿ, ಹಣ್ಣು ಒಳಕ್ಕೆ ತಂದು ಬಾಗಿಲು ಹಾಕಿಕೊಂಡ.

"ಇವೆಲ್ಲಾ ಏನು?" ಎಂದು ಅಚ್ಚಮ್ಮ ಕೇಳಿದಳು.

"ತಿಂಡಿ ಕಾಫಿ ಕಾಣುವುದಿಲ್ಲವೆ?"

"ಅವಳು ಯಾವ ಜಾತಿಯೋ ಏನೋ? ಅವಳು ಮುಟ್ಟಿದ್ದು ಹೇಗೆ ಕುಡಿಯುವುದು?"

"ಅವಳು ಮಾಡಿದ್ದಲ್ಲ–ಹೋಟಲಿನದು."

ಎಂದು ಶೇಷಗಿರಿ ಅಚ್ಚಮ್ಮನಿಗೆ ಬಲವಂತಮಾಡಿ ತಿಂಡಿ ಹಣ್ಣು ತಿನ್ನಿಸಿ ಕಾಫಿ ಕುಡಿಸಿದ.

ಕಾಫಿ ತಿಂಡಿಯ ಪಾತ್ರೆಗಳನ್ನು ಒಂದು ಮೂಲೆಗೆ ಸರಿಸಿ ಶೇಷಗಿರಿ ಹಾಸಿಗೆ ಸುರುಳಿ ಉರುಳಿಸಿದ. ಎಣ್ಣೆಗಟ್ಟಿದ್ದ ದಿಂಬು, ಹರಿದ ಪತ್ತಿ ಚಲ್ಲುತ್ತಿದ್ದ ಹಾಸಿಗೆ ಕಂಡು ಅಚ್ಚಮ್ಮ ಅಸಹ್ಯಪಟ್ಟುಕೊಂಡಳು. ಅವಳು ಮುಖ ಗಂಟು ಹಾಕಿಕೊಂಡದ್ದನ್ನು ಕಂಡು ಶೇಷಗಿರಿ ಹೊರಗೆ ಹೋಗಿ ಮುತ್ತಮ್ಮನನ್ನು ಕೇಳಿ ಚಲುವೆಯಾದ ಮಗ್ಗಲು ಹಾಸಿಗೆ ತಂದು ಹಾಸಿದ.

ಇಬ್ಬರೂ ಹಾಸಿಗೆಯ ಮೇಲೆ ಕುಳಿತರು.

ಶೇಷಗಿರಿ ಅಚ್ಚಮ್ಮನನ್ನು ವಿವಸ್ತ್ರಳನ್ನಾಗಿ ಮಾಡುತ್ತಾ

"ಭಯಪಡಬೇಡ–ಇಲ್ಲಿ ಸುಖವಾಗಿ ಒಂದೆರಡು ಗಂಟೆ ಇದ್ದು ಹೋಗೋಣ."

"ನೀವು ಎಷ್ಟೇ ಧೈರ್ಯ ಹೇಳಿದರೂ ನನಗೆ ಭಯ ಹೋಗುವುದಿಲ್ಲ."

"ನಾನಿರುವಾಗ ನಿನಗೆಂಥ ಭಯ."

"ನನಗೆ ಒಂದು ತರಹೆ ಭಯವಲ್ಲ–ನಾನಾ ತರಹೆ...'

"ಏನದು ಹೇಳು."

"ಹೀಗೆ ನಡೆಯುತ್ತಿದೆಯಲ್ಲಾ. ನಾಳೆ ಹೆಚ್ಚು ಕಡಿಮೆಯಾದರೆ?"

"ಹೆಚ್ಚು ಕಡಿಮೆಯೆಂದರೆ!"

"ನಾನು ನಾಳೆ ಗರ್ಭಿಣಿಯಾದರೆ...."

"ಆ ಸಂಭವ ಕಡಿಮೆ. ಇಲ್ಲದ ಯೋಚನೆ ತಂದುಕೊಂಡು ಮನಸ್ಸಿಗೆ ಕಷ್ಟ ಮಾಡಿಕೊಳ್ಳಬೇಡ."

"ಒಂದು ವೇಳೆ ಹಾಗಾದರೆ ನೀವೇನು ಮಾಡುವಿರಿ."

"ಆ ಕಾಲಕ್ಕೆ ದೇವರು ಏನು ಬುದ್ಧಿಕೊಡುತ್ತಾನೋ ಹಾಗೆ ಮಾಡುತ್ತೇನೆ."

ಎಂದು ಅವಳ ಪ್ರಶ್ನೆಯನ್ನು ಹಾರಿಸಿಬಿಟ್ಟ.

ಒಂದು ತಾಸು ಕಳೆದಮೇಲೆ ಶೇಷಗಿರಿ ಕೈಕಾಲು ಮುಖ ತೊಳೆದು ಕೊಳ್ಳಲು ಬಚ್ಚಲು ಮನೆಗೆ ಹೋದ.

ಅವನು ಹೋದುದನ್ನು ಕಂಡು ಮುತ್ತಮ್ಮ ಅಚ್ಚಮ್ಮನ ಬಳಿಗೆ ಬಂದು ಅವಳ ಯೋಗಕ್ಷೇಮ ವಿಚಾರಿಸಿಕೊಂಡಳು. ತಾನು ಶೇಷಗಿರಿಯ ಮನೆಯಲ್ಲಿ ಅಡಿಗೆ ಮಾಡಿಕೊಂಡಿರುವುದಾಗಿ ಅಚ್ಚಮ್ಮ ಹೇಳಿದಳು.

"ನಾಳೆ ನಾಡಿದ್ದು ನೀನೊಬ್ಬಳೇ ಇಲ್ಲಿಗೆ ಬಾಮ್ಮ" ಎಂದಳು ಮುತ್ತಮ್ಮ.

"ಏಕೆ ?"

"ನೀನು ಬಾ ನಾನು ಹೇಳುತ್ತೇನೆ. ಆಯಪ್ಪನ ಮುಂದೆ ಈ ವಿಷಯ ತಿಳಿಸಬೇಡ"

ಎಂದು ಮುತ್ತಮ್ಮ ಎಚ್ಚರಿಕೆಕೊಟ್ಟಳು.

ಶೇಷಗಿರಿ ಹಿಂದಿರುಗಿದ ಮೇಲೆ ಅಚ್ಚಮ್ಮ ಹೋಗಿ ಮುಖ ತೊಳೆದುಕೊಂಡು, ತಲೆ ಬಾಚಿಕೊಂಡು ಬಂದಳು. ಸಂಜೆಯಾಗುತ್ತ ಬಂದಿತ್ತು.

"ಮನೆಗೆ ಹೋಗೋಣವೇ ?" ಎಂದಳು.

ಶೇಷಗಿರಿ ಇಪ್ಪತ್ತು ರೂಪಾಯಿನ ಎರಡು ನೋಟು ತೆಗೆದು ಅಚ್ಚಮ್ಮನ ಕೈಯ್ಯಲ್ಲಿಟ್ಟ.

"ಇದೆಲ್ಲಾ ಏಕೆ ?"

"ಇರಲಿ. ಇದ್ದಾಗ ಕೊಟ್ಟುಬಿಡುವುದು ಲೇಸು. ಮುಂದಿನ ತಿಂಗಳು ಒಂದು ಒಳ್ಳೆಯ ಸೀರೆ ತೆಗೆದುಕೊಳ್ಳುವೆಯಂತೆ."

"ಖಂಡಿತವಾಗಿ...."

"ನಾನು ಸುಳ್ಳು ಹೇಳುತ್ತೇನೆಯೇ ? ವಿಶ್ವಾಸವೊಂದು ಶಾಶ್ವತವಾಗಿರಲಿ ನಾನು ಏನೇನು ಮಾಡುವೆನೋ ನೀನೇ ನೋಡುವೆಯಂತೆ."

"ಮುಂದೆ ಮರೆತು ಬಿಡುತ್ತೀರೇನೋ ?"

"ಇಲ್ಲವೆಂದು ಬಾಯಲ್ಲಿ ಏತಕ್ಕೆ ಹೇಳಲಿ. ಮುಂದೆ ನಿನಗೇ ಗೊತ್ತಾಗುತ್ತದೆ....ಸುಖವಾಗಿತ್ತೇ ?

"ಕೇಳುವಿರಾ ? ಕೈಲಾಸ ಕಂಡ ಹಾಗಾಯಿತು."

ಶೇಷಗಿರಿಗೆ ಕೂಡಲೆ ಮನೆಗೆ ಹೋಗಲು ಮನಸ್ಸಾಗಲಿಲ್ಲ. ಇನ್ನೂ ಒಂದು ತಾಸು ಮುತ್ತಮ್ಮನ ಮನೆಯಲ್ಲಿದ್ದು ಅಚ್ಚಮ್ಮನನ್ನು ಕರೆದು ಕೊಂಡು ಹೊರಟ. ಮುತ್ತಮ್ಮ ಅವರು ಹೊರಟುದನ್ನು ಕಂಡು

"ಪುನಃ ಯಾವಾಗ ಬರುತ್ತೀಯಪ್ಪ."

"ನಾಡಿದ್ದು....ಅಥವಾ ಆಚೆ ನಾಡಿದ್ದು."

ಎಂದು ಹೇಳಿದ.

ದಾರಿಯಲ್ಲಿ ಗಾಡಿ ಗೊತ್ತುಮಾಡಿ, ಮನೆಯ ಪಕ್ಕದ ರಸ್ತೆಯಲ್ಲಿ ಗಾಡಿ ನಿಲ್ಲಿಸಿ

"ನೀನು ಮನೆಗೆ ಹೋಗು. ನಾನು ಸ್ವಲ್ಪ ತಡೆದು ಬರುತ್ತೇನೆ"

ಎಂದು ಅಚ್ಚಮ್ಮನನ್ನು ಕಳಿಸಿಕೊಟ್ಟ.

ಅಚ್ಚಮ್ಮ ಮನೆ ತಲುಪುವ ಹೊತ್ತಿಗೆ ಏಳುಗಂಟೆ ಹೊಡೆಯು ತ್ತಿತ್ತು. ಅಮ್ಮಾವರು ಏನನ್ನುವರೋ ಎಂದು ಅವಳ ಎದೆ ಬಡಿದು ಕೊಳ್ಳುತ್ತಿತ್ತು.

ಸುಂದರಮ್ಮನವರು ಅಡಿಗೆ ಅರ್ಧ ಮುಗಿಸಿದ್ದರು. ಅಚ್ಚಮ್ಮ ಅವರನ್ನು ನೋಡಿ

"ಹೊತ್ತಾಗಿ ಹೋಯ್ತಮ್ಮ. ಬಹಳ ದಿವಸವಾಗಿತ್ತು ಹೋಗಿ. ಹುಡುಗರು ಬಿಡಲಿಲ್ಲ."

"ಚಿಂತೆಯಿಲ್ಲ. ಅಡಿಗೆ ಮುಗಿದ ಹಾಗೆ ಆಗಿದೆ. ಆಲೂಗೆಡ್ಡೆ ಹೆಚ್ಚಿ ಸ್ವಲ್ಪ ಪಲ್ಯ ಮಾಡಿಬಿಡು. ಶೇಷಗಿರಿ ತಿಂಡಿಗೂ ಬರಲಿಲ್ಲ."

ಯಜಮಾನಿತಿಗೆ ಕೋಪ ಬಂದಿಲ್ಲವೆಂದು ಕಂಡು ಅಚ್ಚಮ್ಮನಿಗ ಸಮಾಧಾನವಾಯಿತು.

ಶೇಷಗಿರಿ ಅಲ್ಲಿ ಇಲ್ಲಿ ಸುತ್ತಿಕೊಂಡು ಮನೆ ರಾತ್ರಿ ಎಂಟೂವರೆಗೆ ತಲುಪಿದ. ಅವನು ಬಂದ ಕೂಡಲೆ ತಾಯಿ ಕೇಳಿದರು

"ಸಂಜೆ ತಿಂಡೀಗೆ ಬರಲೇ ಇಲ್ಲವಲ್ಲಪ್ಪ."

“ ಕಾಲೇಜಿನಲ್ಲಿ ಒಂದು ಮ್ಯಾಚಿತ್ತಮ್ಮ. ಅದು ಮುಗಿದ ಮೇಲೆ ಅಲ್ಲೇ ಟೀಪಾರ್ಟಿ.”

“ ಏಳು–ನೀನು ಊಟಮಾಡು. ಅವರು ಬರುತ್ತಲೇ ನಾನು ಬಡಿಸು ತ್ತೇನೆ ”

ಎಂದರು.

ಮ್ಯಾಚಿನ ಕಥೆ ಕೇಳಿ ಅಚ್ಚಮ್ಮ ನಸುನಕ್ಕಳು.

ಅಚ್ಚಮ್ಮ ವಾರಕ್ಕೆರಡು ಮೂರು ಸಾರಿಯಾದರೂ ‘ ಅಣ್ಣನ ಮನೆ ’ಗೆ ಹೋಗಿ ಬರುತ್ತಿದ್ದಳು. ಅವಳು ಮೇಲಿಂದ ಮೇಲೆ ಹೊರಗೆ ಹೋಗುವುದನ್ನು ನೋಡಿ ಸುಂದರಮ್ಮನವರು

“ ನೀನಿಷ್ಟುಸಲ ಅಣ್ಣನ ಮನೆಗೆ ಹೋಗುತ್ತೀ. ಅವರು ಒಂದು ಸಲ ವಾದರೂ ನಿನ್ನ ನೋಡುವುದಕ್ಕೆ ಇಲ್ಲಿಗೆ ಬರಬೇಡವೇ ?”

ಎಂದು ಕೇಳಿದರು.

“ ಸುಮ್ಮನೆ ಅವರಿಲ್ಲ ಏಕೆ ತುಕ್ಕಬೇಕೆಂದು ನಾನೇ ಕರೆಯಲಿಲ್ಲ.”

“ ಅಚ್ಚಮ್ಮ, ಇಷ್ಟುದಿವಸ ನಿಮ್ಮಣ್ಣ ಈ ಊರಿನಲ್ಲಿರಲಿಲ್ಲವೇ ?”

“ ಇದ್ದ. ನಾನು ಹೋಗುತ್ತಿರಲಿಲ್ಲ. ಈಗ ನಮ್ಮ ವ್ಯಾಜ್ಯ ಪರಿಹಾರ ವಾದ ಹಾಗೆ ಆಗಿದೆ.”

“ ವ್ಯಾಜ್ಯ ಪರಿಹಾರವಾದ್ದರಿಂದ ಏನಾದರೂ ಪ್ರಯೋಜನವಿದೆಯೋ ?”

“ ನಮ್ಮ ತಂದೆ ನನ್ನ ಹೆಸರಿಗೆ ಎರಡು ಸಾವಿರ ರೂಪಾಯಿ ಹಾಕಿದ್ದ ರಂತೆ. ಅದು ಅಣ್ಣನಲ್ಲಿಯೇ ಇದೆ. ಈಗವನು ದೊಡ್ಡ ಮನಸ್ಸು ಮಾಡಿದರೆ ನನ್ನ ಕೈಗೆ ಹಣ ಬರುತ್ತದೆ.”

“ ಹಾಗಾದರೆ ಮಹಾರಾಯ್ತೀ ಹಾಗೆ ಹೋಗಿ ಬಾಮ್ಮ. ಬೇಗ ಹೋಗಿ ಬೇಗ ಬಂದುಬಿಡು. ಒಂದು ಗಂಟೆಗೇ ಬೇಕಾದರೂ ಹೋಗು–ಅವರು ಬಂದಾಗ ನಾನು ಬಡಿಸಿಕೊಳ್ಳುತ್ತೇನೆ.”

ಮಾರನೆಯ ದಿನದಿಂದ ಅಚ್ಚಮ್ಮ, ಶೇಷಗಿರಿ ತಮ್ಮ ಕಾರ್ಯಕ್ರಮ ವನ್ನು ಒಂದು ಗಂಟೆಗೆ ಬದಲಾಯಿಸಿಕೊಳ್ಳಬೇಕಾಯಿತು.

ಮುತ್ತಮ್ಮನ ಮನೆಯಲ್ಲಿ ಅಚ್ಚಮ್ಮ ಹಳಬಳಾದಳು. [redacted]ನೆಗೆ ಬರುತ್ತಿದ್ದ ವೆಂಕಟಮ್ಮ, ಕಮಲ, ನಾಗು, ಗೌರಿ ಎಲ್ಲರೂ [redacted]ನಿಗೆ

ಸುಪರಿಚಿತರಾದರು. ಇದರಿಂದ ಶೇಷಗಿರಿಯ ಖರ್ಚು ಏರುವುದಕ್ಕೆ ಮೊದಲಾಯಿತು. ತಿಂಡಿ ತೀರ್ಥ ತರಿಸಿದರೆ ಎಲ್ಲರಿಗೂ ಸರಬರಾಯಿ ಮಾಡಬೇಕಾಗುತ್ತಿತ್ತು. ವೆಂಕಟಮ್ಮ, ನಾಗು, ಅಚ್ಚಮ್ಮನನ್ನು ಕಾಡಿ ಬೇಡಿ ಬಟ್ಟೆ ಬರೆ, ಪೌಡರು, ಸ್ನೋ ಗಿಟ್ಟಿಸುತ್ತಿದ್ದರು. ಮುತ್ತಮ್ಮನ ಬಾಯಿಗೆ ಬೇರೆ 'ಶಾಖಾಯ ಲವಣಾಯ' ಆಗಿಂದಾಗ್ಗೆ ಹಾಕಬೇಕಾಗಿತ್ತು.

ಶೇಷಗಿರಿಯ ಖರ್ಚು ಮೂರು ನಾಲ್ಕು ತಿಂಗಳಿಂದ ಏರಿದ್ದುದನ್ನು ವಲ್ಲಭರಾಯರು, ಸುಂದರಮ್ಮ ಗಮನಿಸಿದ್ದರು. 'ಕಾಲೇಜಿಗೆ ಹೋಗುವ ಹುಡುಗ, ನೂರಾರು ಖರ್ಚುಗಳಿರುತ್ತವೆ' ಎಂದು ಸಮಾಧಾನ ಮಾಡಿಕೊಂಡಿದ್ದರು ಒಬ್ಬನೇ ಮಗನೆಂದು ಅಕ್ಕರೆಯಿಂದ ತಾಯಿ ತಂದೆ ಇಬ್ಬರೂ ಅವನಿಗೆ ಹಣ ಕೊಡುತ್ತಿದ್ದರು.

ಒಂದು ದಿನ ಅಚ್ಚಮ್ಮ ಸ್ನಾನಮಾಡಿ ಒಂದು ಬಟ್ಟೆ ಹಾಕಿಕೊಳ್ಳುತ್ತಿದ್ದಳು. ಸುಂದರಮ್ಮ ಅಡಿಗೆಯ ಮನೆಯಲ್ಲೇ ಇದ್ದರು. ಅಚ್ಚಮ್ಮ ಹೊಸ ಸಿಲ್ಕ್ ಕುಪ್ಪಸ ಧರಿಸಿದುದನ್ನು ಸುಂದರಮ್ಮ ನೋಡಿದರು—ಮಾತಾಡಲಿಲ್ಲ.

ಅಚ್ಚಮ್ಮನೇ ಮಾತು ತಗೆದು

"ನಿಮ್ಮ ಮನೆಗೆ ನಾನು ಬಂದ ಹೊತ್ತು ಒಳ್ಳೆಯದು ತಾಯೀ. ಮೃಷ್ಟಾನ್ನ ಭೋಜನ ಮಾಡಿಸುವಿರಿ. ನಿಮ್ಮ ದಯೆಯಿಂದ ನಾಲ್ಕು ಬಟ್ಟೆ ಮಾಡಿಕೊಂಡೆ. ಅಣ್ಣನೂ ಆಗಿಂದಾಗ್ಗೆ ಸ್ವಲ್ಪ ದುಡ್ಡು ಕೊಡುತ್ತಿರುತ್ತಾನೆ."

"ಅಚ್ಚಮ್ಮ, ಕೈಯಲ್ಲಿರುವ ಕಾಸನ್ನೆಲ್ಲಾ ಬಟ್ಟೆ ಬರೇಗೆ ಖರ್ಚುಮಾಡಬೇಡ. ಹಣತಂದು ನನ್ನ ಕೈಗೆಕೊಡು. ನಾನು ಕೂಡಿಸಿ ನಿನಗೇನಾದರೂ ಒಡವೆ ಮಾಡಿಸಿಕೊಡುತ್ತೇನೆ—ನಾಳೆ ಕಷ್ಟಕಾಲ ಬಂದರೆ ನಿನಗೇ ಪ್ರಯೋಜನವಾಗುತ್ತದೆ."

"ಹಾಗೇ ಆಗಲಮ್ಮ."

ಎಂದಳು.

ಒಂದು ವಾರ ಕಳೆದ ಮೇಲೊಂದುದಿನ ಅಚ್ಚಮ್ಮ ಹೊಸ ಧರ್ಮಾವರದ ಸೀರೆ ತಂದು ಸುಂದರಮ್ಮನವರಿಗೆ ತೋರಿಸಿ

ತೆಗೆದುಕೊಟ್ಟ" ಎಂದಳು.

ಸುಂದರಮ್ಮನವರು ಸೀರೆಯ ಗಳಿಗ್ತೆ ಸೆರಗು ನೋಡಿ

ಮನೆಗೆ ಹೊರಟಳು. ಶೇಷಗಿರಿ ಯಥಾ ಕ್ರಮದಂತೆ ಗೊತ್ತಾದ ಸ್ಥಳದಲ್ಲಿ ಕಾದಿದ್ದು ಅವಳನ್ನು ಮುತ್ತಮ್ಮನ ಮನೆಗೆ ಕರೆದುಕೊಂಡು ಹೋದ.

ಅಂದು ರೂಮು ಸೇರಿದೊಡನೆಯೇ ಅಚ್ಚಮ್ಮ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಶೇಷಗಿರಿ ಎಷ್ಟು ಸಮಾಧಾನ ಹೇಳಿದರೂ ಅವಳಿಗೆ ಸಮಾಧಾನವಾಗಲಿಲ್ಲ.

"ನನಗಿನ್ನೇನು ಗತಿ?" ಎಂದು ನಿಟ್ಟುಸಿರುಗರೆದಳು.

"ಏನಾಯಿತು ಹೇಳು ಅಚ್ಚಾ" ಎಂದು ಶೇಷಗಿರಿ ಅಂಗಲಾಚಿದ.

ಅಚ್ಚಮ್ಮ ಶೇಷಗಿರಿಯ ಕಡೆ ತಿರುಗಿ ಅವನ ಎರಡು ಕೈಗಳನ್ನೂ ಬಲವಾಗಿ ಹಿಡಿದು

"ನನ್ನ ಕೈ ಬಿಡುವುದಿಲ್ಲವಷ್ಟೇ."

"ಇಲ್ಲ—ಇಲ್ಲವೆಂದು ಅಂದೇ ಹೇಳಿಲ್ಲವೇ ?"

"ನನ್ನ ಮೇಲೆ ಆಣೆಮಾಡಿ ಹೇಳಿ."

"ನಿನ್ನಾಣೆಗೂ...."

"ಈಗ ನೀವು ನನ್ನ ಕೈಬಿಟ್ಟರೆ ನಾನು ಕೆರೆಯೋ ಭಾವಿಯೋ ಹುಡುಕಿಕೊಳ್ಳಬೇಕು."

"ಅಂಥಹದೇನಾಗಿದೆ ಹೇಳಬಾರದೇ ?"

ಅಚ್ಚಮ್ಮ ಅನುಮಾನಿಸಿ ಅನುಮಾನಿಸಿ

"ನಾನು ಈ ತಿಂಗಳು ಹೊರಗಾಗಿಲ್ಲ."

ಶೇಷಗಿರಿ ಎದೆ ಧಸಕ್ಕೆಂದಿತು. ಯಾವ ಶೃಂಗಾರಚೇಷ್ಟೆಗೂ ಕೈ ಬಾರಲಿಲ್ಲ. ಮುಖದ ಮೇಲೆ ಬೆವರಿಳಿಯಿತು. ತಾನು ಸ್ಥೈರ್ಯಗೆಟ್ಟರೆ ಕೆಲಸ ಕೆಡುವುದೆಂದು ಧೈರ್ಯ ತೋರಿಸುತ್ತಾ

"ಇನ್ನೂ ನಾಲ್ಕುದಿನ ನೋಡೋಣ. ಉಷ್ಣಕ್ಕೆ ಹಾಗಾಗುವುದೂ ಉಂಟು."

"ಒಂದು ವೇಳೆ ಉಷ್ಣಕ್ಕಲ್ಲದಿದ್ದರೆ...."

"ಮುಂದಿನದನ್ನು ಸಾವಕಾಶವಾಗಿ ಯೋಚನೆ ಮಾಡೋಣ. ಮುತ್ತಮ್ಮ ಯಾವ ಸಹಾಯ ಬೇಕಾದರೂ ಮಾಡುತ್ತಾಳೆ."

ಅಂದಿನ ಸಮಾಗಮ ಶೇಷಗಿರಿಯ ಭಾಗಕ್ಕೆ ತುಂಬ ನೀರಸವಾಯಿತು.

ನಾಲ್ಕು ಗಂಟೆಗೇ ಅಚ್ಚಮ್ಮನನ್ನು ಮನೆಗೆ ಕಳಿಸಿಕೊಟ್ಟು ತಾನು ಪಾರ್ಕಿನ ಕಡೆ ಹೊರಟುಬಿಟ್ಟ.

ಅಂದೇ ಸಂಜೆ ಅಪ್ಪೂ ಬಂದು 'ಇವತ್ತು ಶೇಷಗಿರಿ ಕಾಲೇಜಿಗೆ ಬರಲಿಲ್ಲ' ಎಂದು ಸುಂದರಮ್ಮನವರಿಗೆ ತಿಳಿಸಿದ.

ಸುಂದರಮ್ಮನವರು ನೆಲಕ್ಕೆ ಕುಸಿದುಬಿಟ್ಟರು.

ಅಚ್ಚಮ್ಮನಿಗೆ ಕೆಲಸ ಒಪ್ಪಿಸಿ ತಾವು ಬಂದು ಹಾಸಿಗೆ ಹಾಸಿ ಮಲಗಿಬಿಟ್ಟರು. ದುಃಖ ಉಕ್ಕಿಬಂತು.

ಮುಳುಗಲಿರುವ ಮನುಷ್ಯ ಜೊಂಡಿಗೆ ಆತುಬೀಳುವಂತೆ ಸುಂದರಮ್ಮನವರು ತಮ್ಮ ಮನಸ್ಸಿನ ನಂಬಿಕೆಗೆ ಆತುಬಿದ್ದರು.

"ಅಚ್ಚಮ್ಮ ಮನೆಬಿಟ್ಟು ಹೋಗುವುದೂ, ಶೇಷಗಿರಿ ಕಾಲೇಜಿಗೆ ಹೋಗದಿರುವುದೂ ಕಾಕತಾಳನ್ಯಾಯ. ಇದರಿಂದ ಅವರಿಬ್ಬರಿಗೂ ಸಂಬಂಧ ಕಲ್ಪಿಸಬಾರದು"

ಎಂದು ಯೋಚಿಸಿಕೊಂಡರು. ಮಗನ ಮೇಲಣ ಸರ್ಪಕಾವಲನ್ನು ಮತ್ತಷ್ಟು ಭದ್ರಪಡಿಸಿದರು.

ಅಚ್ಚಮ್ಮ ತನ್ನ ಪರಿಸ್ಥಿತಿ ವಿವರಿಸಿದಮೇಲೆ ಶೇಷಗಿರಿಯ ಆಸೆ ಆಕಾಂಕ್ಷೆಗಳಿಗೆ ಬಲವಾದ ಧಕ್ಕೆ ತಗುಲಿತು. ನಾಲ್ಕು ದಿವಸ ಅವಳ ಕಡೆ ಸುಳಿಯಲಿಲ್ಲ. ತಾನಾಯಿತು, ಪಾಠವಾಯಿತು, ಕಾಲೇಜಾಯಿತು. ಕಾಲೇಜಿಗೆ ಸರಿಯಾಗಿ ಬರುತ್ತಿದ್ದಾನೆಂದು ಅಪ್ಪು ಸುಂದರಮ್ಮನವರಿಗೆ ವರದಿಮಾಡಿ ಅವರ ಮನಸ್ಸಿಗೆ ನೆಮ್ಮದಿಯನ್ನುಂಟುಮಾಡಿದ್ದ.

ಒಂದು ದಿನ ರಾತ್ರಿ ಶೇಷಗಿರಿಯ ಮನಸ್ಸಿನಲ್ಲಿ ಅಚ್ಚಮ್ಮನನ್ನು ನೋಡಲು ತವಕಹುಟ್ಟಿತು. ಅದನ್ನು ಮರೆಯಲು ಬೇರೆ ಬೇರೆ ಕೆಲಸ ಹಚ್ಚಿಕೊಂಡ. ಯಾವ ಕೆಲಸಕ್ಕೆ ಕುಳಿತರೂ ಅಚ್ಚಮ್ಮನ ಆಕೃತಿ ಬಂದು ಎದುರು ನಿಲ್ಲುತ್ತಿತ್ತು. ಮನಸ್ಸು ಮದಿರೆಯಿಂದ ಮತ್ತನಾದ ಮಂಗನಂತೆ ವಿಭ್ರಾಂತವಾಗಿತ್ತು.

ಊಟ ಮುಗಿದ ಮೇಲೆ ಶೇಷಗಿರಿ ಪದ್ಧತಿಯಂತೆ ತನ್ನ ರೂಮು ಸೇರಿದ. ವಲ್ಲಭರಾಯರು ವೃತ್ತಪತ್ರಿಕೆ ತಿರುವಿಹಾಕಿ 'ರಾಮಾ ಕೃಷ್ಣಾ' ಎಂದು ಮಲಗಿಬಿಟ್ಟರು. ಸುಂದರಮ್ಮನವರು ಶುಕ್ರವಾರದ ಪೂಜೆಗೆ ಅಣಿಮಾಡಿ

ಬಂದು ಮಲಗಿದರು. ಅಚ್ಚಮ್ಮ ತನ್ನ ಕೆಲಸ ಮುಗಿಸಿಕೊಂಡು ಮಲಗಿದಳು.

ಎಲ್ಲರೂ ಮಲಗಿದುದನ್ನು ಕಂಡು ಶೇಷಗಿರಿ ಮೆಲ್ಲನೆ ರೂಮಿನಿಂದ ಹೊರಬಿದ್ದ. ನಿಶ್ಶಬ್ದವಾಗಿ ಅಚ್ಚಮ್ಮನ ಬಳಿಗೆ ಹೋಗಿ ಅವಳನ್ನು ಎಬ್ಬಿಸಿದ.

ಸುಂದರಮ್ಮನವರಿಗೆ ಆಗಲೇ ಕಣ್ಣು ಹತ್ತುತ್ತಿತ್ತು. ಧಡಕ್ಕನೆ ಎಚ್ಚರವಾಯಿತು. ಏಕೋ ಗಂಟಲು ಒಣಗುತ್ತಿತ್ತು. ಅಡಿಗೆಯ ಮನೆಗೆ ಹೋಗಿ ಸ್ವಲ್ಪ ನೀರು ಕುಡಿದುಬರಲು ಎದ್ದು ಹೊರಗೆ ಬಂದರು. ಶೇಷಗಿರಿಯ ರೂಮಿನ ಬಾಗಿಲು ತೆಗೆದಿತ್ತು. ಮೆಲ್ಲನೆ ಅವನ ರೂಮಿನ ಬಳಿ ಹೋಗಿ ಇಣಕು ಹಾಕಿದರು. ಹಾಸಿಗೆಯ ಮೇಲೆ ಶೇಷಗಿರಿ ಇರಲಿಲ್ಲ. ಅವರ ಎದೆ ವೇಗವಾಗಿ ಹೊಡೆದುಕೊಳ್ಳಲಾರಂಭಿಸಿತು.

ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತಾ ನಡುಮನೆಯ ಬಾಗಿಲುಬಳಿ ಹೋಗಿ ಮರೆಯಲ್ಲಿ ನಿಂತರು. ಒಳಗೆ ಶೇಷಗಿರಿ, ಅಚ್ಚಮ್ಮ ಮಾತನಾಡುತ್ತಿದ್ದುದು ಕೇಳಿಸಿತು. ಅಲ್ಲಿ ಹೆಚ್ಚುಕಾಲ ನಿಲ್ಲಲು ಸುಂದರಮ್ಮನವರಿಗೆ ಮನಸ್ಸಾಗಲಿಲ್ಲ. ತಮ್ಮ ರೂಮಿಗೆ ಬಂದು ಹಾಸಿಗೆಯ ಮೇಲೆ ಕುಳಿತುಬಿಟ್ಟರು. ದುಃಖ ಮರುಕಳಿಸಿ ಬರುತ್ತಿತ್ತು. ಗಟ್ಟಿಯಾಗಿ ಅಳುವಂತೆಯೂ ಇಲ್ಲ. ಪಕ್ಕದ ಮಂಚದಲ್ಲಿ ಯಜಮಾನರು ಮಲಗಿದ್ದಾರೆ-ಅವರ ಕಿವಿಗೆ ಬಿದ್ದರೆ ರಂಪ ರಾದ್ಧಾಂತವಾಗುತ್ತದೆ. ಅಳುನುಂಗಿಕೊಂಡು ಒಳಗೇ ಕುಲ್ಲುತ್ತ ಕುಳಿತರು. ಅವರ ಎರಡು ಕಣ್ಣುಗಳೂ ಎದುರಿಗಿದ್ದ ಶೇಷಗಿರಿಯ ರೂಮಿನ ಬಾಗಿಲಿನ ಮೇಲೆ ನೆಟ್ಟವು.

ಒಂದು ಗಂಟೆಯಾನಂತರ ಶೇಷಗಿರಿ ಬಂದು ರೂಮು ಸೇರಿ ಬಾಗಿಲು ಹಾಕಿಕೊಂಡ.

ಈ ಸಮಸ್ಯೆಯನ್ನು ಬಗೆಹರಿಸುವ ವಿಧಾನ ಯೋಚಿಸುತ್ತಾ ಸುಂದರಮ್ಮ ಮಲಗಿದರು. ಆದರಂದು ಅವರು ಕಣ್ಣು ಮುಚ್ಚಲಿಲ್ಲ.

ಬೆಳಗಾಯಿತು. ಪ್ರತಿಯೊಬ್ಬರೂ ತಮ್ಮ ನಿತ್ಯಗೆಲಸಗಳಿಗೆ ಅನುವಾದರು. ವಲ್ಲಭರಾಯರು ಸ್ನಾನ, ಉಪಾಹಾರ ಮುಗಿಸಿ ಅಂಗಡಿಗೆ ಹೊರಡಲು ಸಿದ್ಧರಾದರು. ಸ್ನಾನಕ್ಕೆ ಹೊರಟಿದ್ದ ಸುಂದರಮ್ಮ ಯಜಮಾನರಲ್ಲಿಗೆ ಬಂದು

"ನಿಮ್ಮ ಹತ್ತಿರ ದುಡ್ಡೆಷ್ಟಿದೆ?"

“ಎಷ್ಟು ಬೇಕಾಗಿತ್ತು.”

“ನೂರು ರೂಪಾಯಿ ಇದೆಯೋ ?”

“ಸ್ವಲ್ಪ ಕಡಿಮೆಯಿದೆ. ಎಂಭತ್ತು ಇರಬಹುದು. ಅಂಗಡಿಯಲ್ಲಿದೆ. ಊಟಕ್ಕೆ ಬರುವಾಗ ತಂದುಕೊಡುತ್ತೇನೆ.”

“ಸಾಕು ಅಷ್ಟೇ ಕೊಡಿ. ನನ್ನ ಹತ್ತಿರ ಸ್ವಲ್ಪ ಹಣವಿದೆ.”

ಎಂದು ಎಂಭತ್ತು ರೂಪಾಯಿ ತೆಗೆದುಕೊಂಡರು. ವಲ್ಲಭರಾಯರು ನಗುತ್ತಾ

“ಕುಮಾರ ಕಂಠೀರವನಿಗೆ ಮತ್ತೇನು ಬೇಕಾಗಿತ್ತು ?”

“ಅವನಿಗಲ್ಲ ಹಣ—ನನಗೇ ಬೇಕಾಗಿತ್ತು.”

‘ಸರಿ’ ಎಂದುಕೊಂಡು ವಲ್ಲಭರಾಯರು ಅಂಗಡಿದಾರಿ ಹಿಡಿದರು.

ಸುಂದರಮ್ಮನವರು ಸ್ನಾನ ಮಾಡಿ ಪೂಜೆಗೆ ಕುಳಿತರು. ಪೂಜೆ ಮುಗಿಯುವ ವೇಳೆಗೆ ಅಡಿಗೆಯಾಗಿತ್ತು. ಶೇಷಗಿರಿಯನ್ನು ಕೂಡಿಸಿ ತಾವೇ ಬಡಿಸಿದರು.

ಶೇಷಗಿರಿ ಊಟ ಮುಗಿಸಿಕೊಂಡು ಹೋದಮೇಲೆ ಒಂದು ಎಲೆಹಾಕಿ ಅಚ್ಚಮ್ಮನಿಗೆ

“ನೀನೂ ಊಟಕ್ಕೆ ಕುಳಿತುಕೋಮ್ಮ.”

“ಇಷ್ಟು ಬೇಗ ನನಗೇನವಸರ. ದೊಡ್ಡರಾಯರು ಬರಲಿ.”

“ಇಲ್ಲ—ನೀನು ಕುಳಿತುಕೊಂಡು ಊಟಮಾಡು. ನಾನು ಮನೆಗೆ ಬೀಗ ಹಾಕಿಕೊಂಡು ಸ್ವಲ್ಪ ಹೊರಗೆ ಹೋಗಿ ಬರಬೇಕಾಗಿದೆ. ಅವರು ಬಂದ ಮೇಲೆ ನಾನು ಬಡಿಸುತ್ತೇನೆ. ಬೇಕಾದರೆ ನೀನು ಅಣ್ಣನ ಮನೆಗೆ ಹೋಗಿ ಬಾ.”

ಅಚ್ಚಮ್ಮನಿಗೆ ಒಂದೂ ಅರ್ಥವಾಗಲಿಲ್ಲ. ಸುಂದರಮ್ಮನವರಿಗೆ ಎದುರುತ್ತರ ಹೇಳಲು ಅವಳಿಗೆ ಧೈರ್ಯವಾಗಲಿಲ್ಲ.

ಅಚ್ಚಮ್ಮ ಊಟ ಮುಗಿಸುವಷ್ಟರಲ್ಲಿ ಸುಂದರಮ್ಮನವರು ತಾಂಬೂಲದ ತಟ್ಟೆಯನ್ನು ಸಿದ್ಧಗೊಳಿಸಿದ್ದರು.

ಅಚ್ಚಮ್ಮ ಗೋಮಯ ಹಚ್ಚಿ, ಅಡಿಗೆ ಮುಚ್ಚಿಟ್ಟ ಮೇಲೆ ಅವಳನ್ನು ತಮ್ಮ ರೂಮಿಗೆ ಕರೆದರು. ಅಚ್ಚಮ್ಮ ಅಂಜುತ್ತ ಅಂಜುತ್ತ ಬಂದು ಬಾಗಿಲಲ್ಲಿ

೬೦.

" ಒಳಗೆ ಬಾ " ಎಂದರು.

ಅಚ್ಚಮ್ಮ ಒಳಗೆ ಹೋದಳು.

" ಕುಳಿತುಕೋ "

ಅಚ್ಚಮ್ಮ ನೆಲದಮೇಲೆ ಕುಳಿತಳು.

ಸುಂದರಮ್ಮನವರು ತಾಂಬೂಲದ ತಟ್ಟೆಯಲ್ಲಿ ನೂರು ರೂಪಾಯಿ ನೋಟುಗಳನ್ನಿಟ್ಟು ಅಚ್ಚಮ್ಮನಿಗೆ ಕೊಟ್ಟರು.

" ಇದೇಕೆ ತಾಯೀ."

" ತೆಗೆದುಕೋ. ನಿನ್ನ ಗಂಟುಮೂಟೆ ಕಟ್ಟಿಕೊಂಡು ಹೊರಡು. ನಾನು ನಿನಗೆ ಅನ್ನ ಹಾಕಿದೆ–ನೀನು ನನಗೆ ಕಲ್ಲು ಹಾಕಿದೆ. ಚಿಂತೆಯಿಲ್ಲ. ನನ್ನ ಕರ್ಮಕ್ಕೆ ನಾನು ಇತರರನ್ನು ಏಕೆ ಆಕ್ಷೇಪಿಸಲಿ."

" ನಾನೇನು ಮಾಡಿದೆನಮ್ಮ."

" ಅಚ್ಚಮ್ಮ, ನೀನೇನು ಮಾಡಿದೆ ಎನ್ನುವುದು ನಿನಗೂ ಗೊತ್ತು– ನನಗೂ ಗೊತ್ತು. ಶೇಷಗಿರಿ, ನೀನೂ ನಡೆಸುತ್ತಿರುವ ವ್ಯವಹಾರ ಚೆನ್ನಾಗಿ ಬಲ್ಲೆ. ನಿನ್ನೆ ನಾನೇ ಕಣ್ಣಾರೆ ನೋಡಿದೆ. ಇನ್ನು ಮರೆಮಾಜಿ ಪ್ರಯೋಜನವಿಲ್ಲ. ತಾಂಬೂಲ ತೆಗೆದುಕೊಂಡು ಹೊರಡು–ಮತ್ತೆ ಶೇಷಗಿರಿಯ ಮುಖ ನೋಡುವುದಕ್ಕೆ ಪ್ರಯತ್ನಿಸಬೇಡ. ನನ್ನ ಹೊಟ್ಟೆ ಉರಿಸಿರುವೆ. ಅದಕ್ಕೆ ನಾನು ಶಿಕ್ಷೆಮಾಡುವುದಕ್ಕೆ ಹೋಗುವುದಿಲ್ಲ, ದೇವರೇ ನಿನಗೆ ತಕ್ಕ ಶಿಕ್ಷೆ ವಿಧಿಸುತ್ತಾನೆ."

ಅಚ್ಚಮ್ಮನಿಗೆ ಬರಸಿಡಿಲು ಬಡಿದಂತಾಯಿತು. ಮಾತನಾಡಲು ಉಸಿರಿಲ್ಲ. ಸುಂದರಮ್ಮನವರೇ ನೋಟಿನ ಕಂತೆ ಎತ್ತಿಕೊಂಡು ಅವಳ ಕೈಗೆ ತುರುಕಿದರು.

ಅಚ್ಚಮ್ಮ ತನ್ನ ಬಟ್ಟೆಗಳನ್ನೆಲ್ಲಾ ಕೂಡಿಸಿ ಗಂಟು ಕಟ್ಟಿದಳು. ಕಣ್ಣಲ್ಲಿ ಧಾರಾಕಾರವಾಗಿ ನೀರು ಸುರಿಯುತ್ತಿತ್ತು. ಸುಂದರಮ್ಮನವರ ಎರಡು ಪಾದಗಳನ್ನು ಮುಟ್ಟಿ ನಮಸ್ಕರಿಸಿ

" ನನ್ನ ಕ್ಷಮಿಸಿ....ಹೋಗಿ ಬರುತ್ತೇನೆ " ಎಂದಳು.

ಸುಂದರಮ್ಮನವರು ಗಂಭೀರವಾಗಿ

" ಹೋಗು." ಎಂದರು.

ಗಂಟು ಹೊತ್ತುಕೊಂಡು ಅಚ್ಚಮ್ಮ ಬೀದಿಗೆ ಬಂದಳು.

ಹೋಗುವುದು ? ಸುಂದರಮ್ಮನವರೇನೋ ಅಣ್ಣನಮನೆ ಇದೆಯೆಂದು ನಂಬಿದ್ದರು. ಅಚ್ಚಮ್ಮನಿಗಿದ್ದುದು ಒಂದೇ ನೆಲೆ....ಮುತ್ತಮ್ಮನ ಮನೆ.

ಒಂದು ಗಾಡಿ ಗೊತ್ತುಮಾಡಿಕೊಂಡು ಮುತ್ತಮ್ಮನ ಮನೆಗೆ ಬಂದಿಳಿದಳು.

ಗಂಟು ಹೊತ್ತುಕೊಂಡು ಅಳುತ್ತಾ ಬಂದ ಅಚ್ಚಮ್ಮನನ್ನು ನೋಡಿ ಮುತ್ತಮ್ಮ ಚಕಿತಳಾಗಿ

" ಏನಮ್ಮ....ಬಂದುಬಿಟ್ಟೆ."

ಅಚ್ಚಮ್ಮ ಮುತ್ತಮ್ಮನ ಕಾಲುಗಳ ಮೇಲೆ ಬಿದ್ದು

" ನನ್ನ ಮನೆಬಿಟ್ಟು ಹೊರಗೆ ಹಾಕಿದರು. ನೀವು ಆಶ್ರಯಕೊಟ್ಟು ಕಾಪಾಡಬೇಕು ಮುತ್ತಮ್ಮ....ನಾನು ಅನಾಥೆ."

ಎಂದು ಯಾಚಿಸಿದಳು.

ಮುತ್ತಮ್ಮ ನಸುನಗುತ್ತಾ

" ಹುಚ್ಚೀ ! ಏನು ದೊಡ್ಡ ವಿಷಯ. ಒಳಕ್ಕೆ ನಡೀ. ನಾವು ತಿನ್ನೋ ಅನ್ನ ನಿನಗೂ ಆಗತ್ತೆ "

ಎಂದು ಅಚ್ಚಮ್ಮನನ್ನು ಒಳಕ್ಕೆ ಕರೆದುಕೊಂಡು ಹೋದಳು.

ಅಚ್ಚಮ್ಮ ತನ್ನ ಮುಂದಿನ ಗತಿಯೇನೆಂದು ದೀರ್ಘವಾಗಿ ಆಲೋಚಿಸುತ್ತ ಕುಳಿತಳು. ಅವಳಿಗೊಂದೇ ಧೈರ್ಯ ಉಳಿದಿತ್ತು. ಶೇಷಗಿರಿ ಸಂಜೆ ಮನೆಗೆ ಬರುತ್ತಾನೆ–ತಾನು ಇಲ್ಲದಿರುವುದನ್ನು ನೋಡುತ್ತಾನೆ–ತನ್ನನ್ನು ಮನೆಬಿಟ್ಟು ಕಳಿಸಿದ ಸಂಗತಿಯನ್ನು ತಾಯಿಯಿಂದ ತಿಳಿಯುತ್ತಾನೆ–ಕೂಡಲೆ ಇಲ್ಲಿಗೆ ಓಡಿಬರುತ್ತಾನೆ.

ಶೇಷಗಿರಿಯ ದಾರಿಕಾಯುತ್ತ ಕುಳಿತಳು. ಸಂಜೆ ಮುಗಿದು ರಾತ್ರಿಗೆಡೆ ಕೊಟ್ಟಿತು–ಶೇಷಗಿರಿಯ ಸುಳಿವಿಲ್ಲ. ಅಚ್ಚಮ್ಮ ಹತಾಶಳಾದಳು.

" ಸ್ವಲ್ಪ ಊಟಮಾಡೇಳಮ್ಮ" ಎಂದು ಮುತ್ತಮ್ಮ ಎಬ್ಬಿಸಿದಳು.

" ನನಗೆ ಹಸಿವಿಲ್ಲಮ್ಮ–ಏನೂ ಬೇಡ"

ಎಂದು ಕಣ್ಣೀರು ಸುರಿಸುತ್ತ ಅಚ್ಚಮ್ಮ ಮಲಗಿದಳು. ರಾತ್ರಿಯೆಲ್ಲಾ ದಿಂಬಿಗೆ ಕಣ್ಣೀರಿನ ಅಭಿಷೇಕವಾಯಿತೇ ವಿನಾ ನಿದ್ರೆ ಹತ್ತಲಿಲ್ಲ.

ಶೇಷಗಿರಿ ಯಥಾಕ್ರಮದಂತೆ ಮನೆಗೆ ಬಂದ. ತಾಯಿ ಮಲಗೇ ಇದ್ದರು.

" ಅಡಿಗೆ ಮನೆಯಲ್ಲಿ ಕಾಫಿ, ತಿಂಡಿ ಇದೆ. ನೀನೇ ತೆಗೆದುಕೋ ಶೇಷಗಿರಿ " ಎಂದರು.

ಶೇಷಗಿರಿ ಲೋಕಾಭಿರಾಮವಾಗಿ ಕೇಳುವಂತೆ

" ಅಚ್ಚಮ್ಮ ಅಣ್ಣನ ಮನೆಗೆ ಹೋದಳೇನೋ ?" ಎಂದ.

ಸುಂದರಮ್ಮನವರು ಮಗನನ್ನು ದಿಟ್ಟಿಸಿ ನೋಡಿದರು. ಅವರ ನೋಟಕ್ಕೆ ಶೇಷಗಿರಿಯ ನರನಾಡಿಗಳು ಕಂಪಿಸಿದವು.

" ಅವಳನ್ನು ನಾನು ಕೆಲಸದಿಂದ ಬಿಡಿಸಿಬಿಟ್ಟೆ–ಶೇಷಗಿರಿ " ಎಂದು ಹೇಳಿದರು.

ಶೇಷಗಿರಿಯ ಗಂಟಲಲ್ಲಿ ಉಪ್ಪಿಟ್ಟು ಇಳಿಯಲಿಲ್ಲ. ಒಂದು ಹಿಡಿಚೆ ನುಂಗಿ, ಕಾಫಿ ಹುಯಿದುಕೊಂಡು ಮನೆಬಿಟ್ಟು ಹೊರಟುಬಿಟ್ಟ.

ಅವನಿಗೊಂದೇ ಯೋಚನೆ ಹತ್ತಿತು. ' ಅಚ್ಚಮ್ಮ ಎಲ್ಲಿಗೆ ಹೋಗಿರ ಬಹುದು. ಇಲ್ಲಿ ಅವಳಿಗೆ ಯಾರೂ ದಿಕ್ಕಿಲ್ಲ. ಬೇರೆ ಊರಿಗೆ ಹೋಗಿರ ಬಹುದೇ ?' ಅದು ಸಾಧ್ಯವಿಲ್ಲವೆಂದು ತರ್ಕ ಮಾಡಿಕೊಂಡ. ತಕ್ಷಣ ಮುತ್ತಮ್ಮನ ನೆನಪಾಯಿತು. ' ಅವಳು ಮುತ್ತಮ್ಮನ ಮನೆಗೇ ಹೋಗಿರ ಬಹುದು.' ಎಂದು ನಿರ್ಧರಿಸಿದ.

ಕೂಡಲೆ ಮುತ್ತಮ್ಮನ ಮನೆಗೆ ಹೋಗಿ ಅಚ್ಚಮ್ಮನನ್ನು ಕಂಡು ಸಮಾಧಾನಮಾಡಿ ಬರಬೇಕೆಂದು ಯೋಚನೆ ಹೊಳೆಯಿತು. ಆದರೆ ಮುಂದಿನ ಉತ್ತರವಾದಿತನದ ಹೊರೆಯ ಚಿತ್ರ ಅವನ ಕಣ್ಣಿಗೆ ಕಟ್ಟಿತು. ದುರ್ಬಲ ಹೃದಯ ಆ ಚಿತ್ರದ ವಿಗಡ ಸ್ವರೂಪಿಗೆ ಅಂಜಿ ಅಳುಕಿತು. ' ಆ ಸಂಸಾರ ಗಂಟುಬಿದ್ದರೆ ನನ್ನ ಗತಿಯೇನು ? ತಂದೆ ಮನೆಬಿಟ್ಟು ಓಡಿಸುತ್ತಾರೆ–ಮುಂದೆ ನನ್ನ ವಿದ್ಯಾಭ್ಯಾಸ....ನನ್ನ ಭವಿಷ್ಯ....ನನ್ನ ಗೌರವ.' ಮುತ್ತಮ್ಮನ ಮನೆಗೆ ಹೋಗಲು ಧೈರ್ಯವಾಗಲಿಲ್ಲ. ಅಪ್ಪುವನ್ನು ಹುಡುಕಿಕೊಂಡು ಹೊರಟ.

' ಶೇಷಗಿರಿ ಇಂದು ಬರಬಹುದು....ನಾಳೆ ಬರಬಹುದು ' ಎಂದು ಅಚ್ಚಮ್ಮ ಒಂದು ವಾರ ನಿರೀಕ್ಷಿಸಿದಳು. ಅವನು ಬರುವ ಸೂಚನೆ ಕಂಡು ಬರಲಿಲ್ಲ. ಅವನಿಗೆ ಹಿಡಿ ಶಾಪ ಹಾಕಿದಳು. ಹಣೆ ಚಚ್ಚಿಕೊಂಡು ತನ್ನ ದುರ್ವಿಧಿಗಾಗಿ ದುಃಖಿಸಿದಳು. ಶೇಷಗಿರಿಯ ವರ್ತನೆ ಅಚ್ಚಮ್ಮನ ಮನಸ್ಸನ್ನು ಕಹಿಮಾಡಿತು.

ಒಂದು ವಾರ ಅಚ್ಚಮ್ಮನನ್ನು ಕೂಡಿಸಿ ಅನ್ನಹಾಕಿದುದು ಮುತ್ತಮ್ಮನಿಗೆ ಸಾಕಾಗಿತ್ತು. ಅಚ್ಚಮ್ಮನೇ ಮನೆಯ ಅಡಿಗೆಯ ಕೆಲಸ ವಹಿಸಿಕೊಂಡಿದ್ದಳು. ಆದರೆ ಅವಳ ಸೇವೆ ಅನ್ನದ ಖರ್ಚು ಮುಟ್ಟುತ್ತಿರಲಿಲ್ಲವೆಂದು ಮುತ್ತಮ್ಮ ಭಾವಿಸಿದ್ದಳು.

ರಾಮರಾಜಪ್ಪನ ಕಾಟವೂ ಬಲವಾಗಿತ್ತು. ಅವನು ಮುತ್ತಮ್ಮನ ಮನೆಗೆ ಬಂದಾಗಲೆಲ್ಲಾ ಅಚ್ಚಮ್ಮನ ಸ್ನೇಹ ಮಾಡಿಸೆಂದು ಪೀಡಿಸುತ್ತಿದ್ದ.

ಒಂದು ದಿನ ಮುತ್ತಮ್ಮ ಅಚ್ಚಮ್ಮನನ್ನು ಕೇಳಿದಳು.

"ಹೀಗೇ ಇನ್ನು ಎಷ್ಟು ದಿವಸ ಕಾಲಹಾಕುತ್ತಿ ಅಚ್ಚಮ್ಮ."

"ಏನ್ರೀ. ನಾನೇನು ಮಾಡಿದೆ ?"

"ಏನೂ ಮಾಡಿಲ್ಲವೆಂದೇ ನಾನು ಕೇಳುತ್ತಿರುವುದು."

"ನನಗೆ ದಿಕ್ಕೇ ತೋರದಂತಾಗಿದೆ ಮುತ್ತಮ್ಮನವರೇ. ನೀವೇ ನನಗೊಂದು ಸರಿಯಾದ ದಾರಿ ತೋರಿಸಬೇಕು."

"ನೀನು ಆ ಹುಡುಗ ಮುಂಡೇದ್ರ ಮೇಲಣ ಹಂಬಲ ತೊರೆಯ ಬೇಕು."

"ಹಾಗೇ ಕಾಣುತ್ತದೆ. ಆದರೆ ಇಷ್ಟು ಬೇಗ ಹೇಗೆ ಮರೆಯುವುದಕ್ಕೆ ಸಾಧ್ಯ ಮುತ್ತಮ್ಮನವರೇ ?"

"ಹುಚ್ಚಿ! ನಿನಗೆ ಲೋಕಾನುಭವವಿಲ್ಲ. ಹಾಳು ಗಂಡಸರ ಹಣೇಬರಹವೇ ಇಷ್ಟು. ನಮ್ಮಿಂದ ಪ್ರಯೋಜನವಾಗುವವರೆಗೆ ನಾವು ಅವರಿಗೆ ಬೇಕು. ನಾವು ಕಷ್ಟಕ್ಕೆ ಸಿಕ್ಕಿದರೆ ಯಾರೂ ನಮಗೆ ಆಗುವುದಿಲ್ಲ."

"ನನಗಾಗಿ ನಾನು ಯೋಚನೆಮಾಡುತ್ತಿಲ್ಲ. ಗರ್ಭದಲ್ಲಿರುವ ಮಗುವಿನ ಗತಿ ?"

"ಹುಟ್ಟಿಸಿದ ದೇವರು ಹುಲ್ಲು ಮೇಯಿಸುತ್ತಾನೆಯೇ ? ಏನೋ ಆಗುತ್ತದೆ. ನೀನೂ ಚಿಕ್ಕಪುಟ್ಟವಳು–ರಾಮರಾಜು ನಿನ್ನ ಉದ್ಧಕ್ಕೂ ದುಡ್ಡು ಸುರಿಯಲು ಸಿದ್ಧವಾಗಿದ್ದಾನೆ."

"ಅವರನ್ನು ನಾನು ಹೇಗೆ ಮರೆಯಲಿ ?"

"ಇನ್ನೊಬ್ಬನ ವಿಶ್ವಾಸದೊರಕಿಸಿಕೊಂಡು ಅವನನ್ನು ಮರೆಯಬೇಕು.

"ಅವರೇನೋ ನನ್ನ ಕೈಬಿಟ್ಟರೆಂದು ಕಾಣುತ್ತದೆ......."

"ಕಾಣುತ್ತದೆ ಏನು ಬಂತು? ಕೈಬಿಟ್ಟು ಬೀದಿಗೆ ನೂಕಿದ."

"ಆದರೆ ಅವರಿಗೆ ಎರಡು ಬಗೆಯಲು ನನ್ನ ಮನಸ್ಸು ಒಪ್ಪುವು ದಿಲ್ಲವಲ್ಲ."

"ಅಚ್ಚಮ್ಮ..ನೀನು ತಿಳಿದವಳೂ ಅಲ್ಲ....ತಿಳಿಯದವಳೂ ಅಲ್ಲ. ಗಂಡಸು ಜಾತಿಯೇ ಮೋಸದ ಜಾತಿ....ಅದನ್ನು ನಂಬಬಾರದು. ಅವರನ್ನು ನಂಬಿ ನನ್ನ ಗತಿಯೇನಾಗಿದೆ ನೋಡು. ವೆಂಕಟಮ್ಮ, ನಾಗು, ಕಮಲ ಇವರ ಆಶ್ರಯ ಮಾಡಿ ನಾನು ಹೊಟ್ಟೆ ಹೊರೆಯಬೇಕಾಗಿದೆ-ಬಂದವರ ಮುಂದೆ ಹಲ್ಲುಗಿಂಜಿ ಒಂದು ಸೀರೆ, ಒಂದು ಕುಪ್ಪಸ ಸಂಪಾದಿಸಿಕೊಂಡು ಮಾನ ಮುಚ್ಚಿಕೊಳ್ಳಬೇಕಾಗಿದೆ ಇದೆಲ್ಲಾ ನನ್ನ ಕ್ರಿಯೆಗೆ ಸಿಕ್ಕಿದ ಪ್ರತಿಫಲ...ನಾಳೆ ನಿನ್ನ ಪಾಡೂ ಇದೇ ಆಗುತ್ತದೆ."

'ನಿಮಗೇನಾಯಿತು ಮುತ್ತಮ್ಮನವರೇ ?"

"ಏನಾಯಿತೇ? ಅದೊಂದು ದೊಡ್ಡ ಕಥೆ. ಕೇಳು...ನೀನು ಕೇಳಿರ ಬೇಕು.—ನಾನು ಮೊದಲು ಹೀಗಿರಲಿಲ್ಲಮ್ಮ. ವಯಸ್ಸಿನಲ್ಲಿ ಚೆನ್ನಾಗಿಯೇ ಇದ್ದೆ. ಹೆಚ್ಚು ಬಿಳುಪೇನಲ್ಲ-ಆದರೆ ಲಕ್ಷಣವಾಗಿದ್ದೆ. ನನ್ನ ತಲೆಗೂದಲೇ ಒಂದು ಬಂಡಿಯಾಗುತ್ತಿತ್ತು. ಈಗ ತಾಪತ್ರಯ-ಯೋಚನೆ ಹೆಚ್ಚಿ ಅರ್ಧ ಕ್ಕರ್ಧವಾಗಿದೆ. ಬೀದಿಯಲ್ಲಿ ನಾನು ಹೋಗುತ್ತಿದ್ದರೆ ರಸ್ತೆಯ ಜನವೆಲ್ಲಾ ನಿಂತುಕೊಂಡು ನನ್ನೇ ನೋಡುತ್ತಿದ್ದರು. ನನ್ನ ತಾಯಿತಂದೆ ಯಾರೋ ನನಗೆ ಗೊತ್ತಿಲ್ಲ. ನಾನು ಚಿಕ್ಕ ಮಗುವಾಗಿದ್ದಾಗ ಕಿರಿಸ್ತಾನರಿಗೆ ಕೊಡ ಬೇಕೆಂದಿದ್ದರಂತೆ. ಆಗ ಒಬ್ಬ ನಾಯಕಸಾನಿ ನನ್ನ ತೆಗೆದುಕೊಂಡು ಸಾಕಿದಳು. ತಾಯಿಯಿಲ್ಲ ಎನಿಸಲಿಲ್ಲ. ಬಹಳ ಪ್ರೀತಿಯಿಂದಲೇ ಸಾಕಿದಳು. ನಾನು ದೊಡ್ಡವಳಾದ ಮೇಲೆ ಭೈರಪ್ಪನಿಗೆ ಗೆಜ್ಜೆಪೂಜೆ ಮಾಡಿಕೊಟ್ಟಳು. ಆ ಮಾರಾ ಯನೂ ದೊಡ್ಡ ಸಂಸಾರಿ. ನನ್ನ ಚೆನ್ನಾಗಿಯೇ ನೋಡಿಕೊಳ್ಳುತ್ತಿದ್ದ. ನಾನು ಬಂದ ಗಳಿಗೆ ಒಳ್ಳೆಯದೆಂದು ನನ್ನ ಕಣ್ಣಲ್ಲಿಟ್ಟುಕೊಂಡು ಸಾಕುತ್ತಿದ್ದ. ಭೈರಪ್ಪ ಮನೆ ಕಂಟ್ರಾಕ್ಟು ಮಾಡುತ್ತಿದ್ದ. ಯಾವ ದೊಡ್ಡ ಕಂಟ್ರಾಕ್ಟು ಸಿಕ್ಕಲಿ ನನಗೊಂದು ಒಡವೆ ಮಾಡಿಸಿಕೊಡುತ್ತಿದ್ದ. ನಾಲ್ಕಾರು ವರ್ಷದಲ್ಲಿ, ನನ್ನ ಮೇಲೆ ನಾಲ್ಕು ಸೇರು ಬಂಗಾರ ಸಂಗ್ರಹವಾಯಿತು. ತಿಂಗಳಿಗೆ ಮನೆಯ ಖರ್ಚಿಗೆಂದು ಇನ್ನೂರು ರೂಪಾಯಿ ಕೊಡುತ್ತಿದ್ದ. ಅವನ ಜತೆ ನಾನೂ

ಹತ್ತುವರ್ಷ ಮರ್ಯಾದೆಯಾಗಿ ಬಾಳುವೆಮಾಡಿದೆ. ಯಾರೂ ನನ್ನ ಮೇಲೆ ಉಸಿರೆತ್ತುವ ಹಾಗಿರಲಿಲ್ಲ. ಇದ್ದಕ್ಕಿದ್ದ ಹಾಗೇ ಬೈರಪ್ಪನ ವ್ಯಾಪಾರ ಇಳಿಮುಖವಾಯಿತು. ಮೇಸ್ತ್ರಿಗಳೂ, ಕೂಲಿಗಳೂ ಮೋಸಮಾಡಲಾರಂಭಿಸಿದರು. ಒಂದು ದೊಡ್ಡ ಬಿಲ್ಡಿಂಗ್ ಕಂಟ್ರಾಕ್ಟಿನಲ್ಲಿ ಪೂರಾ ಹೊಡೆತಬಿತ್ತು. ಪಾಯವೇ ಕುಸಿದು ಕಟ್ಟಡ ಉರುಳಿಕೊಂಡಿತು. ಆ ನಷ್ಟ ಕಟ್ಟಿಕೊಡಬೇಕಾದ ಜವಾಬ್ದಾರಿ ಬೈರಪ್ಪನ ಮೇಲೆ ಬಿತ್ತು. ಮರ್ಯಾದೆಹೋಗುವ ಪ್ರಸಂಗ. ಬೈರಪ್ಪ ನನ್ನ ಹತ್ತಿರ ಒಂದು ದಿನ ಬಂದು ಕಣ್ಣೀರು ಹಾಕಿಕೊಂಡು

'ಮುತ್ತಾ, ನನಗೊಂದು ಉಪಕಾರ ಮಾಡುವೆಯಾ?' ಎಂದು ಕೇಳಿದ.

'ಇದೇನು ಹೀಗೆನ್ನುತ್ತೀರಿ–ನಿಮಗೆ ಉಪಕಾರಮಾಡುವುದಕ್ಕೆ ನಾನು ಯಾರು? ನೀವು ಕೈಹಿಡಿಯುವ ಹೊತ್ತಿಗಲ್ಲವೇ ನಾನೂ ಒಂದು ಮನುಷ್ಯ ಪ್ರಾಣಿ. ಹೇಳಿ–ಏನಾಗಿದೆ.'

'ನನ್ನ ಗೌರವ ಹೋಗುವ ಪ್ರಸಂಗ ಬಂದಿದೆ. ಅರವತ್ತು ಸಾವಿರ ರೂಪಾಯಿ ಜತೆ ಮಾಡದಿದ್ದರೆ ನಾನು ಪಾಪರ್ ಚೀಟಿ ಹಾಕಬೇಕಾಗುತ್ತದೆ. ಈ ಊರೇ ಬಿಡಬೇಕಾಗುತ್ತದೆ.'

'ನಾನೇನು ಮಾಡಬಹುದು ಹೇಳಿ. ನನ್ನದಾಗಿರುವುದೆಲ್ಲಾ ನಿಮ್ಮದೇ ತಾನೇ'

'ನಿನ್ನ ಒಡವೆಗಳು ಬೇಕಾಗಿದ್ದವು.'

ಏನೂ ಅರಿಯದ ಮುಕ್ಕ. ಅವನ ಮಾತಿಗೆ ಮರುಳಾದೆ–ಪೆಟ್ಟಿಗೆಯಲ್ಲಿದ್ದ ಒಡವೆಗಳು, ನನ್ನ ಮೈಮೇಲಿದ್ದ ಒಡವೆಗಳು ಎಲ್ಲವನ್ನೂ ತೆಗೆದು ಒಂದು ಪೆಟ್ಟಿಯ ತುಂಬ ಇಟ್ಟು ಒಪ್ಪಿಸಿದೆ. ಗುರುತಿಗೆ ಒಂದು ಚೂರು ಬಂಗಾರವನ್ನೂ ಉಳಿಸಿಕೊಳ್ಳಲಿಲ್ಲ.

ಅದನ್ನು ತೆಗೆದುಕೊಂಡು ಬೈರಪ್ಪ

'ವ್ಯಾಪಾರವೆಂದರೆ ಹುಣ್ಣಿಮೆ, ಅಮಾವಾಸ್ಯೆ ಇದ್ದ ಹಾಗೆ. ಈಗ ನನಗೆ ಅಮಾವಾಸ್ಯೆ ಬಂದಿದೆ. ಪುನಃ ಹುಣ್ಣಿಮೆ ಬಂದೇ ಬರುತ್ತದೆ. ಆಗ ನಿನ್ನ ಒಡವೆಗಳನ್ನೆಲ್ಲಾ ಹಿಂದಕ್ಕೆ ತಂದುಕೊಡುತ್ತೇನೆ. ಇದರ ಎರಡರಸು ಹೊಸ ಒಡವೆ ಮಾಡಿಸಿಕೊಡುತ್ತೇನೆ.'

'ಒಡವೆಗಾಗಿ ನಾನು ನಿಮ್ಮನ್ನು ನಂಬಿಕೊಂಡಿಲ್ಲ, ನಿಮ್ಮ ವಿಶ್ವಾಸ ವೊಂದು ದೃಢವಾಗಿ ಇರಲಿ. ಒಡವೆ ಬರದಿದ್ದರೂ ಚಿಂತೆಯಿಲ್ಲ.'

ಎಂದು ಹೇಳಿದೆ. ಬೈರಪ್ಪ ಸಂತೋಷಪಟ್ಟುಕೊಂಡು 'ನೀನೇ ನನ್ನ ಭಾಗ್ಯಲಕ್ಷ್ಮಿ' ಎಂದು ಕರೆದ.

"ಮುಂದೆ ಏನಾಯಿತು?"

"ಆದದ್ದೇನು?–ನನ್ನ ಮನೆ ಹಾಳಾಯಿತು. ಬೈರಪ್ಪನಿಗೆ ಯಾವ ಮಲರೋಗ ಬಂತೋ–ಮನೆ ಮಹಾತಾಯಿ ಕಿವಿಯಲ್ಲಿ ಯಾವ ಮಂತ್ರ ಊದಿದಳೋ ಅವನ ಚರ್ಯೆಯೇ ಬದಲಾಯಿಸಿತು. ಎಷ್ಟೇ ಕೆಲಸವಿದ್ದರೂ ದಿನಕ್ಕೆ ಒಂದು ಸಲವಾದರೂ ಬಂದು ನನ್ನ ಮನೆಯಲ್ಲಿ ಅರ್ಧಗಂಟೆಯಾದರೂ ಇದ್ದು ಹೋಗುತ್ತಿದ್ದವನು ಮೂರು ನಾಲ್ಕು ದಿನಕ್ಕೊಮ್ಮೆ ಬರಲಾರಂಭಿಸಿದ. ಯಾವಾಗ ಕೇಳಿದರೂ 'ಕೆಲಸ, ಕೆಲಸ' ಎನ್ನುತ್ತಿದ್ದ. ಇರಬಹುದು–ನಷ್ಟ ಕಟ್ಟಿಕೊಳ್ಳುವ ಪ್ರಯತ್ನಮಾಡುತ್ತಿದ್ದಾನೆ ಎಂದು ನಾನು ಸಮಾಧಾನ ಮಾಡಿ ಕೊಳ್ಳುತ್ತಿದ್ದೆ. ಹಾಗೂ ಹೀಗೂ ಮೂರು ನಾಲ್ಕು ತಿಂಗಳು ತಳ್ಳಿದ. ಆಮೇಲೆ ನನ್ನ ಮನೆ ಕಡೆ ಸುಳಿಯಲೇ ಇಲ್ಲ."

"ನೀವು ಅವರನ್ನು ನೋಡುವ ಪ್ರಯತ್ನಮಾಡಲಿಲ್ಲವೇ?"

"ಮಾಡದೆ ಉಂಟೇ? ಅವನ ಮನೆ ಬಾಗಿಲಿಗೇ ಹುಡುಕಿಕೊಂಡು ಹೋದೆ. ತೊಣ್ಣೂರು ರಾಕ್ಷಸಿ–ಅವನ ಹೆಂಡತಿ–ಪರಕೆ ತೆಗೆದುಕೊಂಡು ಹೊರಗೆ ಬಂದಳು. ನಾನೂ ಹುಚ್ಚು ಹಿಡಿದವಳಂತೆ ಬೈರಪ್ಪನನ್ನು ಹುಡುಕಿ ಕೊಂಡು ಬೀದಿ ಬೀದಿ ಅಲೆದೆ. ಎಲ್ಲಿಯೂ ಸಿಕ್ಕಲಿಲ್ಲ. ಒಂದು ದಿನ ನಾನು ಬೀದಿಯಲ್ಲಿ ಬರುತ್ತಿರುವಂತೆ ಎದುರಿಗೆ ಒಂದು ಮೋಟಾರು ಬಂತು. ಒಳಗೆ ಬೈರಪ್ಪ ಇದ್ದ–ನನ್ನ ಮುಖನೋಡಿ ಅತ್ತ ತಿರುಗಿಕೊಂಡ. ನನ್ನ ಹೊಟ್ಟೆಗೆ ಬೆಂಕಿ ಹಾಕಿದ ಹಾಗಾಯಿತು. ನೋಡಮ್ಮ, ಇದು ಗಂಡಸರ ಪಾಡು."

"ಮುಂದೇನು ಆಯಿತು."

"ಆಗೋದೇನು? ಎಲ್ಲಾ ಕಂಡದ್ದೇ. ಲೋಕದಲ್ಲಿ ಗಂಡಸರಿಗೆ ಬರವೇ? ನಾನೂ ಕ್ರಿಯಾ, ಧರ್ಮ ಎಲ್ಲಾ ಬಿಟ್ಟುಬಿಟ್ಟೆ. ತಣ್ಣೀರಿನಲ್ಲಿ ಒಂದು ಸಲ ಮುಳುಗುಹಾಕುವವರೆಗೆ ಚಳಿಯ ಭಯ....ಆಮೇಲೆ!....ನನ್ನ ಮಾತು ಕೇಳು. ಶೇಷಗಿರಿ ಹಂಬಲ ಬಿಟ್ಟು ನೀನು ಬದುಕೋ ಮಾರ್ಗ ನೋಡಿಕೋ."

ಎಂದಳು.

ಅಚ್ಚಮ್ಮ ಕೂಡಲೆ ಯಾವ ಉತ್ತರವನ್ನೂ ಕೊಡಲಿಲ್ಲ. ಮುತ್ತಮ್ಮನ ಆತ್ಮವೃತ್ತಾಂತ ಅವಳ ಅನೇಕ ನಂಬಿಕೆಗಳನ್ನು ಬಲವಾಗಿ ಹಿಡಿದಲುಗಿಸಿತ್ತು. ಅವಳ ಮನಸ್ಸು ಅಶಾಂತಿಯಿಂದ ಅಲ್ಲಕಲ್ಲೋಲವಾಯಿತು. ರಾತ್ರಿಯೆಲ್ಲಾ ಬಿಕ್ಕಿ ಬಿಕ್ಕಿ ಅತ್ತಳು.

'ಈ ಬಾಳಿನಿಂದೇನು ಪ್ರಯೋಜನ. ಶೇಷಗಿರಿಗೆ ನಾನು ಬೇಡವಾದ ಮೇಲೆ ಜೀವಧರಿಸಿ ಏನು ಸಾರ್ಥಕ. ಪ್ರಾಣ ನೀಗಿಕೊಂಡು ನನ್ನ ಸಮಸ್ಯೆಯ ಪರಿಹಾರಮಾಡಿಕೊಳ್ಳಬಾರದೇತಕ್ಕೆ'

ಎಂಬ ಯೋಚನೆ ಅಚ್ಚಮ್ಮನ ಮನಸ್ಸಿನಲ್ಲಿ ಹೊಳೆಯಿತು. ಆದರೆ ಅವಳ ಜೀವ ಒಂದು ಜೀವವಾಗಿರಲಿಲ್ಲ. ಸಿಂಡಾವಸ್ಥೆಯಲ್ಲಿ ತನ್ನ ಮಗು-ಶೇಷಗಿರಿಯ ಮಗು ಕುಳಿತಿತ್ತು. ಅದನ್ನು ತಾನೇ ಕೈಯಾರೆ ಕೊಲ್ಲುವುದೇ? ಶೇಷಗಿರಿಯ ಅಪರಾಧಕ್ಕೆ ಅವನ ನಿರಪರಾಧಿ ಕಂದನಿಗೆ ಶಿಕ್ಷೆಯೇ? ಅಚ್ಚಮ್ಮ ಆತ್ಮಹತ್ಯೆಯ ಯೋಚನೆಯನ್ನು ಮನಸ್ಸಿನಿಂದ ದೂರಮಾಡಿದಳು.

ಮಾರನೆಯ ದಿನ ಮಧ್ಯಾಹ್ನ ಎರಡು ಗಂಟೆಗೇ ರಾಮರಾಜಪ್ಪ ಮುತ್ತಮ್ಮನ ಮನೆಗೆ ಬಂದ.

"ಇದೇನಪ್ಪಾ ಇಷ್ಟು ಬೇಗ ಬಂದುಬಿಟ್ಟೆ" ಎಂದು ಮುತ್ತಮ್ಮ ಕೇಳಿದಳು.

"ಒಂದು ಬಿಲ್ ಬಾಕಿಯಿತ್ತು. ಹಣ ವಸೂಲಿ ಮಾಡಿಕೊಂಡು ಬರುವುದಕ್ಕೆ ಹೋಗಿದ್ದೆ."

"ಹಣ ಬಂತೇ?"

"ನೋಡು"

ಎಂದು ರಾಮರಾಜಪ್ಪ ತನ್ನ ಜೇಬಿನಿಂದ ಒಂದು ನೋಟಿನ ದೊಡ್ಡ ಕಂತೆ ತೆಗೆದು ತೋರಿಸಿದ.

"ಸರಿ. ನಿನಗೆ ಹಣ ಬಂದರೆ ನನಗೆ ಬಂದ ಭಾಗ್ಯವೇನಪ್ಪಾ?"

ಎಂದು ಮುತ್ತಮ್ಮ ಬೇಸರದ ಧ್ವನಿಯಲ್ಲಿ ಕೇಳಿದಳು.

"ಯಾಕಮ್ಮ ಹಾಗಂತೀ. ನೀನು ಯಾವಾಗ ಕೇಳಿದಾಗ ನಾನು ಇಲ್ಲವೆಂದಿದ್ದೇನೆ."

"ಚೆನ್ನಾಗಿದೆ. ಎಷ್ಟಂತೆ ಬೆಲೆ?"

"ಎಂಭತ್ತೆರಡು ರೂಪಾಯಿಯಂತೆ."

"ಸಂತೋಷವಾಗಿ ಉಟ್ಟುಕೊಳ್ಳಮ್ಮ"

ಎಂದು ಸೀರೆಯನ್ನು ಹಿಂದಿರುಗಿಸಿದರು.

ಸೀರೆಯನ್ನು ನೋಡಿದಾರಭ್ಯ ಸುಂದರಮ್ಮನವರ ಮನಸ್ಸಿನಲ್ಲಿ ಸಮಾಧಾನ ಉಳಿಯಲಿಲ್ಲ. ತಲೆಯಲ್ಲಿ ಚಿತ್ರ ವಿಚಿತ್ರ ವಿಚಾರಗಳು ಸುಳಿದವು.

ಒಂದೇ ವಾರದ ಹಿಂದೆ ಶೇಷಗಿರಿ ಕಾಲೇಜ್ ಟರ್ಮ್ ಫೀಸು, ಜಮಖಾನಾ ಫೀಸು, ಯೂನಿಯನ್ ಫೀಸು ಎಂದು ಒಂದು ಪಟ್ಟಿ ಹೇಳಿ ವಲ್ಲಭರಾಯರ ಹತ್ತಿರ ಇನ್ನೂರು ರೂಪಾಯಿ ತೆಗೆದುಕೊಂಡಿದ್ದ. ಅದು ಸಾಲದೆಂದು ಗೋಣಗಿ ತಾಯಿಯ ಹತ್ತಿರ ನೂರು ರೂಪಾಯಿ ವಸೂಲು ಮಾಡಿಕೊಂಡಿದ್ದ.

ಏಕೋ ಶೇಷಗಿರಿ ತೆಗೆದುಕೊಂಡಿದ್ದ ಹಣಕ್ಕೂ ಅಚ್ಚಮ್ಮನ ಧರ್ಮಾವರದ ಸೀರೆಗೂ ಸುಂದರಮ್ಮನವರ ಮನಸ್ಸು ಸಂಬಂಧ ಕಲ್ಪಿಸತೊಡಗಿತು. ತಮ್ಮ ವಿಚಾರಕ್ಕೆ ತಾವೇ ಬೇಸರಪಟ್ಟುಕೊಂಡು

"ಛೆ! ಛೆ! ಎಲ್ಲಿಯಾದರೂ ಉಂಟೇ? ಶೇಷಗಿರಿ ಎಂದಿಗೂ ಅಂಥ ಕೆಲಸಕ್ಕೆ ಕೈಹಾಕುವ ಹುಡುಗನಲ್ಲ"

ಎಂದು ಸಮಾಧಾನ ಮಾಡಿಕೊಳ್ಳಲೆತ್ನಿಸಿದರು. ಸಮಾಧಾನ ಬರಲೊಲ್ಲದು. ಹೆಣ್ಣಿನ ಸಹಜಗುಣ, ತಾಯಿಯ ಕರುಳು ಎರಡೂ ಸಂಚು ನಡೆಸಿ ಸುಂದರಮ್ಮನವರ ಮುಚ್ಚಿದ ಎರಡೂ ಕಣ್ಣುಗಳನ್ನು ತೆರೆಯಲೆತ್ನಿಸಿದ್ದವು. ಅಂದಿನಿಂದ ಸುಂದರಮ್ಮನವರು ಶೇಷಗಿರಿ, ಅಚ್ಚಮ್ಮನ ಚಟುವಟಿಕೆಗಳನ್ನು ಹೆಚ್ಚು ಲಕ್ಷ್ಯಕೊಟ್ಟು ಗಮನಿಸಲಾರಂಭಿಸಿದರು.

ಶೇಷಗಿರಿ ಕಾಲೇಜಿಗೆ ತಪ್ಪಿಸಿಕೊಳ್ಳುವುದು ಕಾಲೇಜಿನಲ್ಲಿ ಬೊಬ್ಬಾಟಕ್ಕೆ ಕಾರಣವಾಯಿತು. ಅವನ ಒಬ್ಬ ಉಪಾಧ್ಯಾಯರು ಎಚ್ಚರಕೊಟ್ಟು 'ನಿನ್ನ ಟರ್ಮ್ ಕೂಡ ಹೋಗುತ್ತಿದೆ ಶೇಷಗಿರಿ' ಎಂದು ಹೇಳಿದರು.

ಒಂದು ದಿನ ಸಂಜೆ ಕಾಲೇಜ್ ಮುಗಿದೊಡನೆಯೇ ಅಪ್ಪು ಶೇಷಗಿರಿಯನ್ನು ಹುಡುಕಿಕೊಂಡು ಮನೆಗೆ ಬಂದ. ಅಚ್ಚಮ್ಮ ಮನೆಯಲ್ಲಿರಲಿಲ್ಲ. ಸುಂದರಮ್ಮನವರು

"ಒಳಗೆ ಬಾಪ್ಪ" ಎಂದು ಅಪ್ಪುವನ್ನು ಕರೆದರು.

ಅಪ್ಪು ಬಂದವನೇ ಕೇಳಿದ

"ಶೇಷಗಿರಿ ಮನೆಯಲ್ಲಿಲ್ಲವೇ ?"

"ಇಲ್ಲ. ಕಾಲೇಜಿನಲ್ಲೇ ಇರಬೇಕು."

"ಇವತ್ತು ಅವನು ಕಾಲೇಜಿಗೇ ಬರಲಿಲ್ಲ."

"ಹತ್ತು ಗಂಟೆಗೇ ಊಟಮಾಡಿಕೊಂಡು ಹೋದನಲ್ಲಾ."

"ಹಾಗೇನು ? ಅವನು ಕಾಲೇಜಿಗೆ ಬರಲಿಲ್ಲ. ಈಗ ಅವನ ಹಾಜರಿ ಕಾಲೇಜಿನಲ್ಲಿ ಬಹಳ ಅಪರೂಪವಾಗುತ್ತಿದೆ."

"ಅಪರೂಪವಾಗುತ್ತಿದೆ !"

"ಹೌದು ತಾಯಿ, ನಾನು ನಿಮ್ಮಲ್ಲಿ ಸುಳ್ಳು ಹೇಳುತ್ತೇನೆಯೇ ?"

ಸುಂದರಮ್ಮನವರು ಚಿಂತಾಕ್ರಾಂತರಾದರು.

"ಅವನೆಲ್ಲಿ ಹೋಗುತ್ತಾನೆ ನಿನಗೆ ಗೊತ್ತೇ ಅಪ್ಪೂ."

"ನನಗೆ ಗೊತ್ತಿಲ್ಲಮ್ಮ. ಈಚೆಗೆ ನಮ್ಮನ್ನು ಕಂಡರೆ ವಿಚಿತ್ರವಾಗಿ ಆಡುತ್ತಾನೆ."

ಸುಂದರಮ್ಮನವರು ಯೋಚನೆಮಾಡಿ

"ನನಗೊಂದು ಉಪಕಾರ ಮಾಡುವೆಯಾ–ಅಪ್ಪೂ."

"ಹೇಳಿ ತಾಯಿ. ಅದಕ್ಕೇನು."

"ಎಂದೆಂದು ಶೇಷಗಿರಿ ಕಾಲೇಜಿಗೆ ಬರುವುದಿಲ್ಲ ನೀನು ಬಂದು ನನಗೆ ತಿಳಿಸಬೇಕು. ಅವನು ಬಂದು ಹೋದರೂ ತಿಳಿಸಬೇಕು."

"ಹಾಗೇ ಆಗಲಿ. ನಾನವನ ಮೇಲೆ ಚಾಡಿ ಹೇಳುತ್ತಿದ್ದೇನೆಂದು ಅವನು ಭಾವಿಸಬಹುದು. ಇದರಿಂದ ನಮ್ಮಿಬ್ಬರ ಸ್ನೇಹಕ್ಕೆ ಭಂಗ ಬರುತ್ತದೆ."

"ನಿನ್ನ ಸ್ನೇಹಿತನ ಹಿತ ನಿನಗೆ ಮುಖ್ಯವಾದುದಲ್ಲವೇ ?"

"ಅಲ್ಲವೆಂದವರು ಯಾರು ?"

"ನಾನು ಹೇಳಿದ ಕೆಲಸ ದಯೆಯಿಟ್ಟು ಮಾಡು."

"ಆಗಲಿ"

ಎಂದು ಒಪ್ಪಿಕೊಂಡ.

ಮಾರನೆಯ ದಿನ ಮಧ್ಯಾಹ್ನ ಒಂದು ಗಂಟೆಗೆ ಅಚ್ಚಮ್ಮ 'ಅಣ್ಣನ

"ಹೋಗಲಿ–ನನಗೊಂದು ಐವತ್ತು ರೂಪಾಯಿಕೊಡು. ನಿನ್ನ ಹೆಸರು ಹೇಳಿ ಒಂದು ಸೀರೆ ತೆಗೆದುಕೊಂಡು ಉಟ್ಟುಕೊಳ್ಳುತ್ತೇನೆ."

"ನಿನ್ನ ಲೆಕ್ಕಾಚಾರವೇ ಸರಿಯಿಲ್ಲ ಮುತ್ತಮ್ಮ."

"ಏಕಪ್ಪಾ ?"

"ಇಪ್ಪತ್ತು ಕೇಳಬೇಕು–ಇಲ್ಲ ನೂರು ಕೇಳಬೇಕು. ಐವತ್ತು ಯಾವ ಲೆಕ್ಕ."

"ಹಾಗಂದರೆ ?"

"ಇಪ್ಪತ್ತಕ್ಕೆ ಮಡಿಸೀರೆ ಬರತ್ತೆ, ನೂರಕ್ಕೆ ಧರ್ಮಾವರದ ಸೀರೆ ಬರತ್ತೆ. ಐವತ್ತಕ್ಕೇನು ಬರತ್ತ ?"

"ನೂರೇ ಕೊಡುತ್ತೀಯೇನು !"

"ಕೊಡುವುದಿಲ್ಲವೆಂದು ಹೇಳಿದೆನೇ ? ನನ್ನ ಕೆಲಸಮಾತ್ರ ಆಗಲಿಲ್ಲ."

"ಸ್ವಲ್ಪ ತಡೆದುಕೊಳ್ಳಬಾರದೇ ? ಪಾಯ ಹಾಕಿದ್ದೇನೆ–ಒಂದೆರಡು ದಿನ ತಡವಾಗಬಹುದು."

"ಕೇಳಿದೆಯಾ ? ಏನೆಂದು ಹೇಳಿದಳು."

"ದಾರೀಗೆ ಬರುತ್ತಿದ್ದಾಳೆ. ಇವತ್ತು ನಾಳೆ ಒಪ್ಪುತ್ತಾಳೆ."

"ಈಗೊಂದು ಸಲ ಕೇಳಿನೋಡು."

"ಈಗ ಬೇಡಪ್ಪ. ನನ್ನ ಮಾತು ತೆಗೆದುಕೋ ?"

"ಕೇಳಮ್ಮ ಎಂದರೆ ಏನೋ ದವಲತ್ತು ಮಾಡುತ್ತೀ"

ಎಂದ. ಮುತ್ತಮ್ಮನಿಗೆ ಉಭಯಸಂಕಟಕ್ಕಿಟ್ಟುಕೊಂಡಿತು. ರಾಮು ರಾಜಪ್ಪನಿಗೆ ಅಸಮಾಧಾನವಾದರೆ ಬರುವ ಕಾಸಿಗೆ ಮೋಸವಾಗುತ್ತದಲ್ಲಾ ಎಂದು ಭಯ. ಅನುಮಾನಿಸುತ್ತಾ ಎದ್ದು ಅಚ್ಚಮ್ಮನ ಕೋಣೆಗೆ ಬಂದು

"ಏನು ಅಚ್ಚಮ್ಮ, ಏನು ಯೋಚನೆ ಮಾಡುತ್ತಿರುವೆ" ಎಂದು ಕೇಳಿದಳು.

'ಏನೂ ಇಲ್ಲಮ್ಮ. ಸುಮ್ಮನೆ ಕುಳಿತುಕೊಂಡೆ."

"ರಾಮುರಾಜಪ್ಪ ಬಂದಿದ್ದಾನೆ."

"ನೋಡಿದೆ."

"ಕೇಳು ಎಂದು ಹೇಳಿದ."

" ನೀವೇನು ಹೇಳಿದಿರಿ."

" ನಿನ್ನ ಕೇಳದೆ ನಾನು ಏನು ಹೇಳಲಿ."

" ಇವತ್ತು ಬೇಡಿಯಮ್ಮ."

" ನಾಳೆ ಬಾ ಅನ್ನಲೇ ?"

ಅಚ್ಚಮ್ಮ ಕ್ಷಣಕಾಲ ಯೋಚನೆ ಮಾಡಿದಳು. ತನಗೆ ಕಾದಿದ್ದ ಜೀವನದ ಚಿತ್ರ ಸುಸ್ಪಷ್ಟವಾಗಿ ಎದುರಿಗೆ ನಿಂತಿತು. ಅದು ಅನಿವಾರ್ಯವಾಗಿ ಅಪರಿಹಾರ್ಯವಾಗಿರುವಾಗ ಇಂದೇನು ನಾಳೆಯೇನು ?

" ಏನು ಹೇಳಲಮ್ಮ" ಎಂದು ಮುತ್ತಮ್ಮ ಮತ್ತೆ ಕೇಳಿದಳು.

" ನಾಳೆ ಬರಹೇಳ "

ಎಂದಳು.

ಅಂದೇ ಕೆಲಸ ಕೈಗೂಡಲಿಲ್ಲವೆಂದು ರಾಮರಾಜಪ್ಪನಿಗೆ ತುಸು ಅಸಮಾಧಾನವಾಯಿತು. ಆದರೆ ಮಾರನೆಯ ದಿವಸ ಸಾಧ್ಯವಾಗುತ್ತದೆಂದು ನೆನೆದು ಅವನು ಸಂತೋಷಪಟ್ಟುಕೊಂಡು ಮುತ್ತಮ್ಮನ ಕೈಗೆ ನೂರು ರೂಪಾಯಿ ಹಾಕಿಹೋದ.

ಮಾರನೆಯ ದಿನ ರಾಮರಾಜಪ್ಪ ಬರುವ ವೇಳೆಗೆ ಸ್ನಾನ ಊಟಮುಗಿಸಿ ತಲೆ ಬಾಚಿಕೊಂಡು, ಶುಭ್ರವಾದ ವಸ್ತ್ರ ಧರಿಸಬೇಕೆಂದು ಮುತ್ತಮ್ಮ ಅಚ್ಚಮ್ಮನಿಗೆ ಸೂಚಿಸಿದಳು.

ಮನಸ್ಸಿಗೆ ಮುದವಿಲ್ಲದಿದ್ದರೂ ಅಚ್ಚಮ್ಮ ಅಲಂಕಾರ ಮಾಡಿಕೊಂಡಳು.

ಮುತ್ತಮ್ಮ ಅವಳ ಸಮೀಪಕ್ಕೆ ಬಂದು

" ರಾಮರಾಜಪ್ಪ ಬಹಳ ಒಳ್ಳೆಯವನಮ್ಮ, ಉದಾರಿ, ದಿಲ್ದಾರ್ ಮನುಷ್ಯ. ದುಡ್ಡಿನ ಮುಖ ನೋಡುವವನಲ್ಲ. ಒಂದೊಂದು ದಿನ ಇಲ್ಲೇ ನೂರಿನ್ನೂರು ರೂಪಾಯಿ ಖರ್ಚುಮಾಡುತ್ತಾನೆ. ಅವನಿಗೆ ನೀನು ಪ್ರಿಯವಾಗಿದ್ದರೆ ನಿನ್ನ ಭಾಗ್ಯದ ಬಾಗಿಲು ತೆಗೆಯುತ್ತದೆ. ಆದರೊಂದು ವಿಷಯ ನೀನು ಜ್ಞಾಪಕದಲ್ಲಿಟ್ಟುಕೊಂಡಿರಬೇಕು."

" ಏನದು ಹೇಳಿ."

" ಅವನಾಗಲಿ ಬೇರೆಯವರಾಗಲಿ ನಿನಗೆ ಕೊಡುವ ಹಣದ ಅರ್ಧಭಾಗ ನನಗೆ ಕೊಟ್ಟುಬಿಡಬೇಕು."

“ಎಲ್ಲಾ ನೀವೇ ತೆಗೆದುಕೊಳ್ಳಿ. ನಾನು ಬೇಡವೆನ್ನುತ್ತೇನೆಯೇ ?”

“ಅದಕ್ಕೇ ನಿನ್ನ ಹುಚ್ಚಿ ಎಂದು ನಾನು ಕರೆಯುವುದು. ನೀನೂ ಬದುಕಬೇಕು, ನಾನೂ ಬದುಕಬೇಕು. ವಯಸ್ಸಿರುವಾಗ, ಮೈ ಗಟ್ಟಿಯಾಗಿರುವಾಗ ಕೈಗೆ ನಾಲ್ಕುಕಾಸು ಮಾಡಿಕೋ. ನಮ್ಮ ಮನೆಗೆ ಬಂದದ್ದಕ್ಕೆ ನೀನು ‘ಅಯ್ಯೋ’ ಎಂದುಕೊಳ್ಳಬಾರದು.”

“ಹಾಗೇ ಆಗಲಿ. ನಿಮ್ಮ ಇಷ್ಟದಂತೆಯೇ ನಾನು ನಡೆದುಕೊಳ್ಳುತ್ತೇನೆ” ಎಂದು ಒಪ್ಪಿಗೆಯಿತ್ತಳು.

ಅಚ್ಚಮ್ಮನ ಗಂಭೀರವದನ ನೋಡಿ ಮುತ್ತಮ್ಮ ಕೇಳಿದಳು

“ಇನ್ನೂ ಏನು ಯೋಚನೆ ?”

“ಏನೂ ಇಲ್ಲ. ನಾನು ಹೇಳಿದರೆ ನೀವು ಬಯ್ಯುವಿರೇನೋ ?”

“ಹೇಳು, ಬಯ್ಯುವುದೇಕೆ ?”

“ಅವರನ್ನು ಹೇಗಾದರೂ ಒಮ್ಮೆ ಇಲ್ಲಿ ಬರಮಾಡಲಾಗುವುದಿಲ್ಲವೇ ?”

“ಶೇಷಗಿರಿಯನ್ನೇ ! ಅವನ ಭ್ರಾಂತಿ ನಿನಗಿನ್ನೂ ಇಳಿದಿಲ್ಲ. ಅವನೆಲ್ಲಿ ಸಿಕ್ಕುತ್ತಾನೆ ಎಂದು ಹುಡುಕಲಿ ?”

“ಮನೆ ಗುರುತು ನಾನು ಹೇಳುತ್ತೇನೆ.”

“ಅವರ ಮನೆ ಬಾಗಿಲಿಗೆ ನಾನು ಹೋಗಲ್ಲಮ್ಮ.”

“ನಾಗರಾಜನನ್ನು ಕಳಿಸಿದರೆ.”

“ಅವನು ಹೋಗುವುದಿಲ್ಲಮ್ಮ. ಅವನ ಸ್ವಭಾವ ನೀನು ಕಾಣೆ. ಕಳೆದುಹೋದದ್ದು ಹೋಯಿತು. ಎಷ್ಟು ದಿವಸ ಋಣಾನುಬಂಧವೋ ಅಷ್ಟೇ ದಿವಸ ಪ್ರಾಪ್ತಿ. ಶೇಷಗಿರಿ ನಿನ್ನ ಭಾಗಕ್ಕೆ ಇಲ್ಲವೆಂದುಕೊಂಡು ಅವನನ್ನು ಮರೆತುಬಿಡು.”

ಮರೆಯಲೆತ್ನಿಸುತ್ತಾ ಅಚ್ಚಮ್ಮ ರೂಮಿನಲ್ಲಿ ಕುಳಿತುಕೊಂಡಳು. ಆದರೆ ಮರವಿಗಿಂತ ನೆನಹೇ ಹೆಚ್ಚಾಗಿ ಬಂದು ಕಾಡುತ್ತಿತ್ತು.

ಹೊರಗಡೆ ಯಾರೋ ಬಂದು ಬಾಗಿಲಿನ ಹತ್ತಿರ ಬೈಸಿಕಲ್ ಇಟ್ಟು ಒಳಕ್ಕೆ ಬಂದಂತಾಯಿತು.

ಅಚ್ಚಮ್ಮನ ಎದೆ ಝಲ್ಲೆಂದಿತು.

ರಾಮರಾಜಪ್ಪನ ಧ್ವನಿ ಕೇಳಿಸಿತು. ಅವನೂ ಮುತ್ತಮ್ಮ ಪಿಸಿಪಿಸಿ ಮಾತನಾಡುತ್ತಿದ್ದುದು ಕೇಳಬಂತು. ಮುತ್ತಮ್ಮ ಒಳಕ್ಕೆ ಬಂದು

“ರಾಮರಾಜಪ್ಪ ಬಂದಿದ್ದಾನಮ್ಮ. ಒಳಕ್ಕೆ ಕಳಿಸಲೋ?”

ಅಚ್ಚಮ್ಮ ಉತ್ತರ ಹೇಳಲಿಲ್ಲ. ಅವಳ ಕಣ್ಣಿಂದ ಒಂದೆರಡು ಹನಿ ಮಿಡಿಯಿತು. ಮುತ್ತಮ್ಮ ಅದನ್ನು ನೋಡದಂತೆ ಒಂದು ಪಕ್ಕಕ್ಕೆ ತಿರುಗಿ ಕಣ್ಣು ಒರಸಿಕೊಂಡಳು.

“ಬೇಗ ಹೇಳು–ನಿನ್ನದೊಂದು ರಾಮಾಯಣ–ನಾನು ಸ್ವಲ್ಪ ಹೊರಗೆ ಹೋಗಿಬರಬೇಕು.”

“ಎಷ್ಟು ಹೊತ್ತಿಗೆ ಬರುತ್ತೀರಿ.”

“ಕಾಫಿ ತಿಂಡಿ ಬೇಕಂತೆ–ತೆಗೆದುಕೊಂಡು ಅರ್ಧ ಗಂಟೆಯಲ್ಲಿ ಬರುತ್ತೇನೆ. ನಾನು ಹೋದ ಮೇಲೆ ಒಳಗೆ ತಲೆಬಾಗಿಲು ಚಿಲಕ ಹಾಕಿಕೋ. ನಾನು ಬಂದು ಕೂಗುತ್ತೇನೆ–ಆಮೇಲೆ ತೆಗೆದರಾಯಿತು.”

ಮುತ್ತಮ್ಮನ ಹಿಂದೆ ಅಚ್ಚಮ್ಮ ಹೋದಳು. ತೊಟ್ಟಿಯಲ್ಲಿ ಮುತ್ತಮ್ಮನ ಮಂಚದ ಮೇಲೆ ಪದ್ಮಾಸನ ಹಾಕಿಕೊಂಡು ಸಿಗರೇಟ್ ಸೇದುತ್ತಾ ರಾಮರಾಜು ಕುಳಿತಿದ್ದ. ಮಂಚದ ಮುಂದೆ ಅವನ ಪಂಪ್‌ಷೂಸ್‌ಗಳು ಬಿದ್ದಿದ್ದವು.

“ಮನೆ ಜೋಕೆ” ಎಂದು ಮುತ್ತಮ್ಮ ಅಚ್ಚಮ್ಮನಿಗೆ ಹೇಳಿದಳು.

“ನಾನು ಹೋಗಿಬರುತ್ತೇನಪ್ಪಾ” ಎಂದು ರಾಮರಾಜಪ್ಪನಿಗೆ ಹೇಳಿದಳು.

“ಒಳ್ಳೆಯದಮ್ಮಾ”

ಅಚ್ಚಮ್ಮ ತಲೆಬಾಗಿಲು ಹಾಕಿ ಅಲ್ಲಿಯೇ ಸ್ವಲ್ಪ ಹೊತ್ತು ನಿಂತಳು. ರಾಮರಾಜಪ್ಪ ಅವಳನ್ನು ನೋಡಿ

“ಒಳಗೆ ಬಾ–ಅಲ್ಲೇಕೆ ನಿಂತಿದ್ದೀಯಾ?” ಎಂದ.

ಅಚ್ಚಮ್ಮ ಹೊರಗಿನ ತೊಟ್ಟಿಬಿಟ್ಟು ಒಳಗಿನ ತೊಟ್ಟಿಗೆ ಬಂದು ರಾಮರಾಜಪ್ಪನ ಎದುರು ಗೋಡೆ ಒರಗಿಕೊಂಡು ನಿಂತಳು.

“ದೂರ ನಿಂತಿದ್ದೀಯಲ್ಲಾ. ಇಲ್ಲಿ ಬಂದು ಹತ್ತಿರ ಕೂಡಬಾರದೇ?”

ಅಚ್ಚಮ್ಮ ನಿಂತಲ್ಲಿಯೇ ನಿಂತಿದ್ದಳು. ರಾಮರಾಜಪ್ಪ ಎದ್ದುಹೋಗಿ

ಅವಳ ಕೈಹಿಡಿದು ಕರೆತಂದು ಮಂಚದಮೇಲೆ ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಅವಳ ಗಲ್ಲ ಹಿಡಿದೆತ್ತಿ

"ಕಣ್ಣುಬಿಟ್ಟು ನನ್ನ ನೋಡುವುದಿಲ್ಲವೇ ?"

"ನೋಡಿದೆನಲ್ಲಾ."

"ಇನ್ನೂ ಅನುಮಾನಿಸುತ್ತಿರುವೆಯಲ್ಲ."

ಅಚ್ಚಮ್ಮ ಮಾರುತ್ತರಗೊಡಲಿಲ್ಲ.

"ಏನು ಚಿಂತೆ ಇದೆ ಹೇಳು—ನಾನು ಪರಿಹಾರಮಾಡುತ್ತೇನೆ."

"ಚಿಂತೆಯೇನೂ ಇಲ್ಲ."

"ಏನೂ ಇಲ್ಲದಿದ್ದರೆ ಹೀಗಿರುತ್ತಿದ್ದೆಯಾ ?"

"ಹೇಗಿದ್ದೇನೆ."

"ಕನ್ನಡಿ ತಂದು ಮುಂದೆ ಹಿಡಿಯಲೇ ?"

"ಬೇಡ."

ರಾಮುರಾಜಪ್ಪ ಪರ್ಸ್ ತೆಗೆದು ಐವತ್ತು ರೂಪಾಯಿ ತೆಗೆದುಕೊಂಡು ಅವಳ ಕೈಯಲ್ಲಿಟ್ಟು

"ಇದು ನಿನ್ನದು. ಮುತ್ತಮ್ಮನಿಗೆ ಹೇಳಬೇಡ. ಅವಳಿಗೆ ಕೊಡಬೇಕಾದುದನ್ನು ನಾನು ಕೊಡುತ್ತೇನೆ."

"ನನಗೇಕೆ ಇಷ್ಟೊಂದು ದುಡ್ಡು."

"ಈ ಮಾತು ನಾನು ಇವತ್ತೇ—ನಿನ್ನ ಬಾಯಿಂದಲೇ – ಕೇಳಿದ್ದು. ಇರಲಿ, ತೆಗೆದುಕೋ. ನಿನಗೆ ಏನು ಬೇಕು ಹೇಳು, ತಂದುಕೊಡುತ್ತೇನೆ."

ಅಚ್ಚಮ್ಮನ ಮನಸ್ಸಿನಲ್ಲಿ ಮಹಾಯುದ್ಧವಾಗುತ್ತಿತ್ತು. ರಾಮುರಾಜಪ್ಪ ಉದಾರಿಯಾಗಿ ನಡೆದುಕೊಂಡಿದ್ದ, ತನ್ನ ವಿಶ್ವಾಸವನ್ನು ಯಾಚಿಸುತ್ತಿದ್ದ. ಅವನು ಕೊಟ್ಟ ಹಣಕ್ಕೆ ಪ್ರತಿಯಾಗಿ ಸರಿಯಾಗಿ ನಡೆದುಕೊಳ್ಳುವುದು ತನ್ನ ಧರ್ಮವೆಂದು ಬಗೆದಳು. ಹಾಗೆ ನಡೆದುಕೊಳ್ಳದಿದ್ದರೆ ಮುತ್ತಮ್ಮನ ಕೋಪವನ್ನೆದುರಿಸಬೇಕಾಗಿತ್ತು. ಮನೆ ಬಿಟ್ಟು ಆಚೆ ಮುತ್ತಮ್ಮ ಕಳಿಸಿದರೆ ತನ್ನ ಪಾಡೇನು ಎಂಬ ಚಿಂತೆ ಹತ್ತಿತ್ತು.

ಮೌನಳಾಗಿದ್ದ ಅಚ್ಚಮ್ಮನನ್ನು ನೋಡಿ ರಾಮುರಾಜಪ್ಪ

"ಇನ್ನೂ ಯೋಚನೆಮಾಡುತ್ತಿರುವೆಯಲ್ಲ. ನಾನು ಕೊಟ್ಟದ್ದು ಸಾಲದೇ?"

"ಛೆ! ಛೆ! ಇಷ್ಟೇಕ ಎಂದು ನಾನೇ ಕೇಳಲಿಲ್ಲವೇ? ನನಗೆ ದುಡ್ಡಿನ ದಾಹವಿಲ್ಲ."

"ಇನ್ನು ಯಾವ ದಾಹವಿದೆ ಹೇಳು."

"ಯಾವದೂ ಇಲ್ಲ. ವಿಶ್ವಾಸ ಒಂದಿದ್ದರೆ ನಾಕು."

ರಾಮರಾಜಪ್ಪನ ಮುಖ ಅರಳಿತು. ಎದ್ದು ನಿಂತು ಅಚ್ಚಮ್ಮನನ್ನು ಎಬ್ಬಿಸಿ ರೂಮಿಗೆ ಕರೆದುಕೊಂಡು ಹೋದ.

ಮುತ್ತಮ್ಮ ಹಿಂದಿರುಗಿ ಬಂದು ಬಾಗಿಲು ಬಡಿದಾಗ ಇಬ್ಬರೂ ಹೊರಗಿನ ಮಂಚದ ಮೇಲೆ ಮಾತನಾಡುತ್ತ ಕುಳಿತಿದ್ದರು. ಬಿಸಿಲಿನಲ್ಲಿ ಬಂದ ದಣಿವನ್ನು ಸುಧಾರಿಸಿಕೊಳ್ಳುತ್ತಾ ಮುತ್ತಮ್ಮ ಕೈಯಲ್ಲಿದ್ದ ಚೀಲ, ಪಾತ್ರೆ ಕೆಳಗಿಟ್ಟು ಕುಳಿತುಕೊಂಡಳು.

"ವಿಪರೀತ ಬಿಸಿಲು" ಎಂದ ರಾಮರಾಜಪ್ಪ.

"ಬಿಸಿಲಾದರೇನು, ಮಳೆಯಾದರೇನು—ನೀನು ಕೇಳಬೇಕಲ್ಲಪ್ಪ."

"ಗಾಡಿಮಾಡಿಕೊಂಡು ಬರಬೇಕಾಗಿತ್ತು."

"ಕಾಫಿ ತುಳುಕಿ ಚೆಲ್ಲಿಹೋಗುತ್ತದಲ್ಲಾ ಎಂದು ನಡೆದೇ ಬಂದುಬಿಟ್ಟೆ."

"ನಾಗರಾಜ ಎಲ್ಲಿ?"

"ಎಲ್ಲಿ ಹಾಳಾಗಿ ಹೋದನೋ!"

ಒಳಗೆ ಹೋಗಿದ್ದ ಅಚ್ಚಮ್ಮನನ್ನು ಕೂಗಿ

"ತಿಂಡಿ ಕಾಫಿ ರಾಮರಾಜಪ್ಪನಿಗೆ ಕೊಡಮ್ಮಾ" ಎಂದಳು.

"ಎಲ್ಲರಿಗೂ ಕೊಡು" ಎಂದು ರಾಮರಾಜಪ್ಪ ಹೇಳಿದ.

ಅಚ್ಚಮ್ಮ ಪೊಟ್ಟಣಗಳನ್ನು ಬಿಚ್ಚಿ ರಾಮರಾಜಪ್ಪನಿಗೂ ಮುತ್ತಮ್ಮನಿಗೂ ಎರಡೆರಡು ಜಾಂಗೀರು, ಪಕೋಡ, ಚೌಚೌ ಇಟ್ಟುಕೊಟ್ಟಳು. ಕಾಫಿಯನ್ನು ಲೋಟಗಳಿಗೆ ಬಗ್ಗಿಸಿ ಅವರ ಮುಂದಿಟ್ಟಳು. ತಾನು ಸ್ವಲ್ಪ ತಿಂಡಿ ತೆಗೆದುಕೊಂಡು ಅಡಿಗೆಯ ಮನೆಗೆ ಹೋದಳು.

ತಿಂಡಿ ತಿನ್ನುತ್ತಿರುವಂತೆ ಮುತ್ತಮ್ಮ ಮೆಲ್ಲನೆದ್ದು ರಾಮರಾಜಪ್ಪನ ಬಳಿಗೆ ಬಂದು

"ಸರಿಯಾಗಿ ಇದ್ದಳೇನಪ್ಪ." ಎಂದಳು

"ಸರಿಯಾಗಿಯೇ ಇದ್ದಳು—ಆದರೆ ಅವಳ ಮನಸ್ಸಿನಲ್ಲಿ ಏನೋ ದುಃಖ."

"ಹೌದು—ಒಂದೆರಡು ದಿನದಲ್ಲಿ ಸರಿಹೋಗುತ್ತದೆ"

"ಏನದು ದುಃಖ?"

"ನಿಧಾನವಾಗಿ ಹೇಳುತ್ತೇನೆ. ಇವತ್ತು ಬೇಡ. ಎಷ್ಟು ಕೊಟ್ಟೆ?"

"ಅದು ನಿನಗೇಕೆ? ನಿನಗೆ ಕೊಡುವುದು ಕೊಟ್ಟರಾಯಿತಲ್ಲೋ?"

"ಸುಮ್ಮನೆ ಕೇಳಿದೆ. ಹೇಳಿರು. ಪರವಾಗಿಲ್ಲ. ನಾನೇನು ಅವಳ ಹತ್ತಿರ ಕಿತ್ತುಕೊಳ್ಳುವುದಿಲ್ಲ."

ರಾಮರಾಜಪ್ಪ ತನ್ನ ಬಲಗೈಯ ಐದು ಬೆರಳು ತೋರಿಸಿದ.

ಇಬ್ಬರ ಉಪಹಾರ ಮುಗಿಯಿತು. ಕುಳಿತಲ್ಲಿಗೇ ನೀರು ತರಿಸಿಕೊಂಡು ಕುಡಿದು ಮುತ್ತಮ್ಮ ಲೋಟಕ್ಕೆ ಕೈ ಅಲುಬಿದಳು ಅಚ್ಚಮ್ಮ ಪಾತ್ರೆಗಳನ್ನು ತೆಗೆದುಕೊಂಡು ಹೋಗಲು ಬಂದಾಗ

"ಹೂವಿದೆ—ತಲೆತುಂಬ ಮುಡಿದುಕೋ."

ಎಂದಳು.

ರಾಮರಾಜಪ್ಪ ಸಾವಕಾಶವಾಗಿ ಕುಳಿತು ಎರಡು ಸಿಗರೇಟ್ ಮುಗಿಸಿ, ಮುತ್ತಮ್ಮನಿಗೆ ಕಣ್ಸನ್ನೆಮಾಡಿ ರೂಮಿಗೆ ಎದ್ದು ಹೋದ. ಮುತ್ತಮ್ಮ ಅಚ್ಚಮ್ಮನನ್ನು ಅಲ್ಲಿಗೆ ಕಳಿಸಿಕೊಟ್ಟು ತಲೆಬಾಗಿಲೆದುರಿಗೆ ಅಕ್ಕಿ ಆರಿಸುತ್ತ ಕುಳಿತಳು.

ಸ್ವಲ್ಪಹೊತ್ತಿನಲ್ಲಿ ವೆಂಕಟಮ್ಮ ಬಂದು ಮುತ್ತಮ್ಮನ ಜತೆ ಮಾತನಾಡುತ್ತ ಕುಳಿತಳು.

ರಾಮರಾಜಪ್ಪ ಹೊರಗೆ ಬಂದು ಮುಖ ತೊಳೆದುಕೊಂಡು ವೆಂಕಟಮ್ಮನನ್ನು ನೋಡಿ

"ಏನು ವೆಂಕಟಿ—ಬಹಳ ದಿವಸಕ್ಕೆ ಬಂದೆ"

ಎಂದು ಮಾತನಾಡಿಸಿ, ಬಟ್ಟೆಹಾಕಿಕೊಂಡು, ಮುತ್ತಮ್ಮನನ್ನು ಕರೆದು ಅವಳ ಕೈಯಲ್ಲಿ ಇಪ್ಪತ್ತು ರೂಪಾಯಿ ಹಾಕಿ ಹೊರಡಲನುವಾದ.

"ಪುನಃ ಯಾವಾಗಪ್ಪಾ ಬರುವುದು" ಎಂದಳು.

"ನಾಡಿದ್ದು ಬರುತ್ತೇನೆ. ಮಧ್ಯಾಹ್ನ ಬರುವುದಕ್ಕಾಗದಿದ್ದರೆ ರಾತ್ರಿ ಬರುತ್ತೇನೆ."

"ಅದೇನಾದರೂ ತರಿಸಿಡಬೇಕೇ?"

"ಅವಳು ತೆಗೆದುಕೊಳ್ಳುತ್ತಾಳೆಯೇ?"

"ಪಾಪ! ಅದರ ಗಂಧವನ್ನೂ ಕಾಣಳು."

"ಹೋಗಲಿ ಬಿಡು—ಅದೇ ಬೇಡ."

"ನನಗೆ...."

"ನಿನಗೆ ಬೇಕಾಗಿತ್ತೇನು?"

"ಎಷ್ಟು ದಿವಸವಾಯ್ತು—ನೀನೇ ಯೋಚಿಸು."

"ನಾನು ಬರುವಾಗ ನಿನಗೆ ತಂದುಕೊಡುತ್ತೇನೆ—ಬರುತ್ತೇನೆ."

ಎಂದು ಮುತ್ತಮ್ಮನಿಗೆ ಹೇಳಿ, ಅಚ್ಚಮ್ಮನನ್ನು ಮತ್ತೊಮ್ಮೆ ಕಣ್ತುಂಬ ನೋಡಿ ಬೈಸಿಕಲ್ ಹತ್ತಿ ಹೊರಟುಬಿಟ್ಟ.

ರಾಮರಾಜಪ್ಪ ಹೋದಮೇಲೆ ಅಚ್ಚಮ್ಮ ಮುತ್ತಮ್ಮನನ್ನು ಒಳಕ್ಕೆ ಕರೆದು ಅವನು ಕೊಟ್ಟಿದ್ದ ಐವತ್ತು ರೂಪಾಯಿಗಳನ್ನು ಅವಳ ಕೈಗೆ ಹಾಕಿದಳು. ಮುತ್ತಮ್ಮ ನಾವಕಾಶವಾಗಿ ನೋಟುಗಳನ್ನೆಣಿಸಿ ಇಪ್ಪತ್ತೈದು ರೂಪಾಯಿಗಳನ್ನು ತೆಗೆದು ಅಚ್ಚಮ್ಮನಿಗೆ ಕೊಡುತ್ತಾ

"ಯಾವಾಗಲೂ ಹೀಗೇ ನೀಯತ್ತಾಗಿದ್ದರೆ ನಿನಗೇ ಒಳ್ಳೆಯದು."

ಎಂದು ಉಪದೇಶವಿತ್ತು ಉಳಿದ ನೋಟುಗಳನ್ನು ಸೊಂಟಕ್ಕೆ ಸೇರಿಸಿದಳು.

ಮುತ್ತಮ್ಮನ ಮನೆಯ ಜೀವನಕ್ಕೆ ಅಚ್ಚಮ್ಮ ಕಾಲಕ್ರಮೇಣ ಹೊಂದಿಕೊಳ್ಳಲಾರಂಭಿಸಿದಳು. ರಾಮರಾಜಪ್ಪ ಆಗಾಗ್ಗೆ ಬಂದು ಹೋಗುತ್ತಿದ್ದ. ರಾಮರಾಜಪ್ಪನೊಬ್ಬನನ್ನು ತೃಪ್ತಿಪಡಿಸುವುದರಲ್ಲಿ ಅಚ್ಚಮ್ಮನ ಕರ್ತವ್ಯ ಮುಗಿಯುತ್ತಿರಲಿಲ್ಲ. ಮುತ್ತಮ್ಮನ ಮನೆಗೆ ಬರುತ್ತಿದ್ದವರು ಯಾರೂ ನಿಷ್ಫಲರಾಗಿ ಹೋಗುವಂತಿರಲಿಲ್ಲ. ವೆಂಕಟಿ, ನಾಗು, ಕಮಲ ಯಾರೂ ಬರದಿದ್ದ ದಿವಸ ಎಲ್ಲ ಅತಿಥಿಗಳನ್ನು ಆದರಿಸುವ ಕೆಲಸ ಅಚ್ಚಮ್ಮನದಾಗುತ್ತಿತ್ತು.

ಒಂದೊಂದು ದಿನ ಬೆಳಿಗ್ಗೆಯಿಂದ ಸಂಜೆಯವರೆಗೆ ಒಂದೇ ಸಮನಾಗಿ

ಗಾಣದೆತ್ತಿನಂತೆ ದುಡಿದು ಹಾಸಿಗೆ ಕಂಡೇನೇ ಎಂದು ಅಚ್ಚಮ್ಮ ಇರುತ್ತಿದ್ದಳು. ರಾತ್ರಿ ಯಾರಾದರೂ ಬಂದು ಬಾಗಿಲು ಬಡಿಯುತ್ತಿದ್ದರು. ಮುತ್ತಮ್ಮ ಎದ್ದು ಬಾಗಿಲು ತೆಗೆಯುತ್ತಿದ್ದಳು. ಐದು ನಿಮಿಷದಲ್ಲಿ ಅಚ್ಚಮ್ಮನಿಗೆ ಕರೆ ಬರುತ್ತಿತ್ತು. 'ಸಾಧ್ಯವಿಲ್ಲ. ನನಗೆ ಆಯಾಸವಾಗಿದೆ' ಎಂದು ಹೇಳಿಕೊಳ್ಳುವುದು ಅಚ್ಚಮ್ಮನಿಗೆ ಸಾಧ್ಯವಾಗಲಿಲ್ಲ.

ಈ ದುಡಿಮೆಯನ್ನು ಬಹಳ ದಿವಸಕಾಲ ಸತತವಾಗಿ ಅಚ್ಚಮ್ಮ ಅನುಭವಿಸಲಾರಳೆಂದು ಮುತ್ತಮ್ಮ ಕಂಡುಕೊಂಡಳು. ಒಂದು ರಾತ್ರಿ ಅಚ್ಚಮ್ಮ ತೀರ ಸುಸ್ತಾಗಿ ಮಲಗಿದ್ದಳು. ಮುತ್ತಮ್ಮ ಬಿಸಿನೀರಿಗೆ ಒಂದು ಔಷಧ ಬೆರಸಿ ಕುಡಿಸಿದಳು. ರಾತ್ರಿ ಚೆನ್ನಾಗಿ ನಿದ್ರೆ ಬಂತು. ಬೆಳಗಾಗುವ ಹೊತ್ತಿಗೆ ದಣಿವು ಸ್ವಲ್ಪ ಪರಿಹಾರವಾಗಿತ್ತು.

"ಅದೇನ್ರೀ.... ರಾತ್ರಿ ನೀವು ಕುಡಿಸಿದ್ದು" ಎಂದು ಅಚ್ಚಮ್ಮ ಕೇಳಿದಳು.

"ಅದೊಂದು ಸಿದ್ಧೌಷಧ. ಎಂಥ ದಣಿವನ್ನಾದರೂ ಪರಿಹಾರಮಾಡಬಲ್ಲುದು."

"ದುರ್ವಾಸನೆ !"

"ಔಷಧದ ವಾಸನೆ, ರುಚಿ ನೋಡಬಾರದಮ್ಮ."

ನಾಲ್ಕು ದಿನ ಔಷಧ ಸೇವಿಸಿದ ಮೇಲೆ ಅಚ್ಚಮ್ಮ ಅದರ ವಾಸನೆ, ರುಚಿ ಮರೆಯಲು ಸಾಧ್ಯವಾಯಿತು. ಸಂಜೆಯಾಯಿತೆಂದರೆ ಅವಳಲ್ಲಿ ವಿಚಿತ್ರ ದಾಹ ಹುಟ್ಟುತ್ತಿತ್ತು. ಬಾಯಿ ಒಣಗಿ ಹೋಗುತ್ತಿತ್ತು. ತಲೆ ಒಡೆಯುವಂಥ ಶೂಲೆ. ಅಚ್ಚಮ್ಮನ ಅವಸ್ಥೆ ನೋಡಿ ಮುತ್ತಮ್ಮನೇ ಹೋಗಿ 'ಔಷಧ' ತಂದುಕೊಡುತ್ತಿದ್ದಳು. ರಾಮರಾಜಪ್ಪ ಬಂದ ದಿನ ಔಷಧದ ಒಂದೆರಡು ಶೀಷೆಗಳನ್ನು ತಂದು ಮುತ್ತಮ್ಮನ ಕೈಯಲ್ಲಿಟ್ಟು ಹೋಗುತ್ತಿದ್ದ.

ಅಚ್ಚಮ್ಮನಲ್ಲಿ ತೃಪ್ತಿಪಟ್ಟುಕೊಳ್ಳುವುದು ರಾಮರಾಜಪ್ಪನ ರಕ್ತ ಗುಣವಾಗಿರಲಿಲ್ಲ. ಕೆಲವು ದಿನಗಳ ಸಹವಾಸಾನಂತರ ಅವನಿಗೆ ಬೇಸರಿಕೆ ತೋರಿತು. 'ಅಚ್ಚಮ್ಮ ಸಾಕು—ಬೇರೆ ಯಾರನ್ನಾದರೂ ಕರೆಸು' ಎಂದು ಮುತ್ತಮ್ಮನಿಗೆ ಸೂಚನೆಯನ್ನಿತ್ತ. ಅವನ ಮನಸ್ಸು ತೃಪ್ತಿಪಡಿಸುವುದು ತನ್ನ ಪರಮ ಧರ್ಮವೆಂದು ಬಗೆದಿದ್ದ ಮುತ್ತಮ್ಮ ಕಮಲನನ್ನು ಕರೆಸಿದಳು.

ರಾಮರಾಜಪ್ಪ ತನ್ನೆದುರಿನಲ್ಲೇ ಬೇರೆಯವರ ಜತೆಗಿರುತ್ತಿದ್ದುದನ್ನು

ಅಚ್ಚಮ್ಮ ನೋಡುತ್ತಿದ್ದಳು. ಒಂದೆರಡು ದಿನ ಮನಸ್ಸು ಸ್ವಲ್ಪ ನೊಂದಿತು. ‘ ಬೇಡವೆಂದು ಹೇಳುವುದಕ್ಕೆ ನನಗೇನು ಅಧಿಕಾರ ’ ಎಂದುಕೊಂಡಳು.

ಕಿತ್ತುಕೊಂಡು ತಿನ್ನುವವರಿಗೆ ನಾಲ್ಕುಕಾಸು ಕೊಟ್ಟು, ‘ ಔಷಧ ’ ಕ್ಕೆ ಖರ್ಚುಮಾಡಿದರೂ ಅಚ್ಚಮ್ಮನ ಕೈಯಲ್ಲಿ ಸ್ವಲ್ಪ ಹಣವಿತ್ತು. ಅದನ್ನು ಬಹಳ ಜೋಪಾನದಿಂದ ಕಾಯ್ದುಕೊಂಡಿದ್ದಳು.

ಅಚ್ಚಮ್ಮನಿಗೆ ಆರು ತಿಂಗಳು ತುಂಬಿತು. ಇನ್ನು ದುಡಿಮೆ ಸಾಧ್ಯವಿರಲಿಲ್ಲ. ಕೂಡಿಕೆ ಹಣದಿಂದ ಚರಿತಾರ್ಥ ನಾಗಬೇಕಾಗಿತ್ತು. ಅಚ್ಚಮ್ಮನನ್ನು ಕೂಡಿಸಿ ತಿನ್ನಲು ಹಾಕಬೇಕಲ್ಲಾ ಎಂದು ಮುತ್ತಮ್ಮ ಸಿಡಿಗುಟ್ಟುತ್ತಿದ್ದಳು.

ಅಚ್ಚಮ್ಮನಿಗೆ ಮುತ್ತಮ್ಮ ಹಿಂಸೆ ಕೊಡಹೋಗಲಿಲ್ಲ. ಆಗಾಗ್ಗೆ ಗದರಿಸಿಕೊಳ್ಳುತ್ತಿದ್ದಳು – ಬಯ್ಯುತ್ತಿದ್ದಳು – ಆದರೆ ಹೊತ್ತುಹೊತ್ತಿಗೆ ಅವಳಿಗೆ ಊಟಕ್ಕಿಟ್ಟು, ಮೂರು ನಾಲ್ಕು ದಿನಕ್ಕೊಮ್ಮೆ ಎಣ್ಣೆನೀರು ಹಾಕುತ್ತಿದ್ದಳು.

ಮುತ್ತಮ್ಮ ನಿಷ್ಕಾಮಬುದ್ಧಿಯಿಂದ ಅಚ್ಚಮ್ಮನ ಆರೈಕೆ ಮಾಡುತ್ತಿರಲಿಲ್ಲ. ಅವಳ ಮನಸ್ಸಿನಲ್ಲಿ ಪ್ರಬಲ ಆಕಾಂಕ್ಷೆ ಮೂಡಿತ್ತು. ಆ ಆಕಾಂಕ್ಷೆ ಸಾಧಿಸುವ ಕಾಲವನ್ನು ಬಹಳ ಆತುರದಿಂದ ನಿರೀಕ್ಷಿಸುತ್ತಿದ್ದಳು.

ರುದ್ರಗಭೀರ ಸಾಗರದಂತಿದ್ದ ಈ ಘೋರಜೀವನದಲ್ಲಿಯೂ ಚಂದ್ರೋದಯವಾಗಿತ್ತು. ನಾಳೆ ತನ್ನ ಮಗುವನ್ನು ಲಾಲಿಸಿ ಪಾಲಿಸುವ ಹಂಬಲದಲ್ಲಿ ತನ್ನ ಜೀವನದ ರುದ್ರಗಭೀರತೆಯನ್ನು ಅಚ್ಚಮ್ಮ ಮರೆತಿದ್ದಳು. ಹಗಲಿರುಳೂ ಅದೇ ನೆನಪು–ಅದೇ ಕನಸು. ಅವಳ ಚಿತ್ತದಲ್ಲಿ ಶಿಶುವಾಗಲೇ ರೂಪ ಹೊತ್ತು ನಿಂತಿತ್ತು. ಕನಸು ಸತ್ಯವಾಗುವುದಷ್ಟೇ ಉಳಿದಿದ್ದುದು.

೩

ಶ್ರೀನಾಥ, ನೀಲಕಂಠರಾಯ, ಶರ್ಮ ಮೂವ್ವರೂ ಒಟ್ಟಿಗೆ ಇಂಟರ್‌ಮಾಡಿಯೇಟ್ ಪರೀಕ್ಷೆಗೆ ಕಟ್ಟಿದರು. ನೀಲಕಂಠ, ಶರ್ಮರಿಗೆ ತೇರ್ಗಡೆ ಯಾಯಿತು ; ಶ್ರೀನಾಥ ನಿರೀಕ್ಷಿಸಿದ್ದಂತೆ ನಾಪಾಸಾದ.

## ನಗ್ನಸತ್ಯ

ನೀಲಕಂಠರಾಯ ಡಾಕ್ಟರಾಗಬೇಕೆಂದು ಎಣಿಕೆ ಹಾಕಿಕೊಂಡಿದ್ದ. ಅವನ ಮೃದುಸ್ವಭಾವ, ಅನುಕಂಪ, ಔದಾರ್ಯ ಡಾಕ್ಟರ್ ವೃತ್ತಿಗೆ ಹೇಳಿ ಮಾಡಿಸಿದ ಹಾಗಿತ್ತು. ಚಿಕ್ಕಂದಿನಲ್ಲೇ ಅವನ ಬಂಧುಬಾಂಧವರು 'ನಮ್ಮ ನೀಲಕಂಠ ಡಾಕ್ಟರಾಗುತ್ತಾನೆ–ಒಳ್ಳೆಯ ಡಾಕ್ಟರಾಗುತ್ತಾನೆ' ಎಂದು ಹೇಳುತ್ತಿದ್ದರು. ನೀಲಕಂಠ ಎಂ. ಬಿ. ಬಿ. ಎಸ್ ಕೋರ್ಸು ತೆಗೆದುಕೊಂಡ.

ಶರ್ಮ ಮಾತಾಳಿ. ಅವನಿಗೆ ಲಾಯರ್ ವೃತ್ತಿಯೇ ಕಟ್ಟಿಟ್ಟ ಬುತ್ತಿಯೆಂದು ಎಲ್ಲರೂ ನಿರ್ಣಯಿಸಿದ್ದರು. ಡಿಗ್ರಿ ತೆಗೆದುಕೊಂಡು ಮುಂದೆ ಬಿ.ಎಲ್ ಪರೀಕ್ಷೆಗೆ ಕೂಡತಕ್ಕುದೆಂದು ಅವನು ನಿಶ್ಚಯಿಸಿಕೊಂಡಿದ್ದ.

ಶ್ರೀನಾಥನ ಭವಿಷ್ಯ ಅಡ್ಡಗೋಡೆಯ ಮೇಲೆ ದೀಪವಿಟ್ಟಂತಾಯಿತು. ಅವನ ಸಾಹಿತ್ಯಾಭಿರುಚಿ, ವ್ಯಾಸಂಗ ಅವನನ್ನು ಲೇಖನವೃತ್ತಿಯ ಕಡೆ ಎಳೆಯುತ್ತಿತ್ತು. ಆದರೆ ಅದರಿಂದ ಜೀವನ ಸಾಗುವುದೇ? ಪಿತ್ರಾರ್ಜಿತ ಆಸ್ತಿಯ ಮೇಲೆ ಅವಲಂಬಿಸಿಕೊಂಡು ಸುಖವಾಗಿ ಜೀವನ ಸಾಗಿಸಿಕೊಂಡು, ಮನಸ್ಸು ಬಂದಾಗ–ಮನಸ್ಸಿಗೆ ಬಂದುದನ್ನು–ಬರೆಯಲು ಅವನಿಗೆ ಅನುಕೂಲ ವಿರಲಿಲ್ಲ. ಸ್ಕೂಲಿನ ಶಿಕ್ಷಣ ಪಡೆಯುತ್ತಿರುವಾಗಲೇ ಶ್ರೀನಾಥ ಬರವಣಿಗೆ ಆರಂಭಿಸಿದ್ದ. ಅವನ ಇಂಗ್ಲಿಷ್ ಲೇಖನಗಳನ್ನು ಮುಂಬಯಿ ಪತ್ರಿಕೆಗಳು ಸ್ವೀಕರಿಸುತ್ತಿದ್ದವು. ಆಗಾಗ್ಗೆ 'ಶಾಖಾಯ ಲವಣಾಯ' ಹತ್ತು ಹದಿನೈದು ರೂಪಾಯಿ ಕೈಗೆ ಬರುತ್ತಿತ್ತು. 'ಮಣ್ಣುದೋಣಿ ನಂಬಿಕೊಂಡು ಹೊಳೆಗೆ ಬಿದ್ದ ಹಾಗೆ' ಈ ಉತ್ಪನ್ನ ನೆಚ್ಚಿಕೊಂಡು ತಾನು ಲೇಖನವೃತ್ತಿ ಕೈಗೊಳ್ಳುವುದು ಜಾಣತನವೇ ಎಂದು ಶ್ರೀನಾಥ ದೀರ್ಘವಾಗಿ ಯೋಚಿಸಿದ. ಆದರೆ ಅವನಿಗೆ ಲೇಖನವೃತ್ತಿಯಲ್ಲದೆ ಬೇರೆ ಮಾರ್ಗವೇ ತೋರುತ್ತಿರಲಿಲ್ಲ. ಕೆಲಸಕ್ಕೆ ಸೇರಿ, ಇತರರ ಮರ್ಜಿ ಹಿಡಿದು ಅವರ ಕೃಪಾಕಟಾಕ್ಷದ ಮೇಲೆ ಬಾಳು ಸಾಗಿಸುವುದು ಅವನ ಸ್ವಾಭಿಮಾನಕ್ಕೆ ಸಲ್ಲದಾಗಿತ್ತು. ಬೇರೆ ವ್ಯಾಪಾರ, ಉದ್ಯಮ ಕೈಗೊಳ್ಳುವುದಕ್ಕೆ ತಕ್ಕ ಬಂಡವಳ, ಅನುಭವ ಎರಡೂ ಇಲ್ಲ.

ಲೇಖನವೃತ್ತಿಯಲ್ಲಿ ಶ್ರೀನಾಥ ಯಶಸ್ಸು ಗಳಿಸಬಲ್ಲನೆಂದು ನೀಲಕಂಠರಾಯ, ಶರ್ಮ ಇವರಿಬ್ಬರಿಗೂ ಖಚಿತವಾಗಿ ಗೊತ್ತಿತ್ತು. ಶ್ರೀನಾಥನ ಲೇಖನ, ಕಥೆಗಳನ್ನು ಮುಂಬಯಿ ಪತ್ರಿಕೆಗಳು ಹಾಡಿಹೊಗಳಿದ್ದವು. ಅವನ ಕನ್ನಡದ

ಬರವಣಿಗೆ ಲೋಕಪ್ರಿಯವಾಗಿತ್ತು. ಅವನ ಒಂದೆರಡು ನಾಟಕಗಳನ್ನು ಹಳ್ಳಿ ಹಳ್ಳಿಗಳಲ್ಲಿಯೂ ಆಡಿದ್ದರು.

ಪರೀಕ್ಷೆಯಲ್ಲಿ ತೇರ್ಗಡೆಯಾಗದಿದ್ದುದು ಒಳ್ಳೆಯದೇ ಆಯಿತೆಂದು ಶ್ರೀನಾಥ ಭಾವಿಸಿದ. ಅವನನ್ನು ಕಡ್ಡಾಯವಾಗಿ ಶಾಲಾ ಶಿಕ್ಷಣಕ್ಕೆ ಹಚ್ಚಿ, ಖರ್ಚು ವೆಚ್ಚವನ್ನು ಸಂತೋಷವಾಗಿ ವಹಿಸಿಕೊಳ್ಳುವವರೂ ಯಾರೂ ಇರಲಿಲ್ಲ. 'ದುಡ್ಡು ಕೇಳದಿದ್ದರೆ ಸಾಕು, ಏನಾದರೂ ಮಾಡಿಕೊಂಡು ಹಾಳಾಗಿ ಹೋಗಲಿ' ಎಂಬ ತಾತ್ಸಾರ ಭಾವನೆ ಅವನ ತಂದೆ ತಳೆದಿದ್ದರು.

ಶ್ರೀ ನಾಥನ ತಂದೆ ಚಲುವಯ್ಯನವರು ಮಗನ ವಿಷಯ ಇಷ್ಟು ಆಲಸ್ಯ ತಳೆಯುವುದಕ್ಕೆ ಅವರ ಎರಡನೆಯ ಮದುವೆಯೂ ಕಾರಣವಾಗಿತ್ತು.

ಚಲುವಯ್ಯನವರ ಮೊದಲನೆ ಹೆಂಡತಿ–ಶ್ರೀನಾಥನ ತಾಯಿ ತೀರಿ ಕೊಂಡಾಗ ಅವರಿಗೆ ನಲವತ್ತೆಂಟು ವರ್ಷ ದಾಟಿತ್ತು. ಶ್ರೀನಾಥನಿಗೆ ಹನ್ನೆರಡು 'ಪುನಃ ನಡೆಯುತ್ತಿತ್ತು. ಒಂದು ದಿನ ಮಗನನ್ನು ಕರೆದು ಲೋಕಾಭಿರಾಮ ವಾಗಿ ಮದುವೆ ಮಾಡಿಕೋ ಎಂದು ನಂಟರಿಷ್ಟರು ಬಲವಂತಮಾಡುತ್ತಿದ್ದಾರೆ. ನೀನೇನು ಹೇಳುವೆ–ಶ್ರೀನಾಥ' ಎಂದು ಕೇಳಿದರು. ಶ್ರೀನಾಥ ಖಡಾಖಂಡಿತ ವಾಗಿ ಮದುವೆಗೆ ತನ್ನ ಅಸಮ್ಮತಿ ಸೂಚಿಸಿದ.

ಚಲುವಯ್ಯನವರ ಎರಡನೆಯ ಮದುವೆ ಮಗನ ಸಮ್ಮತಿ–ಅಸಮ್ಮತಿ ಯನ್ನೇನೂ ಅವಲಂಬಿಸಿರಲಿಲ್ಲ. ಮಧ್ಯಸ್ಥಗಾರರು ಯಾರನ್ನೋ ಹಿಡಿದು ಬೆಳೆದು ನಿಂತಿದ್ದ ಹಳ್ಳಿಯ ಸ್ಕೂಲ್ ಮೇಷ್ಟ್ರ ಮಗಳು–ಪಾರ್ವತಿಯನ್ನು ಲಗ್ನ ವಾಗೇಬಿಟ್ಟರು. ಪಾರ್ವತಿ ಶ್ರೀನಾಥನಿಗಿಂತ ಏಳುವರ್ಷಕ್ಕೆ ದೊಡ್ಡವಳಾಗಿದ್ದು ದರಿಂದ ಅವನ ಮೇಲೆ ದರ್ಪ ತೋರಿಸುವುದಕ್ಕೂ ಅನುಕೂಲವಾಯಿತು.

ತನ್ನ ಮದುವೆಗೆ ಶ್ರೀನಾಥ ಅಡ್ಡಿ ಬಂದಿದ್ದ ಎನ್ನುವ ವಿಷಯವನ್ನು ಪಾರ್ವತಿ ಮರೆಯಲಿಲ್ಲ. ಸಾಂಪ್ರದಾಯಿಕ ಚಿಕ್ಕಮ್ಮ ಛಲಮಗನನ್ನು ಹೇಗೆ ನೋಡಿಕೊಳ್ಳಬೇಕು ಹಾಗೇ ಶ್ರೀನಾಥನನ್ನು ನೋಡಿಕೊಳ್ಳುತ್ತಿದ್ದಳು. ತಂದೆ ಮಕ್ಕಳ ಮೈತ್ರಿಗೆ ಕಾಲಕ್ರಮೇಣ ಅಂತರವೇರ್ಪಡಲಾರಂಭವಾಯಿತು.

ಪಾರ್ವತಿ ಚಲುವಯ್ಯನವರ ಕೈ ಹಿಡಿದ ಮೇಲೆ ಅವರ ಮನೆ 'ಬೆಕೋ' ಎನಿಸಲಿಲ್ಲ. ಎರಡು ವರ್ಷಕ್ಕೊಂದು ಹೆಣ್ಣೋ ಗಂಡೋ ಯಜಮಾನರ ಕೈಯಲ್ಲಿಡುತ್ತಿದ್ದಳು.

ಶ್ರೀನಾಥ ಇಂಟರ್ ಪರೀಕ್ಷೆಯಲ್ಲಿ ನಾಪಾಸಾಗಲು ಅವನ [redacted] ಓದಿಗೆ ಕಲ್ಲು ಹಾಕಿದವಳೂ ಪಾರ್ವತಿಯೇ. ಕಷ್ಟವೊ ಸುಖವೊ ಮಗನನ್ನು ಓದಿಸುವುದಕ್ಕೆ ಚಲುವಯ್ಯ ಸಿದ್ಧವಾಗಿದ್ದರು.

"ಇರೋ ನಾಲ್ಕು ಕಾಸು ಅವನ ತೊಳ್ಳೀಗೆ ಸುರಿಯುತ್ತಾ ಬಂದರೆ, ಮಿಕ್ಕ ಮಕ್ಕಳಿಗೆ ಕೈಗೆ ಚಿಕ್ಕನಾಯಕನಹಳ್ಳಿ ಚೆಳ್ಳಿ ಬಟ್ಟಲು ಕೊಡುತ್ತೀರಾ"

ಎಂದು ಪಾರ್ವತಿ ಪತಿಯ ಮನಸ್ಸನ್ನು ತಿದ್ದಿದಳು.

ಶ್ರೀನಾಥನಿಗೆ ಮನೆ ಪ್ರತ್ಯಕ್ಷ ನರಕವಾಯಿತು. ಮನೆಗೆ ಹೋಗಲು ಮನಸ್ಸಿಲ್ಲ–ಹೋಗದಿದ್ದರೆ ವಿಧಿಯಿಲ್ಲ.

ಈ ಮಧ್ಯೆ ತನ್ನ ಸೋದರ ಸಂಬಂಧದ ಒಂದು ಹುಡುಗಿಯನ್ನು ಶ್ರೀನಾಥನಿಗೆ ಕಟ್ಟಬೇಕೆಂದು ಪಾರ್ವತಮ್ಮ ವಿಶ್ವಪ್ರಯತ್ನಮಾಡಿದಳು. ಶ್ರೀನಾಥ

"ನನ್ನ ಹೊಟ್ಟೆಬಟ್ಟೆ ನೋಡಿಕೊಳ್ಳುವ ಯೋಗ್ಯತೆಯೇ ನನಗಿಲ್ಲ. ಇನ್ನು ಕಂಡವರ ಮನೆ ಹುಡುಗಿ ತಂದು ಅದನ್ನು ಕೊರಗಿಸಲೇ ?" ಎಂದು ಕೇಳಿದ.

ಶ್ರೀನಾಥ ತನ್ನ ಮಾತನ್ನು ತಗೆದುಹಾಕಿದನಲ್ಲಾ ಎಂದು ಪಾರ್ವತಮ್ಮ ಕಿಡಿಕಿಡಿಯಾದಳು.

ಚಿಕ್ಕಮ್ಮ ಮಗನಿಗೆ ಸೌಹಾರ್ದ ಮೂಡಲೇ ಇಲ್ಲ. ಸೌಹಾರ್ದ ಬೆಳೆಯುವುದಕ್ಕೆ ಇಬ್ಬರೂ ಪ್ರಯತ್ನಿಸಲಿಲ್ಲ.

ಶ್ರೀನಾಥನಿಗೆ ತಾನಾಯಿತು—ತನ್ನ ರೂಮಾಯಿತು–ತನ್ನ ಬರವಣಿಗೆ ಯಾಯಿತು. ಊಟಕ್ಕೆ ಕರೆದರೆ ಹೋಗಿ ಊಟಮಾಡಿ ಬರುತ್ತಿದ್ದ. ಕಾಫಿ ತಂದುಕೊಟ್ಟರೆ ಕುಡಿಯುತ್ತಿದ್ದ. ತಾನಾಗಿ ಯಾವುದನ್ನೂ ಬೇಕೆಂದು ಕೇಳುತ್ತಿರಲಿಲ್ಲ.

ಶ್ರೀನಾಥ ಏನೂ ಸಂಪಾದನೆ ಮಾಡದೆ, ಸುಮ್ಮನೆ ಹೊತ್ತು ಗಳೆಯುತ್ತಾನಲ್ಲಾ ಎಂದು ಚಲುವಯ್ಯನವರಿಗೆ ಅಸಮಾಧಾನ. ಒಂದೇ ಮನೆಯಲ್ಲಿದ್ದರೂ ತಂದೆ ಮಗ ಮಾತನಾಡುತ್ತಿದ್ದುದೇ ಅಪರೂಪ. ಅಕಸ್ಮಾತ್ತಾಗಿ ಒಂದೇ ಪಂಕ್ತಿಯಲ್ಲಿ ಕುಳಿತು ಊಟಮಾಡಬೇಕಾದ ಪ್ರಸಂಗವೊದಗಿದರೆ ಇಬ್ಬರೂ ಮೌನವಾಗಿ ಊಟಮುಗಿಸಿ ಎದ್ದು ಹೋಗು ತ್ತಿದ್ದರು.

# ನಗ್ನ ಸತ್ಯ

ತನ್ನ ಸಾಹಿತ್ಯಕೃತಿಯ ಮೇಲೆ ಮನೆಯ ವಿರಸ ಪ್ರಭಾವ ಬೀರಲು ಶ್ರೀನಾಥ ಅವಕಾಶ ಕೊಟ್ಟಿರಲಿಲ್ಲ. ಅವನ ಸಾಹಜಿಕವಾದ ಪ್ರತಿಭೆ, ಅನುಕಂಪ, ಮಾನವ ಸ್ವಭಾವವೀಕ್ಷಣೆ ಅವನ ಕತೆ, ಕಾದಂಬರಿ, ನಾಟಕಗಳಲ್ಲಿ ಒಡೆದು ಮೂಡಿತ್ತು.

ನಾಲ್ಕು ವರ್ಷದಲ್ಲಿ ಶ್ರೀನಾಥ ಹೆಸರಾಂತ ಬರಹಗಾರನಾದ. ಅವನ ಎರಡು ಕಾದಂಬರಿ ಮೂರು ನಾಲ್ಕು ಆವೃತ್ತಿಗಳನ್ನು ಕಂಡವು. ಹಣ ಗಳಿಸದಿದ್ದರೂ ಕೀರ್ತಿಗಳಿಸಿದ್ದ. ಕೀರ್ತಿಯನ್ನು ವ್ಯಾಪಾರಮಾಡುವ ಅಲ್ಪತನ ಅವನಿಗೆ ಸಾಧ್ಯವಿರಲಿಲ್ಲ.

ಸಾಹಿತ್ಯ ಪ್ರಪಂಚದಲ್ಲಿ ಗೆಳೆಯನಿಗೆ ದೊರೆತ ಯಶಸ್ಸು ಕಂಡು ನೀಲಕಂಠರಾಯ ಶರ್ಮ ಇಬ್ಬರೂ ಸಂತೋಷಪಟ್ಟರು. ತನ್ನ ಮೆಡಿಕಲ್ ಕೋರ್ಸ್ ಮುಗಿದ ಮೇಲೆ ನೀಲಕಂಠರಾಯ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಹೌಸ್ ಸರ್ಜನ್ ಆಗಿ ಸೇರಿ, ಒಂದೇ ವರ್ಷದಲ್ಲಿ ಸಬ್ ಅಸಿಸ್ಟೆಂಟ್ ಸರ್ಜನ್ ಆದ.

ಶರ್ಮ ಪರೀಕ್ಷೆ ಮುಗಿಸಿಕೊಂಡು ಬಂದಮೇಲೆ ಆರು ತಿಂಗಳು ಪ್ರಸಿದ್ಧ ವಕೀಲರೊಬ್ಬರಲ್ಲಿ ಶಿಷ್ಯವೃತ್ತಿಮಾಡಿ ಸ್ವಂತ ಕಛೇರಿ ತೆಗೆದ.

ಹಾರ್ದಿಕವಾಗಿ ನೀಲಕಂಠರಾಯ, ಶ್ರೀನಾಥನಿಗೆ ಬೆಳೆದ ಮೈತ್ರಿ, ಶರ್ಮ, ಶ್ರೀನಾಥರಲ್ಲಿ ಬೆಳೆಯಲಿಲ್ಲ. ಇದಕ್ಕೆ ನೀಲಕಂಠರಾಯನ ಹೆಂಡತಿ ಸುಶೀಲಮ್ಮನೂ ಸ್ವಲ್ಪಮಟ್ಟಿಗೆ ಕಾರಣಳಾಗಿದ್ದಳು.

ಸುಶೀಲಮ್ಮ ಇಂಟರ್‌ಮೀಡಿಯೇಟ್ ಪರೀಕ್ಷೆಯವರೆಗೆ ಓದಿ ಶಾಲೆ ಬಿಟ್ಟಿದ್ದಳು. ಬಾಲ್ಯದಿಂದಲೂ ತುಂಬ ಓದುವ ಸ್ವಭಾವ. ಇಂಗ್ಲಿಷ್, ಕನ್ನಡ, ಹಿಂದೀ ಭಾಷೆಗಳಲ್ಲಿ ಆಕೆ ಓದಿದ್ದಷ್ಟು ಕಥೆ ಕಾದಂಬರಿಗಳನ್ನು ಯಾವ ಕಾಲೇಜ್ ಪ್ರೊಫೆಸರೂ ಓದಿರಲಿಲ್ಲ.

ಶ್ರೀನಾಥನ ಬರವಣಿಗೆಯ ಮೇಲೆ ಸುಶೀಲಮ್ಮನಿಗೆ ಅನ್ಯಾದೃಶ ಪ್ರೇಮ, ಗೌರವ. ಅವನ ಮನಮೋಹಕ ಶೈಲಿಗೂ ಶುದ್ಧವಾದ ವಿಚಾರ ಸರಣಿಗೂ ಆವಳು ಮಾರುಹೋಗಿದ್ದಳು. ಹೆಣ್ಣಿನ ಹೃದಯವನ್ನು ಶ್ರೀನಾಥ ಅರ್ಥಮಾಡಿಕೊಂಡಿದ್ದಂತೆ ಯಾರೂ ಅರ್ಥಮಾಡಿಕೊಂಡಿಲ್ಲ ಎಂದು ಪದೇ ಪದೇ ಹೇಳುತ್ತಿದ್ದಳು.

ಸುಶೀಲಮ್ಮ ವಿದ್ಯಾವತಿ, ಗುಣವತಿ ಆಗಿದ್ದುದಲ್ಲದೆ ಮನೆಗೆಲಸದಲ್ಲಿಯೂ ನಿಷ್ಣಾತೆಯಾಗಿದ್ದಳು. ಮನೆಯನ್ನು ಸದಾ ಅಂದವಾಗಿಟ್ಟುಕೊಂಡು, ಕಿಟಕಿ ಬಾಗಿಲುಗಳಿಗೆ ಚಿತ್ರಾಲಂಕಾರದ ತೆರೆಗಳನ್ನು ಹಾಕಿ. ಗೋಡೆಯ ಮೇಲೆ ಅಲ್ಲಲ್ಲಿ ಕೆಲವು ಆಧುನಿಕ ಚಿತ್ರಕಾರರ ಚಿತ್ರಗಳನ್ನು ತೂಗಬಿಟ್ಟು ತನ್ನ ಉತ್ತಮ ಅಭಿರುಚಿಯನ್ನು ಸಾರ್ಥಕಪಡಿಸಿಕೊಂಡಿದ್ದಳು.

ನೀಲಕಂಠರಾಯ ತನ್ನ ಗೆಳೆಯರಲ್ಲಿ "ನನ್ನ ಮನೆಯಷ್ಟು ಸುಂದರವಾಗಿ, ಸುಖವಾಗಿ ಕೈಲಾಸವೂ ಇರಲು ಸಾಧ್ಯವಿಲ್ಲ" ಎಂದು ಹೇಳುತ್ತಿದ್ದ ಮಾತು ಅಕ್ಷರಶಃ ನಿಜವಾಗಿತ್ತು.

ಶ್ರೀನಾಥ ತಮ್ಮ ಮನೆಗೆ ಬಂದರೆ ಗಂಡಹೆಂಡತಿ ಇಬ್ಬರೂ ಅವನನ್ನು ಸೋದರನಂತೆ ಕಂಡು ಆದರಿಸಿ ಸತ್ಕರಿಸುತ್ತಿದ್ದರು. ಶ್ರೀನಾಥನ ಸಾಹಿತ್ಯ ಪ್ರಗತಿ, ಅವನ ತಲೆಯಲ್ಲಿ ಸುಳಿದಾಡುತ್ತಿದ್ದ ಕಥಾನಕಗಳನ್ನು ಅವನ ಬಾಯಿಂದಲೇ ಕೇಳುವುದಕ್ಕೆ ಸುಶೀಲಮ್ಮ ಆಸೆಪಡುತ್ತಿದ್ದಳು.

ಶ್ರೀನಾಥನಿಗೆ ತನ್ನ ಮನೆಗಿಂತಲೂ ಗೆಳೆಯನ ಮನೆಯಲ್ಲಿ ಹೆಚ್ಚು ಶಾಂತಿ ಸಿಕ್ಕುತ್ತಿತ್ತು. ನಿರ್ವ್ಯಾಜ ಅಂತಃಕರಣದಿಂದ ಗೆಳೆಯ, ಗೆಳೆಯನ ಹೆಂಡತಿ ಅವನ ಮಾತು ಕೇಳುತ್ತಿದ್ದರೆ ವಿಚಾರಧಾರೆ ಜೋಗದ ಜಲಪಾತದಂತೆ ಹರಿಯುತ್ತಿತ್ತು. ಹೊಸಹೊಸ ಭಾವನೆಗಳು ಉದ್ಭವವಾಗುತ್ತಿದ್ದವು. ಮನಸ್ಸಿನಲ್ಲಿ ಸಿಕ್ಕಾಗಿ ಕುಳಿತು ಕಾಡುತ್ತಿದ್ದ ವಿಷಯ, ವಸ್ತು ಸುಸ್ಪಷ್ಟಗೊಂಡು ಹೊಸದೇಹ-ಜೀವ ಪಡೆಯುತ್ತಿತ್ತು.

ರಮೇಶನ ಮನಸ್ಸು ನೀಲಕಂಠನ ಮನಸ್ಸಿನಷ್ಟು ಉದಾರವೂ ಆಗಿರಲಿಲ್ಲ-ಪರಿಶುದ್ಧವೂ ಆಗಿರಲಿಲ್ಲ. ಗೆಳೆಯರನ್ನವನು ಮನೆಗೆ ಕರೆದುಕೊಂಡು ಹೋಗುತ್ತಿದ್ದುದೇ ವಿರಳ. ಯಾವದಾದರೂ ಹೊಟೇಲಿನಲ್ಲಿ ತನ್ನ ಆತಿಥ್ಯದ ಜವಾಬ್ದಾರಿ ಮುಗಿಸಿಬಿಡುತ್ತಿದ್ದ. ಅವನ ಮಾತು ಒಂದೊಂದುಸಲ ಶಿಷ್ಟತೆಯ ಗಡಿ ದಾಟುತ್ತಿತ್ತು. ಸಮಾಜವನ್ನು-ಜೀವನವನ್ನು ಅವನು ನೋಡುತ್ತಿದ್ದ ರೀತಿಯಲ್ಲಿ ಒಂದು ವೈಶಿಷ್ಟವಿದ್ದರೂ ಅದು ನೀಲಕಂಠ, ಶ್ರೀನಾಥರಿಗೆ ಸೇರುತ್ತಿರಲಿಲ್ಲ. ಆದರೆ ಆ ಕಾರಣಕ್ಕಾಗಿ ಅವನನ್ನವರು ದೂರ ಮಾಡಲಿಲ್ಲ. ವಿಚಾರಗಳ ತಾಕಲಾಟವನ್ನು, ಶುದ್ಧಾಶುದ್ಧತೆಗಳ ನಿತ್ಯ ಹೋರಾಟವನ್ನು ಮೀರಿ ಅವರ ಗೆಳೆತನ ಗೌರಿಶಂಕರದಂತೆ ನಿಂತಿತ್ತು.

## ನಗ್ನ ಸತ್ಯ

ಶ್ರೀನಾಥ ಒಂದು ಹೊಸಕಾದಂಬರಿ 'ಪತಿತಪಾವನ' ಬರೆದು ಸಾಹಿತ್ಯ ಪ್ರಪಂಚದಲ್ಲಿ ಶಿಷ್ಟ ಸಮಾಜದಲ್ಲಿ, ತಲ್ಲಿಕಲ್ಲೋಲ ಮಾಡಿಬಿಟ್ಟ. ಕಥೆ ವೇಶ್ಯಾಜೀವನ ಕುರಿತದ್ದು. ತನ್ನ ಸಹಜ ಅಂತಃಕರಣದಿಂದ ವೇಶ್ಯೆಯ ಮಾನವತೆಯನ್ನು ಚಿತ್ರಿಸಿ, ಅವಳು ಸಮಾಜದ ದರ್ಪಣರಥಕ್ಕೆ ಸಿಕ್ಕೂ, ಬಿಡಿಸಿ ಕೊಳ್ಳಲಾಗದ ಹುತಾತ್ಮಳು ಎಂಬಂತೆ ಕಾದಂಬರಿಯಲ್ಲಿ ಚಿತ್ರಿಸಿದ್ದ.

ಸುಶೀಲಮ್ಮ ಕಾದಂಬರಿ ಓದಿದಳು. ಅವಳ ಮನಸ್ಸಿಗೆ ಏನೋ ನೋವು–ಎಂಥದೋ ಜಿಗುಪ್ಸೆಯಾಯಿತು. ಶ್ರೀನಾಥನ ಹೊಸ ಕೃತಿಯನ್ನು ಓದಿದಕೂಡಲೆ ಅದರ ಬಗ್ಗೆ ಅಭಿಪ್ರಾಯ-ಅಂದರೆ ಮೆಚ್ಚುಗೆ–ವ್ಯಕ್ತಪಡಿಸುವುದು ಅವಳ ಅಭ್ಯಾಸವಾಗಿತ್ತು. ಶ್ರೀನಾಥ ನಾಲ್ಕೈದುಸಾರಿ ಮನೆಗೆ ಬಂದರೂ 'ಪತಿತ–ಪಾವನ'ದ ಸುದ್ದಿ ಸುಶೀಲಮ್ಮ ತೆಗೆಯಲಿಲ್ಲ.

ಶ್ರೀನಾಥನ ಮನಸ್ಸಿನಲ್ಲಿ ಕಸಿವಿಸಿಯಾಯಿತು. ಒಂದು ದಿನ ಸಂಜೆ ಶೀಲಕಂಠರಾಯ, ಸುಶೀಲಮ್ಮ, ಶ್ರೀನಾಥ ಮಾತನಾಡುತ್ತ ವೆರಾಂಡದಲ್ಲಿ ಕುಳಿತಿದ್ದಾಗ ಶ್ರೀನಾಥನೇ ಮಾತು ತೆಗೆದ

"ಅಕ್ಕಾ, ನನ್ನ 'ಪತಿತ ಪಾವನ' ಓದಿದಿರಾ ?"

"ಓದದೆ ಇರುತ್ತೇನೆಯೇ ?"

"ಅದರ ಬಗ್ಗೆ ಏನೂ ಹೇಳಲಿಲ್ಲ."

"ಚೆನ್ನಾಗಿದೆ."

"ಇದು ತುದಿನಾಲಗೆಯ ಮಾತು. ಮನಃಪೂರ್ವಕವಾಗಿ ಹೇಳಿ."

"ನಿಮ್ಮ 'ಬಾಳದೇವಿ' ನನಗೆ ಹಿಡಿದಷ್ಟು ಈ ಕಾದಂಬರಿ ಹಿಡಿಯಲಿಲ್ಲ."

"ಅದು ಹೆಣ್ಣಿನ ಒಂದು ಮುಖ–ಇದು ಬೇರೊಂದು ಮುಖ."

"ಒಪ್ಪುತ್ತೇನೆ. ಆದರೆ 'ಬಾಳದೇವಿ'ಯ ಮುಖವನ್ನೇ ಜನ ನೋಡುತ್ತಿದ್ದರೆ ಒಳ್ಳೆಯದಲ್ಲವೇ ?"

"ಒಂದೇ ಬಗೆಯ ಚಿತ್ರಣ ಮಾಡುತ್ತಾ ಹೋದರೆ ಜನಕ್ಕೆ ಬೇಸರ ಬರುತ್ತದೆ."

"ಜನ ಮೆಚ್ಚಿಸುವುದಕ್ಕೆ ಬರೆಯುತ್ತೀರಾ ?"

"ಇಲ್ಲ. ಬರೆಯುವುದೇನೋ ಆತ್ಮತೃಪ್ತಿಗೆ–ಬರೆದ ಮೇಲೆ ಜನ ಮೆಚ್ಚಲಿ ಎಂದು ಬಯಸುವುದು ಸ್ವಾಭಾವಿಕವಲ್ಲವೇ ?"

"ಜನ ಇಂಥ ಕಥೆಗಳನ್ನೇ, ಹೆಚ್ಚು ಮೆಚ್ಚುತ್ತ ಬಂದರೆ, ಇವುಗಳನ್ನೇ ಮುಂದೆ ಬರೆಯುವಿರಾ ?"

"ಹಾಗೇನಿಲ್ಲ. ಸತ್ಯವೆಂದು ತೋರಿದುದನ್ನು ಬರೆಯುವುದು ಲೇಖಕನ ಧರ್ಮ."

"ಸಮಾಜವನ್ನು ಶುದ್ಧವಾದ ಮಾರ್ಗದಲ್ಲಿ ಒಯ್ಯುವುದು ಲೇಖಕನ ಧರ್ಮವಲ್ಲವೇ ?"

"ಪತಿತಪಾವನ ಓದಿ ಜನ ಅಡ್ಡ ಹಾದಿ ಹಿಡಿಯುವರೇ ?"

"ಎಲ್ಲರೂ ಅಲ್ಲ. ವಿಚಾರಶಕ್ತಿ ಬೆಳೆಸಿಕೊಳ್ಳದಿರುವ ಅಪ್ರಬುದ್ಧರು ಅದರಿಂದ ಅಡ್ಡ ಹಾದಿ ಹಿಡಿಯಲು ಅವಕಾಶವಿದೆ ?"

"ಅಪ್ರಬುದ್ಧರು ಇದಕ್ಕಲ್ಲದಿದ್ದರೆ ಬೇರೆ ಕಾರಣಕ್ಕಾಗಿಯಾದರೂ ಅಡ್ಡ ಹಾದಿ ಹಿಡಿದೇ ಹಿಡಿಯುತ್ತಾರೆ."

"ಅಂಥವರಿಗೆ ಎಚ್ಚರಕೊಡುವುದು ನಿಮ್ಮಂಥ ತಿಳಿದವರ ಕರ್ತವ್ಯವಲ್ಲವೇ ?"

"ಜೊಲಾ, ಫ್ಲಾಬೂ, ಮೋಪಸಾ, ಹಾರ್ಡಿ, ಗಾರ್ಕಿ ಇವರೂ ಇಂಥ ಕಥೆಗಳನ್ನು ಬರೆದಿದ್ದಾರಲ್ಲಾ."

"ಅವರು ಬರೆದಿದ್ದಾರೆಂದು ನೀವೂ ಬರೆಯುತ್ತಿರುವಿರೇನು ?"

"ಯಾವ ಕ್ರಿಯಾಶಾಲಿ ಲೇಖಕನೂ ಅನುಕರಣ ಮಾಡುವುದಿಲ್ಲ. ನನ್ನ ಕಥೆಯ ಮೇಲೆ ನಿಮ್ಮ ಆಕ್ಷೇಪಣೆಯೇನು ? ವಸ್ತು ಅಪ್ರಿಯವಾದುದೆಂದೇ ?"

"ವಸ್ತುವಿನ ಬಗ್ಗೆ ನನ್ನ ಆಕ್ಷೇಪವಿಲ್ಲ. ಸಮಾಜದ ಶೀಲಕೆಡಿಸಿ, ಹಲವು ಗೃಹಸ್ಥರನ್ನು ದುರ್ಮಾರ್ಗಕ್ಕೆಳೆಯುವ ಕುಲಟೆಯರನ್ನು ನೀವು ಸಹಾನುಭೂತಿ, ಸೌಹಾರ್ದದಿಂದ ಚಿತ್ರಿಸಿದರೆ ಅಂಥವರಿಗೆ ನೀವೇ ಅನಿರೀಕ್ಷಿತವಾಗಿ ಪ್ರೋತ್ಸಾಹ ಕೊಟ್ಟಂತೆ ಆಗುವುದಿಲ್ಲವೇ ?"

"ಇದು ಪ್ರೋತ್ಸಾಹದ ಮಾತಲ್ಲ. ಮಾನವನ ಏಳುಬೀಳುಗಳಿಗೆ ಸಂಬಂಧಪಟ್ಟ ಮಾತು. ನನ್ನ 'ಪತಿತಪಾವನ' ಹೆಚ್ಚು ವಾಸ್ತವವಾಗಿಲ್ಲವೆಂದು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಒಂದು ಅವಿವೇಕದಿಂದಲೋ ಅಪಘಾತದಿಂದಲೋ ಕೆಳಗೆ ಬಿದ್ದವರ ಮೇಲೆ ಕಲ್ಲೊಗೆಯಬೇಕೇ ? ನನ್ನ ಕಥಾನಾಯಕಿಯಂಥವರು ಏಕೆ ದಾರಿಬಿಟ್ಟು ಹೋಗುತ್ತಾರೆಂದು ಕಂಡು

ಒಡಿಯಬೇಕಾದುದು--ಅದಕ್ಕೆ ತಕ್ಕ ಪರಿಹಾರ ನೀಡಬೇಕಾದುದು ಸಮಾಜದ ಕರ್ತವ್ಯವಲ್ಲವೇ ?

ಸಮಾಜಕ್ಕೆ ಕರ್ತವ್ಯಪಾಠ ಹೇಳುವುದರ ಬದಲು ವ್ಯಕ್ತಿ ತನ್ನ ಕರ್ತವ್ಯವನ್ನರಿತು ಅದನ್ನೇಕೆ ನಿಷ್ಠೆಯಿಂದ ಪಾಲಿಸಿಕೊಂಡು ಬರಬಾರದು ?"

"ವ್ಯಕ್ತಿ ಅನೇಕ ವೇಳೆ ಸಮಷ್ಟಿಯ ಒಂದು ಕೀಲಿ ಮಾತ್ರ. ಸಮಾಜ ಚಕ್ರ ಮುನ್ನಡೆದರೆ ವ್ಯಕ್ತಿ ನಡೆಯಲು ಸಾಧ್ಯ"

"ಹಿರಿಯ ಬಾಳುವೆ ನಡೆಸಿದ ವ್ಯಕ್ತಿಗಳ ಜೀವನ ವ್ಯರ್ಥಜೀವನವೇನು ?"

"ಎಲ್ಲರೂ ಹಿರಿಯ ವ್ಯಕ್ತಿಗಳಾಗಿರುವುದಿಲ್ಲ. ಸಮಾಜದಲ್ಲಿ ಉತ್ತಮ, ಮಧ್ಯಮ, ಕನಿಷ್ಠ ಮನೋಭಾವದ ವ್ಯಕ್ತಿಗಳಿದ್ದಾರೆ. ಎದುರು ಬರುವ ಗಂಡಾಂತರವನ್ನು ಎದುರಿಸುವ ಧೀರರಿಗಿಂತ ತಲೆತಪ್ಪಿಸಿಕೊಳ್ಳುವ ಭೀರುಗಳೇ ಹೆಚ್ಚು. ಗಂಡಾಂತರವನ್ನು ಗಂಡಾಂತರವೇ ಅಲ್ಲವೆಂದು ಭಾವಿಸಿಕೊಳ್ಳುವ ಆತ್ಮವಂಚಕರೂ ಇದ್ದಾರೆ.'

ಸುಶೀಲಮ್ಮನಿಗೆ ಕೂಡಲೇ ಉತ್ತರಕೊಡುವುದು ಕಷ್ಟವಾಯಿತು. ತಾನೂ ಶ್ರೀನಾಥ ಎರಡು ಭಿನ್ನ ಸಂಪ್ರದಾಯಗಳನ್ನೂ, ವಿಚಾರ ವೈಖರಿಗಳನ್ನೂ ಪ್ರತಿಪಾದಿಸುತ್ತಿರುವುದು ಅವಳಿಗೆ ಗೊತ್ತಿತ್ತು. ಆದರ್ಶ ಜೀವನದ ಕಡೆ ಅವಳ ಮನಸ್ಸು ಓಡುತ್ತಿತ್ತು; ವಾಸ್ತವ ಜೀವನದ ಕಡೆ ಅವನ ಮನಸ್ಸು ಧಾವಿಸುತ್ತಿತ್ತು.

"ನನ್ನ 'ಪತಿತಪಾವನ' ನಿಮ್ಮ ಮನಸ್ಸಿಗೆ ಬಾರದಿರುವುದನ್ನು ಕಂಡು ನನಗೆ ನಿಜವಾಗಿ ವಿಷಾದವಾಗಿದೆ."

"ನಾನು ಅದನ್ನು ಹೀಗಳೆಯುತ್ತಿರುವೆನೆಂದು ಭಾವಿಸಬೇಡಿ. ನಿಮ್ಮ ಪ್ರತಿಭೆಯ ಅಚ್ಚು ಅದರ ಮೇಲೂ ಇದೆ. ಆದರೆ ವಿಚಾರಲಹರಿಯ ಬಗ್ಗೆ ಮಾತ್ರ ತನ್ನ ಅಭಿಪ್ರಾಯ ಬೇರೆ."

"ನನ್ನ ವಿಚಾರಲಹರಿಯನ್ನು ನೀವು ಒಪ್ಪಿಕೊಳ್ಳಬೇಕೆಂದು ನಾನು ಕಡ್ಡಾಯ ಮಾಡುತ್ತಿಲ್ಲ. ಆದರೆ ಅದರ ಹಿಂದಣ ಸತ್ಯಪ್ರಿಯತೆಯನ್ನು ನೀವು ಶಂಕಿಸಬಾರದಷ್ಟೇ !"

"ಖಂಡಿತವಾಗಿಯೂ ಇಲ್ಲ. ನಿಮ್ಮ ಸತ್ಯಪ್ರಿಯತೆಯ ಬಗ್ಗೆ ನನಗೆ ಪೂರ್ಣ ವಿಶ್ವಾಸವಿದೆ"

ಎಂದಳು. ಶ್ರೀನಾಥನ ಮನಸ್ಸಿಗೆ ತುಸು ಸಮಾಧಾನವಾಯಿತು. ವಾದ ಮುಗಿದುದನ್ನು ಕಂಡು ನೀಲಕಂಠರಾಯ

"ಸದ್ಯ–ಯುದ್ಧ ನಿಂತಿತಲ್ಲಾ. ಸುಶೀ–ಇಬ್ಬರೂ ಹೋರಾಡಿ ದಣಿದಿದ್ದೀರಿ. ಸ್ವಲ್ಪ ಕಾಫಿಯಾದರೂ ಮಾಡಿ ತೆಗೆದುಕೊಂಡು ಬಾ"

ಎಂದು ಹೇಳಿದ. ಸುಶೀಲಮ್ಮ ನಸುನಗುತ್ತ ಕಾಫಿ ತರಲು ಒಳಕ್ಕೆ ಹೋದಳು.

ಶ್ರೀನಾಥನ 'ಪತಿತಪಾವನ' ಶರ್ಮನ ಮೇಲೆ ಬೇರೆ ವಿಧವಾದ ಪ್ರತಿಕ್ರಿಯೆಯನ್ನುಂಟುಮಾಡಿತು. ಅದನ್ನು ತಿಳಿಸುವುದಕ್ಕೆ ಅವನೇ ಶ್ರೀನಾಥನನ್ನು ಹುಡುಕಿಕೊಂಡು ಬಂದ. ಶರ್ಮ ನೇರವಾಗಿ ವಿಷಯಕ್ಕೆ ಬರದೆ ಸುತ್ತಿ ಸುಳಿದು ಕೇಳಿದ

"ಈಗೇನು ಆರಂಭಿಸಿರುವೆ ಶ್ರೀನಾಥ."

"ಪತಿತಪಾವನದ ಗುಂಗು ಇನ್ನೂ ತಲೆಯಿಂದ ಹೋಗಿಲ್ಲ. ಕೆಲವು ದಿನ ಕಳೆದಾನಂತರ ಇನ್ನೊಂದು ಕಾದಂಬರಿ ಆರಂಭಿಸಬೇಕೆಂದಿದ್ದೇನೆ. 'ಪತಿತಪಾವನ' ಓದಿದೆಯಾ?"

"ಓದದೆ ಉಂಟೇ? ನೀನು ಪುಸ್ತಕಕೊಟ್ಟ ದಿನವೇ ಓದಿ ಮುಗಿಸಿದೆ."

"ನಿನ್ನ ಅಭಿಪ್ರಾಯ ತಿಳಿಸಲಿಲ್ಲವಲ್ಲಾ."

"ಚೆನ್ನಾಗಿದೆ.—ಆದರೆ . . ."

"ಆ 'ಆದರೆ'ಯ ಗೂಢಾರ್ಥವೇ ನನಗೆ ಬೇಕಾಗಿರುವುದು."

"ನೀವು ಲೇಖಕರು ಬಹಳ ಸೂಕ್ಷ್ಮವೇದಿಗಳು. ವಿಮರ್ಶಾತ್ಮಕವಾಗಿ ನಾನು ಏನಾದರೂ ಹೇಳಿದರೆ ನಿನಗೆ ಅಸಮಾಧಾನವಾಗಬಹುದು."

"ಹಿತೈಷಿಗಳ ಅಭಿಪ್ರಾಯಕ್ಕೂ ಮುನಿಯುವವನು ಮೂರ್ಖನೇ ಸರಿ. ತನ್ನ ಕೃತಿ ಓದುಗರ ಮನಸ್ಸಿನ ಮೇಲೆ ಯಾವ ಪರಿಣಾಮವುಂಟುಮಾಡಿತೆಂದು ತಿಳಿಯಲು ಲೇಖಕನೂ ಕುತೂಹಲಿಯಾಗಿರುತ್ತಾನೆ. ಹೇಳು–ನಿಸ್ಸಂಕೋಚವಾಗಿ ಹೇಳು."

"ಕಾದಂಬರಿಯ ಬಗ್ಗೆ ಕೆಟ್ಟದು, ಒಳ್ಳೆಯದು ಎರಡನ್ನೂ ಹೇಳುತ್ತೇನೆ. ಆಗಬಹುದೋ?"

"ಬಹಳ ಸಂತೋಷ."

" 'ಪತಿತಪಾವನ'ಕ್ಕೆ ನೀನು ಆರಿಸಿಕೊಂಡಿರುವ ವಸ್ತು ನಾನು ಮೆಚ್ಚಿ ಕೊಂಡೆ. ಕಥೆಗಾರನಿಗೆ ವೇಶ್ಯಾಜೀವನ ಅಪಾರವಸ್ತುವನ್ನೊದಗಿಸುತ್ತದೆ. ನಿನ್ನ ಕಥೆಯ ಓಟ, ಶೈಲಿ ಚೆನ್ನಾಗಿದೆ. ಪಾತ್ರಗಳನ್ನೂ ಸ್ಪಷ್ಟವಾಗಿ ಕಡೆದಿದ್ದೀ. ಆದರೆ ಪಾತ್ರಗಳ ಮನೋಭಾವವನ್ನು ಬಿಡಿಸುವಾಗ ವೈವಿಧ್ಯ ಕಾಣಬರುವುದಿಲ್ಲ. ಒಂದು ಪಾತ್ರದಂತೆಯೇ ಇನ್ನೊಂದೂ ಇದೆ. ಒಂದೇ ಜೀವನ ನಡಸುವ ಹತ್ತು ಹೆಂಗಸರನ್ನು ಚಿತ್ರಿಸುವಾಗ ಹತ್ತು ಮನೋ ಭಾವವನ್ನು ಚಿತ್ರಿಸಬೇಕು. ವರ್ಣನೆಯ ಕೆಲಭಾಗ ಅಸ್ಪಷ್ಟವಾಗಿಯೂ ಅಸಹಜವಾಗಿಯೂ ಇದೆ. ಜೋಲನ 'ನಾನಾ' ಓದಿರುವೆಯಾ?"

"ಇಲ್ಲ."

"ಓದಿ ನೋಡು. ನೀನು ತೆಗೆದುಕೊಂಡಿರುವ ವಸ್ತುವನ್ನೇ ಅವನೂ ತೆಗೆದುಕೊಂಡಿದ್ದಾನೆ. 'ನಾನಾ' ಕಾದಂಬರಿಯಲ್ಲಿ ಜೀವನವನ್ನು ಜೋಲಾ ತುಂಬಿಬಿಟ್ಟಿದ್ದಾನೆ. ಪ್ರತಿಯೊಂದು ಪಾತ್ರವೂ ವ್ಯಕ್ತಿತ್ವವುಳ್ಳ ಒಂದು ತುಂಬು ಚಿತ್ರ. ಈ ಸಿದ್ಧಿಗೆ ಅವನ ಅಪಾರ ಅನುಭವವೇ ಕಾರಣ?"

"ಯಾವ ಅರ್ಥದಲ್ಲಿ ನೀನು ಅನುಭವ ಶಬ್ದವನ್ನುಪಯೋಗಿಸುತ್ತಿರುವೆ."

"ಸ್ವಂತ ಅನುಭವ ಎನ್ನುವ ಅರ್ಥದಲ್ಲಿಯೇ. ನೀನು ವೇಶ್ಯಾಜೀವನದ ಹೊರಗೆ ನಿಂತು ಅವರಿವರ ಬಾಯಿಂದ ಕೇಳಿದ ವಿಷಯವನ್ನು ಚಿತ್ರಿಸುತ್ತಿರುವೆ. ಕಂಡವರ ಅನುಭವ ನಿನ್ನದಾಗಲು ಸಾಧ್ಯವೇ? ಕಂಡವರ ನೋಟ ನಿನ್ನದಾಗಲು ಸಾಧ್ಯವೇ?"

"ನೀನು ಹೇಳುವುದರಲ್ಲಿ ಬಹಳ ಅರ್ಥವಿದೆ ಶರ್ಮ. ಆದರೆ ನಾನು ಉದ್ದೇಶಪಟ್ಟುದು ಚಿತ್ರಕಥೆ ಬರೆಯಬೇಕೆಂದಲ್ಲ–ವೇಶ್ಯಾಜೀವನದ ಘೋರ ನರಕವನ್ನು ಚಿತ್ರಿಸಬೇಕೆಂದು. ನನ್ನ ಉದ್ದೇಶ ನೀತಿ ಸಾರುವುದು. ಕೊಳಚೆ ಇರುವ ಕಡೆ ಕೈಮಾಡಿ ತೋರಿಸಿ, ಅಲ್ಲಿಗೆ ಹೋಗಬೇಡಿರೆಂದು ಜನರನ್ನು ಎಚ್ಚರಿಸುವುದು."

"ಕಲೆ ಕೊರಗುವುದು ಅಲ್ಲಿಯೇ. ಕಲೆ ನೀತಿ ಸಾರಲು ಎಂದಿಗೂ ಪ್ರಯತ್ನಿಸಬಾರದು. ಅದರ ಪರಿಪಕ್ವತೆಯಲ್ಲಿ ನೀತಿ ನೆಲಸಿ, ಅಗೋಚರವಾಗಿ ತನ್ನ ಪ್ರಭಾವ ಬೀರಿದರೆ ತಪ್ಪಿಲ್ಲ. ಕಲಾವಿದ ಉಪದೇಶಕನಂತೆ ನೀತಿ ಸಾರುವುದು ಅವನ ಸೋಲಿನ ಚಿನ್ಹೆ. ಒಳ್ಳೆಯ ಚಿತ್ರಕ್ಕೆ ಕಟ್ಟು ಹಾಕುವ

ಕಟ್ಟುಗಾರನ ಕ್ರಿಯೆಯನ್ನು ನೋಡಿರುವೆಯಲ್ಲವೇ? ಕಟ್ಟು ಹಿನ್ನೆಲೆಯಲ್ಲಿ ನಿಲ್ಲಬೇಕು–ಚಿತ್ರ ಎದ್ದು ಕಾಣಬೇಕು. ಚಿತ್ರಕ್ಕಿಂತ ಕಟ್ಟೇ ಪ್ರಧಾನವಾದರೆ ಮೂಗಿಗಿಂತ ಮೂಗುತಿ ಭಾರವಾದಂತಾಗುತ್ತದೆ."

"ನಿಜ–'ಪತಿತಪಾವನೆ'ದಲ್ಲಿ ನೀನು ಹೇಳುವ ದೋಷವಿದೆಯೆಂದು ಒಪ್ಪಿಕೊಳ್ಳುತ್ತೇನೆ. ಅನುಭವದಾರಿದ್ರ್ಯವನ್ನು ನದುಪ್ಪೇರ ಮುಚ್ಚು ವುದಿಲ್ಲವೇ?"

"ನಿನ್ನ ಭಾವನೆ ತಪ್ಪು. ಅದೂ ಒಂದು ಬಗೆಯ ಪಲಾಯನ ಸೂತ್ರ (Escapism). ಅನುಭವದ ಕ್ರೂರಜ್ವಾಲೆಗೆ ಮೈಯೊಡ್ಡಲು ಅಂಜುವವನು ಹುಡುಕುವ ಸಮಾಧಾನ."

"ಅನುಭವದ ಕ್ರೂರಜ್ವಾಲೆಗೆ ಮೈಯೊಡ್ಡಬಹುದು. ಆದರೆ ಮೈ ಸೀದು ಹೋಗುವುದಿಲ್ಲವೆಂದು ಯಾವ ನಂಬಿಕೆ?"

"ಸೀದು ಹೋಗೇ ಹೋಗುತ್ತದೆ. ಕ್ಷಯರೋಗ ಚಿಕಿತ್ಸೆ ಮಾಡುವ ವೈದ್ಯ ಅದು ಒಂದಲ್ಲ ಒಂದು ದಿನ ರೋಗ ತನಗೂ ತಾಗಬಹುದು ಎಂದು ತಿಳಿದೇ ಇರುತ್ತಾನೆ. ರೋಗಿಯ ಬಳಿಗೆ ಹೋಗದೆಯೇ ವೈದ್ಯ ದೂರನಿಂತು ಕ್ಷಯರೋಗ ಚಿಕಿತ್ಸೆಮಾಡಲು ಸಾಧ್ಯವೇ?"

"ಆ ಹೋಲಿಕೆ ಈ ವಿಷಯಕ್ಕೆ ಹೇಗೆ ಸರಿಹೊಂದುತ್ತದೆ."

"ಹೌದು–ವೈದ್ಯ ವ್ಯಕ್ತಿಗೆ ತಗುಲಿದ ಕ್ಷಯರೋಗದ ನಿಧಾನ ಮತ್ತು ಚಿಕಿತ್ಸೆಗೆ ಹೊರಡುತ್ತಾನೆ; ಸಾಹಿತಿ ಸಮಾಜಕ್ಕೆ ತಗುಲಿದ ರೋಗದ ನಿಧಾನ–ಚಿಕಿತ್ಸೆ ಮಾಡಲೆಳಸುತ್ತಾನೆ."

"ನೀನು ಪ್ರಬಲ ಸಮಸ್ಯೆಯೊಂದನ್ನು ನನ್ನ ಜೀವನದಲ್ಲಿ ತಂದು ಹಾಕಿರುವೆ ಶರ್ಮ. ಈ ಬಗ್ಗೆ ನಾನು ಕೂಡಲೆ ಅಭಿಪ್ರಾಯ ತಿಳಿಸಲೊಲ್ಲೆ. ಸಾವಕಾಶವಾಗಿ ಯೋಚನೆಮಾಡುತ್ತೇನೆ."

"ಅವಶ್ಯಕವಾಗಿ ಯೋಚನೆಮಾಡು.–Think, but do not make thoughts your Master"

ಎಂದು ಹೇಳಿದ.

'ಪತಿತಪಾವನ' ಶ್ರೀನಾಥನ ಮನೆಯನ್ನೂ ಹೊಕ್ಕಿತ್ತು. ಪಕ್ಕದ ಮನೆ ಸೀತಮ್ಮನ ಯಜಮಾನರು ಒಂದು ಪುಸ್ತಕದಂಗಡಿಯ ಮಾಲಿಕರು.

ಅಂಗಡಿಗೆ ಬರುತ್ತಿದ್ದ ಹೊಸ ಕನ್ನಡ ಪುಸ್ತಕಗಳನ್ನು ತಂದು ಓದಲು ಹೆಂಡತಿಗೆ ಕೊಡುತ್ತಿದ್ದರು. ಹಾಗೇ 'ಪತಿತಪಾವನ' ಪುಸ್ತಕವನ್ನು ತಂದಿತ್ತರು. ಸೀತಮ್ಮ ಪುಸ್ತಕ ಓದಿನೋಡಿ ಆಶ್ಚರ್ಯ ಕುತೂಹಲಗಳಿಂದ ಪಾರ್ವತಮ್ಮನನ್ನು ಒಂದು ದಿನ ಕೇಳಿದಳು

"ನಿಮ್ಮ ಮಗನ ಈಚಿನ ಪುಸ್ತಕ ಓದಿದ್ದೀರೇನಿ್ರೀ ?"

"ಯಾವದಮ್ಮ ಅದು ?"

"ಪತಿತಪಾವನ."

"ಪತಿತಪಾವನ–ಅಹಲ್ಯೋದ್ಧಾರದ ಕಥೆಯೋ ?"

"ನಾನೀಗಲೇ ಹೇಳುವುದಿಲ್ಲ. ನೀವೇ ಓದಿನೋಡಿ"

ಎಂದು ಪುಸ್ತಕವನ್ನು ತಂದು ಪಾರ್ವತಮ್ಮನ ಕೈಗಿತ್ತಳು.

ಪುಸ್ತಕ ಓದುತ್ತ ಓದುತ್ತ ಪಾರ್ವತಮ್ಮನ ರಕ್ತ ಕುದಿಯಲಾರಂಭಿಸಿತು. ಮನೆಗೆಲಸವನ್ನೂ ದುರ್ಲಕ್ಷಿಸಿ ಪುಸ್ತಕ ಓದಿ ಮುಗಿಸಿದಳು. ಸಂಜೆ ಯಜಮಾನರು ಮನೆಗೆ ಬಂದಾಗ ಪುಸ್ತಕ ಅವರ ಮುಂದೆ ಒಗೆದು

"ನಿಮ್ಮ ಕುಮಾರ ಬೃಹಸ್ಪತಿಯ ಪುಸ್ತಕ ಓದಿನೋಡಿ"

ಎಂದಳು. ಚಲುವಯ್ಯನವರು ಕೈಗೆ ಪುಸ್ತಕವನ್ನೆತ್ತಿಕೊಂಡು

"ಏತರ ಮೇಲೆ ಬರೆದಿದ್ದಾನೆಯೋ ? ಏನದು ಸಾವಕಾಶವಾಗಿ ಹೇಳು– ಏಕೆ ಇಷ್ಟು ಕೋಪಮಾಡಿಕೊಂಡಿರುವೆ"

"ಹೇಳಿ ನನ್ನ ಬಾಯೇಕೆ ಹೊಲಸುಮಾಡಿಕೊಳ್ಳಲಿ. ನೀವೇ ಓದಿ ನೋಡಿ."

ಎಂದಳು. ಚಲುವಯ್ಯನವರು ಹೆಂಡತಿಯ ಆಜ್ಞೆಯ ಮೇರೆಗೆ ಪುಸ್ತಕವನ್ನು ಕೂಲಂಕಷವಾಗಿ ಓದಿದರು. ಅವರು ಶ್ರೀನಾಥನ ಬೇರೆ ಯಾವ ಕೃತಿಯನ್ನೂ ಈವರೆಗೆ ಓದಿರಲಿಲ್ಲ. ಓದುತ್ತ ಓದುತ್ತ ಅವರ ಮನಸ್ಸಿನಲ್ಲಿ ಬಗೆಬಗೆಯ ಭಾವನೆಗಳಿದ್ದವು.

"ಇದೇನೋ ಈ ಭಡವಾ, ಇಷ್ಟುದಿವಸ ಬರೆಯುತ್ತಿರುವುದು."

ಎಂದುಕೊಂಡರು.

ಪಾರ್ವತಮ್ಮ ಬಂದು ಉರಿಯುವ ಬೆಂಕಿಗೆ ತುಪ್ಪ ಹುಯ್ದಂತೆ ಕೇಳಿದಳು

"ಹೆಣ್ಣು ಮಕ್ಕಳಿರೋ ಮನೆಯಲ್ಲಿ ಇಂಥ ಪುಸ್ತಕ ಬರಬಹುದೇಂದ್ರೆ ?"

"ಎಲ್ಲಿಯಾದರೂ ಉಂಟೇ ?"

"ಇಂಥ ಪುಸ್ತಕ ಬರೆಯೋನು ಇರಬಹುದೇ? ನಮ್ಮ ಮಗ ಅನಿಸಿ ಕೊಂಡವನೇ ಇಂಥ ಹೊಲಸು ಕಥೆ ಬರೆಯುತ್ತ ಬಂದರೆ ಊರಿನಲ್ಲಿ ನಾವು ಮುಖ ಎತ್ತಿಕೊಂಡು ತಿರುಗುವುದು ಹೇಗೆ? ನಾಳೆ ನಮ್ಮ ಮನೆ ಮಕ್ಕಳ ಗತಿಯೇನು ?"

"ಅವನ ಬುದ್ಧಿಯೇ ವಿಕಾರವಾಗಿದೆ ಕಣೇ. ವಯಸ್ಸಿಗೆ ಬಂದ ಮಗ–ನಾನೇನು ಬಯ್ಯುವುದಕ್ಕಾಗುತ್ತದೆಯೋ–ಹೊಡೆಯುವುದಕ್ಕಾಗುತ್ತದೆಯೋ ?"

"ಹಾಗಾದರೆ ಸುಮ್ಮನೆ ಕೂತಿರೋದೇ ಕ್ಷೇಮ."

"ಇಲ್ಲ, ಅವನು ಮನೆಗೆ ಬರಲಿ–ವಿಚಾರಿಸಿಕೊಳ್ಳುತ್ತೇನೆ."

ಎಂದು ಹೆಂಡತಿಯ ಕೋಪವನ್ನು ಉಪಶಮನ ಮಾಡಿದರು.

ಶರ್ಮನ ವಾದವೈಖರಿ ಶ್ರೀನಾಥ ನಿರೀಕ್ಷಿಸಿದ್ದಕ್ಕಿಂತಲೂ ಹೆಚ್ಚಾಗಿ ಆವನನ್ನು ಅಲುಗಾಡಿಸಿತ್ತು. ಅದೇ ಚಿಂತೆ ಅವನ ಚಿತ್ತವನ್ನು ಬಲವಾಗಿ ಮುತ್ತಿತು.

ರಾತ್ರಿ ಮನೆಗೆ ಬಂದವನು ಯಾರನ್ನೂ ಮಾತನಾಡಿಸಲಿಲ್ಲ. ತನ್ನ ರೂಮಿಗೆ ಹೋಗಿ ಕುಳಿತು ವಿಚಾರಪರವಶನಾದ. ಸ್ವಲ್ಪ ಹೊತ್ತಿನೊಳಗಾಗಿ ತಂಗಿ ಬಂದು ಕರೆದಳು.

"ಏಕಮ್ಮ" ಎಂದು ಕೇಳಿದ.

"ಅಣ್ಣ–ಬರಹೇಳುತ್ತಾರೆ"

ಎಂದಳು. ತನ್ನ ಚಿಂತನೆಗೆ ಭಂಗ ಬಂದಿತಲ್ಲಾ ಎಂದುಕೊಂಡು ಶ್ರೀನಾಥ ಎದ್ದು ಹೋಗಿ ತಂದೆಯ ಮುಂದೆ ನಿಂತ.

ಚಲುವಯ್ಯನವರು ಅಪರಾಧಿಯನ್ನು ಕ್ರೂರವಾಗಿ ನೋಡುವ ನ್ಯಾಯಾಧೀಶನಂತೆ ಮಗನನ್ನು ನೋಡಿದರು.

"ಬರ ಹೇಳಿದರಂತೆ" ಎಂದ ಶ್ರೀನಾಥ.

ಹೌದು. ಇಂಟರ್‌ವ್ಯೂ ಗೊತ್ತುಮಾಡಿಕೊಂಡೇ ನಿನ್ನ ದರ್ಶನ ಪಡೆಯ ಬೇಕಾಗಿದೆ."

ತಂದೆಗೆ ತುಂಬ ಕೋಪ ಬಂದಿದೆಯೆನ್ನುವುದಂತೂ ಸ್ವತಃಸಿದ್ಧವಾಯಿತು. ವೃಥಾ ಕೋಪ ಕೆರಳಿಸಬಾರದೆಂದು ಶ್ರೀನಾಥ ಮೃದುವಾಗಿ

"ಮನೆಯಲ್ಲಿಯೇ ಇರುತ್ತೇನೆ."

"ಇರುತ್ತೀ—ಈ ಪುಸ್ತಕ ಯಾರದು ನೋಡು"

ಎಂದು 'ಪತಿತಪಾವನ' ಪ್ರತಿಯನ್ನು ಶ್ರೀನಾಥನ ಮುಂದೆ ಒಗೆದರು. ಶ್ರೀನಾಥ ಪುಸ್ತಕವನ್ನು ಕೈಯಲ್ಲೆತ್ತಿಕೊಳ್ಳಲಿಲ್ಲ.

"ಅದು ನನ್ನದು. ನನ್ನ ಇತ್ತೀಚಿನ ಕೃತಿ."

"ಈ ಹೊಲಸುಕಥೆ ನಿನ್ನ ಬರೆಯುವಂತೆ ಹೇಳಿದವರು ಯಾರು?"

"ಯಾರೂ ನನಗೆ ಯಾವಾಗಲೂ ಏನನ್ನೂ ಬರೆಯಹೇಳಿಲ್ಲ. ಬರೆಯಬೇಕೆನಿಸಿತು ಬರೆದೆ."

"ನಿನಗೆ ಹೇಳುವವರು ಕೇಳುವವರು ಯಾರೂ ಇಲ್ಲವೆಂದು ಕಾಣುತ್ತದೆ. ಮನಸ್ಸು ಬಂದ ಹಾಗೆ ಮಾಡಬಹುದು—ಮನಸ್ಸಿಗೆ ಬಂದುದನ್ನು ಬರೆಯಬಹುದು."

"ಮೊದಲನೆಯ ಭಾಗ ನನಗೆ ಗೊತ್ತಿಲ್ಲ. ಆದರೆ ಬರವಣಿಗೆ ವಿಷಯದಲ್ಲಿ ಮಾತ್ರ ನಾನು ಸ್ವತಂತ್ರನೆಂದು ಭಾವಿಸಿಕೊಂಡಿದ್ದೇನೆ."

"ಎಲ್ಲದರಲ್ಲಿಯೂ ನೀನು ಸ್ವತಂತ್ರನೇ. ನಿಮಗೆಲ್ಲಾ ದುಡಿದು ತಂದು ಹಾಕುವುದಕ್ಕೆ ನಾನು ಗಟ್ಟಿಯಾಗಿರುವವರೆಗೆ ನಿಮ್ಮ ಸ್ವಾತಂತ್ರ್ಯಕ್ಕೇನೂ ಅಡ್ಡಿಯಿಲ್ಲ."

"ಮಾರ್ಮಿಕವಾಗಿ ಏತಕ್ಕೆ ಮಾತಾಡುವಿರಿ. ನಿಮ್ಮದೇನು ಆಕ್ಷೇಪಣೆ ಸ್ಪಷ್ಟವಾಗಿ ಹೇಳಿಬಿಡಿ. ನಾನೇನೂ ಬರೆಯಬಾರದೆಂದು ನಿಮ್ಮ ಇಷ್ಟವೇ? ಅಥವಾ ಈ ಮನೆಯಲ್ಲಿರುವುದೇ ನಿಮಗೆ ಅಸಮ್ಮತವೋ?"

"ಇಂಥ ಬರವಣಿಗೆ ನೀನು ಬರೆಯುವ ಹಾಗಿದ್ದರೆ ನನ್ನ ಮನೆಯಲ್ಲಿರಲು ಸಾಧ್ಯವಿಲ್ಲ."

"ನಾನು ಎಂಥ ಬರವಣಿಗೆ ಬರೆಯುತ್ತೇನೆಂದು ಈಗಲೇ ಹೇಳಲಾರೆ. ನಾನು ಮನೆಯಲ್ಲಿರುವುದು ಇಷ್ಟವಿಲ್ಲದಿದ್ದರೆ ಹೇಳಿಬಿಡಿ—ನನ್ನ ಪಾಡು ನಾನು ನೋಡಿಕೊಳ್ಳುತ್ತೇನೆ."

"ಮಹಾಕವಿ ವಾಲ್ಮೀಕಿ ನೀನು. ನಿನಗೆ ಸುವರ್ಣವೃಷ್ಟಿ ಮಾಡುವುದಕ್ಕೆ ಜನ ಹಾತೊರೆಯುತ್ತಿದ್ದಾರೆ."

ಶ್ರೀನಾಥನ ಸಹನೆಯೂ ಮೀರುತ್ತ ಬಂದಿತ್ತು. ತಂದೆಯ ಜತೆ ವ್ಯಾಜ್ಯ

ಕಾಯಬಾರದೆಂದು ಅವನು ಮಾಡಿದ ಪ್ರಯತ್ನ ನಿಷ್ಫಲವಾಯಿತು. ಅವನ ಮುಖ ಬಿರುಸಾಯಿತು-ಧ್ವನಿ ಗಡಸಾಯಿತು.

"ನಾನು ಮನೆಬಿಟ್ಟು ಹೋದಮೇಲೆ ಸುವರ್ಣಪೂಜೆ ಮಾಡಿಸಿಕೊಳ್ಳು ತ್ತೀನೋ ಬೀದಿಯ ನಾಯಿಯಂತೆ ಹೊಟ್ಟೆಗಿಲ್ಲದೆ ಸಾಯುತ್ತೀನೋ ನಿಮಗೆ ಸಂಬಂಧಪಟ್ಟ ವಿಷಯವಲ್ಲ"

ಎಂದು ಹೇಳಿದ.

ತಂದೆ ಮಗನ ಸಂಭಾಷಣೆಯನ್ನು ಬಾಗಿಲು ಮರೆಯಲ್ಲಿ ನಿಂತು ಕೇಳು ತ್ತಿದ್ದ ಪಾರ್ವತಮ್ಮ ಬಿರುಗಾಳಿಯಂತೆ ಒಳಗೆ ನುಗ್ಗಿ

"ಹೋಗಲಿ ಬಿಡಿಯಂದ್ರೆ-ನೀವೇಕೆ ಮನೂತಿ ಹೇಳುತ್ತೀರಿ. ಮನೆ ಬಿಟ್ಟು ಹೋಗುವುದಕ್ಕೆ ಅವನಷ್ಟು ಆತುರನಾಗಿರುವಾಗ ನೀವೇಕೆ ಹಿಡಿದು ನಿಲ್ಲಿಸುವಿರಿ"

ಎಂದಳು.

ಚಿಕ್ಕಮ್ಮ ಎಷ್ಟೇ ಕಿರುಕುಳ ಕೊಟ್ಟರೂ ಶ್ರೀನಾಥ ಅವಳನ್ನೆದುರಿಸಿರಲಿಲ್ಲ. ಆದರಿಂದು ಅವನ ಸಂಯಮ ಸಡಲಿತು. ಕೋಪದ ಕಾವಿಗೆ ಮೈ ಬೆವರಿತು.

"ಚಿಕ್ಕಮ್ಮ, ನಾನು ಮನೆಬಿಟ್ಟು ಹೋದರೆ ಸಾಕೆಂದು ನೀವು ಬಹಳ ದಿವಸದಿಂದ ಬಯಸುತ್ತಿರುವುದನ್ನು ನಾನು ಬಲ್ಲೆ. ಆದರೀಮಾತನ್ನೇ ಸ್ವಲ್ಪ ನಯವಾಗಿ-ಗಂಭೀರವಾಗಿ ಹೇಳಿದ್ದರೆ ಚೆನ್ನಾಗಿರುತ್ತಿತ್ತು. ವಿಶ್ವಾಸ ಸ್ವಲ್ಪ ವಾದರೂ ಉಳಿಸಿಕೊಳ್ಳಬಹುದಾಗಿತ್ತು. ನಾನು ಮನೆಬಿಟ್ಟು ಹೋಗುವುದಕ್ಕೆ ಸಿದ್ಧವಾಗಿದ್ದೇನೆ. ಇದೀಗಲೇ ಹೊರಡುತ್ತೇನೆ-ನೀವಾದರೂ ಸುಖವಾಗಿರಿ"

ಎಂದು ಹೇಳಿ ಹೊರಕ್ಕೆ ಬಂದ.

"ಇದೆಲ್ಲಾ ನಿನ್ನಿಂದ" ಎನ್ನುವಂತ ಚೆಲುವಯ್ಯನವರು ಹೆಂಡತಿಯ ಮುಖ ನೋಡಿದರು.

"ನಾನೇನು ಮಾಡಿದೆ. ಅವನನ್ನು ಮನೆಬಿಟ್ಟು ಹೋಗು ಎಂದು ಹೇಳಿದವರು ನೀವೇ ಅಲ್ಲದೆ-ನಾನಲ್ಲ"

ಎನ್ನುವಂತೆ ಪಾರ್ವತಮ್ಮ ಗಂಡನ ಮುಖ ನೋಡಿದಳು.

ಶ್ರೀನಾಥ ರೂಮಿಗೆ ಬಂದು ತನ್ನ ಪುಸ್ತಕಗಳು, ಕಾಗದ ಪತ್ರಗಳು, ಕೆಲವು ಬಟ್ಟೆಬರೆಯನ್ನು ಒಂದೆಡೆ ಇಟ್ಟು ಚಿಕ್ಕಮ್ಮನನ್ನು ಕರೆದು

" ನೋಡಿ ಚಿಕ್ಕಮ್ಮ. ನನ್ನ ಪುಸ್ತಕಗಳು, ಬಟ್ಟೆಬರೆ ಬಿಟ್ಟು ನಾನೇನೂ ತೆಗೆದುಕೊಂಡಿಲ್ಲ."

ಎಂದು ಹೇಳಿದ.

ಅವನು ಹೊರಗೆ ಹೋಗಲು ಗಾಡಿ ತರುವುದಕ್ಕೇ ಹೋಗಿದ್ದಾನೆಂದು ಪಾರ್ವತಮ್ಮ ತರ್ಕಿಸಿಕೊಂಡಳು. ಚಲುವಯ್ಯ ಕುಳಿತಿದ್ದೆಡೆ ಬಿಡಲಿಲ್ಲ.

ಶ್ರೀನಾಥ ಗಾಡಿಯವನನ್ನು ಕರೆದು ಅವನ ಕೈಗೆ ತನ್ನ ಪುಸ್ತಕದ ಬಟ್ಟೆಯ ಗಂಟುಕೊಟ್ಟು ತಂದೆಯಿದ್ದಲ್ಲಿಗೆ ಬಂದು

" ಹೋಗುತ್ತೇನೆ. ಇನ್ನಾದರೂ ನನ್ನ ವಿಷಯ ಕೋಪ ಇಟ್ಟುಕೊಳ್ಳಬೇಡಿ "

ಎಂದು ಹೇಳಿ ಹೊರಟುಬಿಟ್ಟ.

ಚೆಲುವಯ್ಯನವರೆದ್ದು ಮಗನನ್ನು ಹಿಂದಕ್ಕೆ ಕರೆಯುವ ಪ್ರಯತ್ನ ಮಾಡಲಿಲ್ಲ. ಕುಳಿತಲ್ಲಿಯೇ ಕುಳಿತಿದ್ದರು. ಕಣ್ಣಿನಲ್ಲಿ ದುಃಖ ಚಿಮ್ಮುತ್ತಿತ್ತು. ಕೊನೆಯ ಘಳಿಗೆಯಲ್ಲಿ ಯಜಮಾನರು ಹೃದಯದೌರ್ಬಲ್ಯ ತೋರಿ, ಮಗನನ್ನೆಲ್ಲಿ ಹಿಂದಕ್ಕೆ ಕರೆದು ಬಿಡುತ್ತಾರೋ ಎಂದು ಪಾರ್ವತಮ್ಮ ಹೆದರಿದ್ದಳು. ಹೆಂಡತಿಯ ಮನಸ್ಸಿಗೆ ವಿರುದ್ಧವಾಗಿ ಹೋಗುವಷ್ಟು ಧೈರ್ಯಮಾಡಲು ಚಲುವಯ್ಯನವರಿಗೆ ಸಾಧ್ಯವಾಗಲಿಲ್ಲ.

ಸಂಜೆ ಶ್ರೀನಾಥನನ್ನು ಅವನ ಗೆಳೆಯರಿಬ್ಬರೂ ಹುಡುಕಿಕೊಂಡು ಬಂದರು. ಪಾರ್ವತಮ್ಮ ಬೆಳಿಗ್ಗೆಯ ಪ್ರಕರಣಕ್ಕೆ ಬಣ್ಣ ಬಳಿದು ' ವಿನಾಕಾರಣ ಶ್ರೀನಾಥ ಮನೆಬಿಟ್ಟು ಹೊರಟುಹೋದ ' ಎಂದು ತಿಳಿಸಿದಳು.

ಶರ್ಮ, ನೀಲಕಂಠ ಎರಡು ದಿವಸ ಒಂದೇ ಸಮನಾಗಿ ಶ್ರೀನಾಥನಿಗಾಗಿ ಹುಡುಕಿದರು–ಅವನ ಪತ್ತೆ ಸಿಗಲಿಲ್ಲ. ಅವರ ಮನಸ್ಸಿಗೆ ಏನೇನೋ ಅನುಮಾನ ಹೊಳೆಯಿತು. ಗೆಳೆಯನಿಗಾಗಿ ತುಂಬ ಮರುಗಿದರು.

ಮೂರನೆಯ ದಿನ ಶ್ರೀನಾಥ ನೀಲಕಂಠನ ಮನೆಗೆ ಬಂದ. ಗೆಳೆಯನನ್ನು ನೋಡಿ ನೀಲಕಂಠ ಹಿಗ್ಗಿಹೋದ.

" ಎಲ್ಲಿಗಯ್ಯಾ ಹೋಗಿಬಿಟ್ಟೆ ?" ಎಂದು ಕೇಳಿದ.

" ನಾನು ಮನೆ ಬಿಟ್ಟುಬಿಟ್ಟೆ ನೀಲಕಂಠ. ಸ್ವಲ್ಪ ಮನಸ್ತಾಪ ಬಂತು."

" ಅದು ಗೊತ್ತಾಯಿತು. ಮನೆಬಿಟ್ಟು ಎಲ್ಲಿಗೆ ಹೋದೆ ?"

"ಮುಂದೆ ಏನಾದರೂ ವ್ಯವಸ್ಥೆ ಮಾಡಿಕೊಳ್ಳಬೇಕಲ್ಲಾ."

"ಅದಕ್ಕೇನು ಮಾಡಿದೆ?"

"ಶಂಕರಪುರದಲ್ಲಿ ರೂಮು ಸಿಕ್ಕಿತು."

"ಹೌದು ರೂಮು. ಮಹಡಿಯ ಮೇಲೆ. ಸಾಕಷ್ಟು ದೊಡ್ಡದಾಗಿದೆ ಅದರ ಪಕ್ಕದಲ್ಲಿ ಒಂದು ಸಣ್ಣ ರೂಮೂ (ante Room) ಇದೆ. ಸ್ನಾನಕ್ಕೆ ನೀರು ಅಲ್ಲೇ ಕಾಯಿಸಿಕೊಳ್ಳಬಹುದು—ನಲ್ಲಿಯೂ ಇದೆ. ಹೋಟೇಲಿಗೂ ಸಮೀಪ."

ಶ್ರೀನಾಥ ಹೇಳಿದ ವರ್ಣನೆಯನ್ನು ಜೀರ್ಣಿಸಿಕೊಳ್ಳುತ್ತ ಕ್ಷಣಕಾಲ ಸುಮ್ಮನಿದ್ದು ನೀಲಕಂಠ ಕೇಳಿದ

"ನಿನ್ನ ಸ್ನೇಹಿತರೆಲ್ಲಾ ನಾಮಾವಶೇಷರಾದರೇನು?"

"ಏಕೆ ಹಾಗೆ ಕೇಳುವೆ?"

"ಇಷ್ಟು ಆತುರದಿಂದ ನೀನು ರೂಮು ಮಾಡುವ ಆವಶ್ಯಕತೆಯೇನಿತ್ತು. ನಮ್ಮ ಮನೆ ಇರಲಿಲ್ಲವೇ?—ಇದು ನಿನ್ನ ಮನೆಯಲ್ಲವೇ?"

"ನೀಲಕಂಠ, ಇದು ಒಂದೆರಡು ದಿನಗಳ ಮಾತಲ್ಲ. ನನ್ನ ಮುಂದಿನ ಜೀವಿತಕ್ಕೆ ಸಂಬಂಧಪಟ್ಟ ವಿಷಯ. ನನ್ನ ಬಾಳಿನ ಹೊರೆಯನ್ನು ನಿನ್ನ ಮೇಲೆ ಹಾಕುವುದು ಯಾವ ಧರ್ಮ."

"ಸ್ನೇಹದ ಧರ್ಮ."

"ಅದನ್ನು ನಾನು ದುರುಪಯೋಗಪಡಿಸಿಕೊಳ್ಳಬಾರದು."

"ಹೋಗಲಿ—ಇನ್ನು ಆ ವಿಷಯ ಮಾತನಾಡಿ ಪ್ರಯೋಜನವಿಲ್ಲ. ನಿನಗೆ ಏನು ತೊಂದರೆ ಬಂದರೂ ಬಾಯಿಬಿಟ್ಟು ಹೇಳಬೇಕು—ಹಣಬೇಕಾಗಿದೆಯೇ?"

"ಏನೂ ಬೇಡ—ಮೊನ್ನೆ ನನ್ನ ಪ್ರಕಾಶಕ ಇನ್ನೂರು ರೂಪಾಯಿ ಕೊಟ್ಟ. ಸದ್ಯಕ್ಕೆ ಸಾಕು. ಹೋಟೇಲಿಗೆ, ರೂಮಿಗೆ ಅಡ್ವಾನ್ಸ್ ಕೊಟ್ಟಿದ್ದೇನೆ—ಬೇಕಾದರೆ ತೆಗೆದುಕೊಳ್ಳುತ್ತೇನೆ."

ಸುಶೀಲಮ್ಮ ಕಾಫಿ ತಿಂಡಿ ತಂದು ಗೆಳೆಯರ ಮುಂದಿಟ್ಟು

"ನೀವು ಮನೆಬಿಡುವುದಕ್ಕೇನಾಯಿತು?" ಎಂದು ಕೇಳಿದಳು.

"ನಿಜ ಹೇಳೆನ್ನುವಿರಾ ಅಕ್ಕಾ."

"ಸುಳ್ಳು ಹೇಳಿಯೆನ್ನುತ್ತೇನೆಯೇ?"

“ಪತಿತಪಾವನ ಬರೆದ ಪಾಪಿ ಸದ್ಗೃಹಸ್ಥರ ಮನೆಯಲ್ಲಿರಬಾರದೆಂದು ನನ್ನ ತಂದೆ, ಚಿಕ್ಕಪ್ಪ ತೀರ್ಮಾನಿಸಿದರು.”

“ನಿಮ್ಮ ಸಾಹಿತ್ಯಕ್ಕೂ, ಋಣಾನುಬಂಧಕ್ಕೂ ಏನು ಸಂಬಂಧ?”

“ಎರಡರ ಒಳಗೂ ನಾನೇ ಅಲ್ಲವೇ ಇರುವುದು.”

ಸುಶೀಲಮ್ಮನ ಮುಖ ಚಿಕ್ಕದಾದುದನ್ನು ಕಂಡು ಶ್ರೀನಾಥ

“ಅಕ್ಕ, ಇದಕ್ಕೆ ನೀವೇಕೆ ಪೇಚಾಡುವಿರಿ. ಆದದ್ದೆಲ್ಲಾ ಒಳ್ಳೆಯದಕ್ಕೇ. ನಾನಾದರೂ ಎಷ್ಟು ದಿವಸ ತಂದೆ ಸಾಕಿದ ಮಗನ ಹಾಗಿರಬೇಕು.”

“ನಾನೂ ಪತಿತ–ಪಾವನದ ಬಗ್ಗೆ ಒಂದೆರಡು ಕಠಿಣ ಮಾತುಗಳನ್ನಾಡಿದ್ದೆ. ನೀವು ಮನೆ ಬಿಡುವುದಕ್ಕೆ ಅದೂ ಕಾರಣವಾಯಿತೇನೋ ಎಂದು ಯೋಚಿಸಿದೆ.”

“ಅದಕ್ಕೆ ಇದಕ್ಕೆ ಯಾವ ಸಂಬಂಧ.”

“ನಿಮ್ಮ ಮನಸ್ಸಿಗೆ ಬೇಸರವಾಗಿರಬಹುದು.”

“ನೀವು ಏನೇ ಅಂದರೂ ನನಗೆ ಬೇಸರವಾಗುವುದಿಲ್ಲ. ನನ್ನ ನಿಜವಾದ ಹಿತೈಷಿಗಳು ಯಾರು ಎಂಬುದನ್ನು ನಾನು ಬಲ್ಲೆ.”

ಗೆಳೆಯರು ಕಾಫಿ ಉಪಾಹಾರ ಸ್ವೀಕರಿಸುತ್ತಿದ್ದಾಗ ಸುಶೀಲಮ್ಮ

“ರೂಮಂತೂ ಮಾಡಿಯಾಯಿತು. ಇಲ್ಲಿಗೇ ಬಂದು ಊಟಮಾಡಿಕೊಂಡು ಹೋಗಬಾರದೇ?”

“ನನಗೆ ವೃಥಾ ತೊಂದರೆಯಾಗುತ್ತದೆ–ನಿಮಗೂ ತೊಂದರೆ. ಊಟದ ಹೋಟೇಲ್ ರೂಮಿನ ಹತ್ತಿರಲೇ ಇದೆ–ನನಗೆ ಹೋಟೇಲು ಊಟ ಬೇಸರವಾದಂದು ಖಂಡಿತ ಇಲ್ಲಿಗೇ ಬರುತ್ತೇನೆ”

ಎಂದು ಹೇಳಿದ.

ನೀಲಕಂಠ ಅಂದೇ ಶರ್ಮನೊಂದಿಗೆ ಹೋಗಿ ಶ್ರೀನಾಥನ ರೂಮು ನೋಡಿಕೊಂಡು ಬಂದ. ಅವನ ಉಪಯೋಗಕ್ಕೆ ಒಂದು ಮೇಜು, ಕುರ್ಚಿ, ಒಂದು ಮಂಚ ಕಳಿಸಿಕೊಟ್ಟ. ಸುಶೀಲಮ್ಮ ಒಂದು ಬಾಯಿಲರ್, ಕೆಲವು ಪಾತ್ರೆಗಳನ್ನು ಕಳಿಸಿಕೊಟ್ಟಳು.

“ನಿನಗೆ ನೀರು ಕಾಸಿಕೊಟ್ಟು ಊಟ ತಂದುಕೊಡುವುದಕ್ಕೆ ಒಬ್ಬ ಹುಡುಗನನ್ನು ಗೊತ್ತುಮಾಡಿಕೋ ಶ್ರೀನಾಥ”

ಎಂದು ಶರ್ಮ ಹೇಳಿದ.

" ನಾನೇ ಆಳಾಗುವಾಗ ನನಗೇಕಪ್ಪಾ ಆಳು "

ಎಂದು ಶ್ರೀನಾಥ ಉತ್ತರವಿತ್ತ.

ಶಂಕರಪುರದ ಮಹಡಿಯ ಮೇಲೆ ಶ್ರೀನಾಥನ ಏಕಾಂತಜೀವನ ಆರಂಭವಾಯಿತು. ಮನಸ್ಸಿನ ಮೋಡ ಚದುರಲು ಶ್ರೀನಾಥ ಕೆಲಸದಲ್ಲಿ ವ್ಯಾಪೃತಿಯ ಅಪೇಕ್ಷಿಸಿದ.

ನೀಲಕಂಠ, ಸುಶೀಲಮ್ಮನ ಮುಂದೆ ಶ್ರೀನಾಥ ನಿಶ್ಚಿಂತೆಯ ಸೋಗು ಹಾಕಿದ್ದ. ಆದರೆ ಅವನ ಹೃದಯ ಹಿಂಡಿಹೋಗಿತ್ತು. ವಿಚಾರದಲ್ಲಿ ಭಿನ್ನಾಭಿಪ್ರಾಯ ಬಂದರೆ ಅದು ಸುಹೃತ್ಸಂಬಂಧವನ್ನು ಕೊನೆಗಾಣಿಸಬೇಕೇ ? ಎಂಬ ಚಿಂತೆ ಅವನನ್ನು ಕಾಡತೊಡಗಿತು.

ಶ್ರೀನಾಥನ ಮನಸ್ಸಿಗೆ ನೆಮ್ಮದಿ ಬೇಕಾಗಿತ್ತು. ಹೃದಯ ತುಂಬಿದ್ದ ಅಳಲು, ಭಾವನೆಗಳನ್ನು ಅವನು ಹೊರಗೆ ಹಾಕದ ಹೊರತೂ ನೆಮ್ಮದಿ ದೊರೆಯುವ ಸಂಭವವಿರಲಿಲ್ಲ. ಮನೋವಿಶ್ಲೇಷಣಾತ್ಮಕ ಕಾದಂಬರಿಯೊಂದನ್ನು ಆರಂಭಿಸಿದ. ಮನಸ್ಸು ಹತೋಟಿಗೆ ಬರಲೊಲ್ಲದು. ವಿಚಾರವಾಹಿನಿ ರಭಸವಾಗಿ ಓಡಿದಂತೆ ಕಾದಂಬರಿ ಓಡಲಿಲ್ಲ, ಕುಂಟುತ್ತ ಎಡವುತ್ತ ಸಾಗಿತ್ತು.

ಹೊಟ್ಟೆಯುಪಾಡಿಗೆ ಬರವಣಿಗೆಯನ್ನು ಸಾಧನವಾಗಿಕೊಳ್ಳಬೇಕೆಂಬ ಅಭಿಪ್ರಾಯ ಇದುವರೆಗೆ ಶ್ರೀನಾಥನಿಗೆ ಹೊಳೆದಿರಲಿಲ್ಲ. ಈಗ ಅದೇ ದೊಡ್ಡ ಸಮಸ್ಯೆಯಾಯಿತು. ರೂಮು ಬಾಡಿಗೆ, ಹೊಟೇಲ್ ಖರ್ಚು, ಬಟ್ಟೆಬರೆ. ಮೇಲು ಖರ್ಚುಗಳೆಲ್ಲವನ್ನೂ ಅವನ ಬರವಣಿಗೆಯಲ್ಲಿ ಬರುವ ಆದಾಯ ನಿರ್ವಹಿಸಬೇಕಾಗಿತ್ತು.

ಬರವಣಿಗೆ ಫಲಪ್ರದವಾಗಬೇಕಾದರೆ ಪ್ರಕಾಶಕರ ಮರ್ಜಿ ಹಿಡಿದು, ಅವರ ಅಭಿರುಚಿಗನುಗುಣವಾಗಿ ಬರೆಯಬೇಕಾಗಿತ್ತು. ವಿಚಾರಕ್ರಾಂತಿಯ ಕಡೆಗೇ ಲಕ್ಷ್ಯವಿಟ್ಟಿದ್ದ ಶ್ರೀನಾಥನಿಗೆ ಇತರರ ಅಭಿರುಚಿಗೆ ಸೊಪ್ಪು ಹಾಕುವುದು ಸುಲಭ ಸಾಧ್ಯವಾಗಿರಲಿಲ್ಲ.

ಶ್ರೀನಾಥನಿಗೆ ನಿತ್ಯಜೀವನದ ಜಂಜಡ ಆರಂಭವಾಯಿತು. ಆದರೆ ಧಾವಂತದಲ್ಲಿ ಬರವಣಿಗೆ ಸಾಗುತ್ತಿರಲಿಲ್ಲ. ಹೊತ್ತು ಹಗಲಿನ ಮೇಲಣ ನೊಗವಾಗುತ್ತಿತ್ತು—ಮನಸ್ಸಿಗೇನೋ ಬೇಸರ—ಜಿಗುಪ್ಸೆ—ನಿರುತ್ಸಾಹ. ಮಹಾ

ವನ ಬಾಳುವೆಯೇ ನಿರರ್ಥಕ, ನಿಷ್ಪ್ರಯೋಜಕವೆಂಬ ನಿರ್ಣಿಣ್ಣಾತಿ ಅವನನ್ನು ವ್ಯಾಪಿಸುತ್ತಿತ್ತು.

ನೀಲಕಂಠನಿಗೆ ಆಸ್ಪತ್ರೆಯಲ್ಲಿ ಕೈತುಂಬ ಕೆಲಸ. ಅವನು ಮೇಲಿಂದ ಮೇಲೆ ಬಂದು ಶ್ರೀನಾಥನನ್ನು ಸಮಾಧಾನಗೊಳಿಸಲು ಸಾಧ್ಯವಾಗಲಿಲ್ಲ. 'ವೃಥಾ ತನ್ನಿಂದೇಕೆ ತೊಂದರೆ' ಎಂದು ಶ್ರೀನಾಥ ನೀಲಕಂಠನ ಮನೆಯ ಕಡೆ ಸುಳಿಯಲಿಲ್ಲ.

ಶರ್ಮ ಆಗಾಗ್ಗೆ ಬಂದು ಶ್ರೀನಾಥನ ರೂಮಿನಲ್ಲಿ ಕುಳಿತು ತನ್ನ ಜೀವನ ಸಿದ್ಧಾಂತವನ್ನುಪದೇಶಿಸುತ್ತಿದ್ದ. ಶ್ರೀನಾಥನಿಗೆ ಅವನ ಮಾತು, ವಾದವೈಖರಿ ಅಷ್ಟಾಗಿ ರುಚಿಸುತ್ತಿರಲಿಲ್ಲ. ಶಿಷ್ಟಾಚಾರಕ್ಕಾಗಿ ಅವನ ಉಪದೇಶವನ್ನು ಲಾಲಿಸಿ ಕೇಳುತ್ತಿದ್ದ.

ಹೊಟೇಲ್ ಮಾಣಿ ರಾತ್ರಿ ಎಂಟುಗಂಟೆಗೆ ಅನ್ನ ತಂದಿಟ್ಟು ಹೋಗುತ್ತಿದ್ದ. ಶ್ರೀನಾಥ ಮನಸ್ಸು ಬಂದರೆ ಊಟಮಾಡುತ್ತಿದ್ದ; ಊಟ ಬೇಡವೆನಿಸಿದರೆ ಎರಡು ಗ್ಲಾಸು ನೀರು ಕುಡಿದು ಮಲಗುತ್ತಿದ್ದ.

ಒಂದು ರಾತ್ರಿ, ಅದೇ ಮಾಣಿ ಊಟ ತಂದಿಟ್ಟು ಹೋಗಿದ್ದಾನೆ. ಶ್ರೀನಾಥ ಅಸ್ತವ್ಯಸ್ತನಾಗಿ ತನ್ನ ರೂಮಿನಲ್ಲೇ ಶಥಪಥ ತಿರುಗುತ್ತಿದ್ದಾನೆ. ಶರ್ಮ ಬಂದವನೇ ಕೇಳಿದ

"ಏನು ಮಗೂ-ಸಂಜೆ ಎಲ್ಲೀಗೂ ಹೋಗಲಿಲ್ಲವೇ?"

"ಇಲ್ಲ-ಎಲ್ಲೀಗೆ ಹೋಗುವುದು."

"ಇದೇನಯ್ಯಾ-ರೂಮಿನಲ್ಲೇ ಕೂತುಕೊಂಡು ಜೂಗರಿಸುತ್ತೀ"

"ಲಾಲ್‌ಬಾಗಿಗೆ ಹೋದರೂ ಅಲ್ಲೂ ಕೂತುಕೊಂಡು ಜೂಗರಿಸುವುದು ತಾನೇ-ರೂಮಿನಲ್ಲಾದರೂ ಬೇರೆಯವರ ಕಾಟವಿಲ್ಲ."

"ನನ್ನ ಕಾಟಬಿಟ್ಟು—"

"ನೀನು ಬರುವುದನ್ನೂ ಕಾಟವೆನ್ನುವುದಕ್ಕಾಗುತ್ತದೆಯೇ?"

"ಹೋಗಲಿ ಬಿಡು-ಅಷ್ಟೇ ಸಮಾಧಾನ. ಊಟ ಆಯಿತೇನು?"

"ಇಲ್ಲ-ಅನ್ನ ಬಂದಿದೆ."

"ಏಳು-ಹೊರಗೇ ಹೋಗಿ ಏನಾದರೂ ತಿಂದು ಬರೋಣ"

"ಈಗೇನು ಸಿಕ್ಕುತ್ತದೆ."

"ಬೊಂಬಾಯಿ ಹೋಟೆಲಿನಲ್ಲಿ ಬಿಸಿ ಪೂರಿ ಮಾಡಿಕೊಡುತ್ತಾನೆ."

ಶ್ರೀನಾಥ ಎದ್ದು ಶರ್ಮನೊಂದಿಗೆ ಹೊರಟ. ಇಬ್ಬರೂ ಮಾರ್ಕೆಟ್ ಬಳಿಗೆ ಬಂದು ಅಲ್ಲಿದ್ದ ಬೊಂಬಾಯಿ ಹೋಟೆಲಿನಲ್ಲಿ ಪೂರಿ-ಪಲ್ಯ ತಿಂದರು.

ಶರ್ಮ ಒಂದು ಜಟಕಾಗಾಡಿ ಗೊತ್ತುಮಾಡಿದ. ಶ್ರೀನಾಥ ಅವನು ಇಬ್ಬರೂ ಹೊರಟರು. ಗಾಡಿ ಶಂಕರಪುರದ ಕಡೆ ತಿರುಗಲಿಲ್ಲ. ನೇರವಾಗಿ ಬಸವನಗುಡಿ ಕಡೆ ಹೊರಟಿತು.

"ಎಲ್ಲಿಗಯ್ಯಾ ಹೋಗುವುದು" ಎಂದು ಶ್ರೀನಾಥ ಕೇಳಿದ.

"ಸ್ವಲ್ಪ ತಡೆ. ನಿನಗೇ ಗೊತ್ತಾಗುತ್ತದೆ"

ಎಂದು ಶರ್ಮ ಉತ್ತರಿಸಿದ.

ಗಾಡಿಯನ್ನು ನಿಲ್ಲ ಹೇಳಿ ಶರ್ಮ ಶ್ರೀನಾಥನನ್ನು ಕರೆದುಕೊಂಡು ಮುತ್ತಮ್ಮನ ಮನೆಗೆ ಬಂದ.

ಮುತ್ತಮ್ಮ ಎಲಡಿಕೆ ಮುಂದೆ ಸುರಿದುಕೊಂಡು ಕುಳಿತಿದ್ದಳು. ನಾಗರಾಜ ಮಲಗಿಬಿಟ್ಟಿದ್ದ. ಶರ್ಮನನ್ನು ಕಂಡೊಡನೆಯೇ

"ಇದೇನಪ್ಪಾ-ಇಷ್ಟು ಹೊತ್ತಿಗೆ ಬಂದೆ-ಇವರು ಯಾರು?"

"ಬರಬೇಕಾಯಿತು ಮುತ್ತಮ್ಮ. ಇವರು ನನ್ನ ಸ್ನೇಹಿತರು-ದೊಡ್ಡ ಕವಿಗಳು-ಮುಂದೆ ನಿನ್ನ ಸ್ನೇಹಿತರಾಗಲಿ ಎಂದು ಕರೆದುಕೊಂಡು ಬಂದೆ."

"ಸಂತೋಷ"

ಎಂದಳು. ಶರ್ಮ ಮನೆಯ ಸುತ್ತ ಕಣ್ಣು ಹೊರಳಿಸಿ

"ಏನು ವಿಶೇಷ"

ಎಂದು ಕೇಳಿದ. ಮುತ್ತಮ್ಮ ಉತ್ತರಕೊಡದೆ ಏತಕ್ಕೋ ಎದ್ದು ಹೋದಳು.

ಶ್ರೀನಾಥ ಅನುಮಾನಿಸುತ್ತ

"ಯಾರದಯ್ಯಾ ಇದು ಮನೆ. ಏಕೋ ಎಲ್ಲಾ ಒಂದು ವಿಧವಾಗಿ ವಿಚಿತ್ರವಾಗಿದೆಯಲ್ಲಾ."

"ಎಳೆಯ ಮಗೂ ಕಣೋ ನೀನು-ನಿನಗೊಂದೂ ಅರ್ಥವೇ ಆಗುವುದಿಲ್ಲ."

"ಅಂಥ ಮನೆಯೇನು?"

"ಅದರಲ್ಲಿ ಸಂದೇಹವುಂಟೇ?"

"ನಾನು ಹೊರಡುತ್ತೇನಪ್ಪಾ"

"ನಿನಗೋಸ್ಕರವೇ ನಾನು ಬಂದದ್ದು. ನಿನ್ನ ಅವಸ್ಥೆ ನೋಡಲಾಗಲಿಲ್ಲ.—ಇಲ್ಲದ ನಾಟಕವಾಡಬೇಡ. ಸುಮ್ಮನೆ ಕುಳಿತುಕೋ"

ಎಂದು ಹೇಳಿ ಮುತ್ತಮ್ಮನ ಜತ ಮಾತನಾಡಲು ಒಳಗೆದ್ದು ಹೋದ.

ಮುತ್ತಮ್ಮ ಸ್ವಲ್ಪ ಬೇಸರದ ಧ್ವನಿಯಲ್ಲಿ ಕೇಳಿದಳು

"ಏನಪ್ಪಾ ಇಷ್ಟು ಹೊತ್ತಿನಲ್ಲಿ ಬಂದುಬಿಟ್ಟೆ. ಗುರುತಿಲ್ಲ ಪರಿಚಯವಿಲ್ಲದವರನ್ನೆಲ್ಲಾ ಕರೆದುಕೊಂಡು ಬರುತ್ತೀ. ಮೊದಲೇ ಈ ಮನೆಯವನು ಘಾತುಕ—ಅವನ ಬಾಯಿಗೆ ಬಿದ್ದು ನಾನು ಬದುಕುತ್ತೇನೆಯೋ ?"

"ನೀನು ಇಲ್ಲದ ಹಗರಣ ಮಾಡಬೇಡ ಮುತ್ತಮ್ಮ"

ಎಂದು ಅವಳ ಕೈಯಲ್ಲಿ ಎರಡು ರೂಪಾಯಿ ಇಟ್ಟ. ಮುತ್ತಮ್ಮ ಸ್ವಲ್ಪ ಪ್ರಸನ್ನಳಾದಳು.

"ನಿನ್ನದು ಯಾವಾಗಲೂ ಇಷ್ಟೇನೋ. ಕೈತುಂಬ ಒಂದು ಸಲವಾದರೂ ಐವತ್ತು ರೂಪಾಯಿ ಕೊಟ್ಟಿದ್ದೀಯಾ ?"

"ಕೊಡೋಣ ಇಲ್ಲಿಗೇ ಮುಗಿದು ಹೋಯಿತೇನು ?- ಈಗ ಯಾರು ಇದ್ದಾರೆ."

"ವೆಂಕಟಮ್ಮ ಒಬ್ಬಳೇ ಇರೋದು."

"ಕಮಲಾ ಬರುವುದಕ್ಕೆ ಸಾಧ್ಯವಿಲ್ಲವೇ ?"

"ಈಗ ಹೋಗಿ ಅವಳನ್ನು ಕರೆದುಕೊಂಡು ಬರುವವರು ಯಾರು ?"

"ನಾಗರಾಜನನ್ನು ಕಳುಹಿಸು"

"ಮಲಗಿದ ಮೇಲೆ ಅವನೊಂದು ಘಟಸರ್ಪ ಎಬ್ಬಿಸಿದರೆ ಹೊಡೆಯುವುದಕ್ಕೆ ಬರುತ್ತಾನೆ."

"ನೀನೇ ಹೋಗಿ ಬಾ—ಗಾಡಿ ನಿಲ್ಲಿಸಿದ್ದೀನಿ. ಅರ್ಧ ಗಂಟೆಯಲ್ಲಿ ಬರಬಹುದು."

"ಅವಳು ಮಲಗಿರುತ್ತಾಳೋ ಏನೋ—ಹೋಗಿ ಬರಿಗೈಯಲ್ಲಿ ಹಿಂದಿರುಗಬೇಕಾಗಿ ಬಂದರೆ."

"ನೀನು ಹೋಗುವ ಮನಸ್ಸು ಮಾಡಿದರೆ ಏನಾದರೂ ಆಗುತ್ತದೆ. ಇಲ್ಲೇ ನೂರು ಕುಂಟು ನೆಪ ಹೇಳುತ್ತೀ."

"ಮನೆ ನೋಡಿಕೊಳ್ಳುತ್ತಿರುತ್ತೀಯೋ ?"

"ನೋಡಿಕೊಳ್ಳದೆ..."

"ನನಗೆ ಇಪ್ಪತ್ತು ರೂಪಾಯಿ ಕೊಟ್ಟುಬಿಡಬೇಕು."

"ನೀನು ಹೋಗಿ ಬರಬಾರದೇ ?"

ಮುತ್ತಮ್ಮ ಹೊರಡಲಣಿಯಾದಳು.

ಹೊರಗಡೆ ರೂಮಿನಲ್ಲಿ ಯಾರೋ ಮಲಗಿದ್ದುದನ್ನು ಕಂಡು ಶರ್ಮ "ಯಾರದು ರೂಮಿನಲ್ಲಿ ?" ಎಂದು ಮುತ್ತಮ್ಮನನ್ನು ಕೇಳಿದ.

"ನಮ್ಮವರ–ನಂಟರು–ಅವರನ್ನು ಕೆಣಕುವುದಕ್ಕೆ ಹೋಗಬೇಡ."

"ಇಲ್ಲ–ಹೋಗಿ ಬೇಗ ಬಾ. ತಪ್ಪದೆ ಕರೆದುಕೊಂಡು ಬರಬೇಕು."

ಶರ್ಮ ಗಾಡಿಯವನಿಗೆ ಅವಳನ್ನು ಕರೆದುಕೊಂಡು ಹೋಗಿ ಬರುವಂತೆ ಹೇಳಿದ.

ಬಂದಿದ್ದ ಅತಿಥಿಗಳ ಜತೆ ಮಾತನಾಡುತ್ತಿರುವಂತೆ ಹೇಳಲು ಮುತ್ತಮ್ಮ ಹೋಗಿ ನಾಗರಾಜನನ್ನೆಬ್ಬಿಸಿದಳು. 'ಹೋ–ಆಗಲಿ' ಎನ್ನುತ್ತಾ ಅವನು ಬಲವಾಗಿ ಮುಸುಕು ಬೀರಿಕೊಂಡ.

ಮುತ್ತಮ್ಮ ನಾಗರಾಜನನ್ನು ಶಪಿಸುತ್ತಾ ಗಾಡಿಯ ಬಳಿ ಹೋದಳು.

ಶರ್ಮ ಮುತ್ತಮ್ಮನನ್ನು ಕಳುಹಿಸಿ ಹಿಂದಿರುಗುತ್ತಲೇ ಶ್ರೀನಾಥ ಕೇಳಿದ "ಏನಯ್ಯಾ–ಇದು ನಿನ್ನ ಆಟ. ಈಗವಳನ್ನು ಎಲ್ಲಿಗೆ ಸಾಗು ಹಾಕಿದೆ."

"ನಿನ್ನ ಕೆಲಸಕ್ಕಾಗಿಯಪ್ಪ. ಬೇಗ ಬಂದು ಬಿಡುತ್ತಾಳೆ."

"ನನ್ನ ಕೆಲಸ....?"

"ಹೊ ! ಈಗ ಮನೆಯಲ್ಲಿ ವೆಂಕಟಮ್ಮ ಒಬ್ಬಳೇ ಇದ್ದಾಳೆ. ಇನ್ನೊಬ್ಬಳನ್ನು ಕರೆದುಕೊಂಡು ಬಾರೆಂದು ಕಳಿಸಿದೆ."

"ನನಗೇನೂ ಬೇಕಾಗಿರಲಿಲ್ಲವಲ್ಲಾ."

"ತುದಿನಾಲಗೆ ಮಾತು ಏಕೆ ಹೇಳುತ್ತೀ. ನಿನ್ನ ಅವಸ್ಥೆ ನನಗೆ ಗೊತ್ತಿಲ್ಲವೇ ?–ಈ ವೆಂಕಟಮ್ಮನ ಪರಿಚಯ ಮಾಡಿಕೊಳ್ಳುತ್ತೀಯೇನು ?"

"ಇವಳು ಯಾರು ?"

"ಇವಳೂ ಹೀಗೇನೇ !"

ಎಂದು ವೆಂಕಟಮ್ಮನನ್ನು ಕೂಗಿದ. ವೆಂಕಟಮ್ಮ ಬಂದು ಗೆಳೆಯರ ಎದುರಿಗೆ ನಿಂತಳು.

"ನಿನ್ನೆ ಬಂದಿತ್ತೇ?" ಎಂದು ಶರ್ಮ ಕೇಳಿದ.

"ಇನ್ನೂ ಇಲ್ಲ. ಇಷ್ಟು ಬೇಗ ಎಲ್ಲಿಯ ನಿದ್ರೆ."

"ಕುಳಿತುಕೋ—ನಿಂತೇ ಇದ್ದೀಯಲ್ಲಾ."

ವೆಂಕಟಮ್ಮ ಕುಳಿತುಕೊಳ್ಳಲು ಶ್ರೀನಾಥ

"ಈಕೆ ನಿನ್ನ ಹಳೆಯ ಪರಿಚಯಸ್ಥಳು ಎಂದು ಕಾಣುತ್ತದೆ." ಎಂದ.

"ಅವಳನ್ನೇ ಕೇಳು."

ವೆಂಕಟಮ್ಮ ಅವರ ಮಾತಿಗೆ ನಸುನಕ್ಕಳು.

"ಕಮಲಾ ಈಗ ಬರುತ್ತಾಳೇನೇ?" ಎಂದು ಶರ್ಮ ಕೇಳಿದ.

"ಅವಳನ್ನು ಕರೆದುಕೊಂಡು ಬರುವುದಕ್ಕೆ ಕಳಿಸಿದಿರೋ?"

"ಹೌದು—ಬರುತ್ತಾಳೋ ಇಲ್ಲವೋ?"

"ಹೇಗೆ ಹೇಳುವುದಕ್ಕಾಗುತ್ತದೆ. ಅವಳದು ಅತೀಜಂಭ. ಇವರು ಯಾರು ಸ್ವಾಮಿ?"

"ನನ್ನ ಸ್ನೇಹಿತರು. ತುಂಬ ಒಳ್ಳೆಯವರು. ಗುರುತು ಇಟ್ಟುಕೊಂಡಿರು."

"ನಮಗೆ ಗುರುತು ಇದ್ದೇ ಇರುತ್ತದೆ. ನೀವೇ ಮರೆತುಬಿಡುವವರು."

"ನಿನ್ನ ನಾನು ಮರೆತೇನೇ ವೆಂಕಟಮ್ಮ."

"ಇನ್ನೊಬ್ಬರು ಸಿಕ್ಕುವವರೆಗೆ ಮರೆಯುವುದಿಲ್ಲ."

"ರೂಮಿನಲ್ಲಿ ಯಾರೇ ವೆಂಕಟಮ್ಮ ಮಲಗಿರುವುದು?"

"ನೀವು ಕಾಣಿರಾ ಸ್ವಾಮಿ."

"ಖಂಡಿತವಾಗಿಯೂ ಗೊತ್ತಿಲ್ಲ."

"ಅವಳೇ ಅಚ್ಚಮ್ಮ."

"ಅಚ್ಚಮ್ಮ! ಯಾರೋ ನನಗೆ ಗೊತ್ತಿಲ್ಲ. ಹೇಗಿದ್ದಾಳೆ?"

"ಹೇಗಿದ್ದರೂ ಅವಳು ಬರುವುದು ಸಾಧ್ಯವಿಲ್ಲ."

"ಏಕೆ?"

"ಅವಳಿಗೆ ಆರು ತಿಂಗಳು ತುಂಬತ್ತೆ ಸ್ವಾಮಿ. ತುಂಬಿದ ಬಸುರಿ."

" ನೀನು ಇಲ್ಲೇ ಇದ್ದೀಯಾ ?" ಎಂದು ಶ್ರೀನಾಥ ಕೇಳಿದ.

" ಇಲ್ಲ. ನನಗೆ ಮನೆ ಇದೆ – ಗಾಣಿಗರ ಪೇಟೆಯಲ್ಲಿ. ಯಾವಾಗಲಾದರೂ ಬಂದು ಒಂದೆರಡು ದಿವಸವಿದ್ದು ಹೋಗುತ್ತೇನೆ."

" ಮನೆಯಲ್ಲಿ ಯಾರೂ ಇಲ್ಲವೇ ?"

" ಎಲ್ಲರೂ ಇದ್ದಾರೆ. ಅಣ್ಣ, ಅತ್ತಿಗೆ, ಅಣ್ಣನಮಕ್ಕಳು...."

" ಗಂಡ...."

" ಅವನೂ ಇದ್ದಾನೆ."

" ನೀನು ಇಲ್ಲಿಗೆ ಬರುವುದು ಗಂಡನಿಗೆ ಗೊತ್ತೇ ?"

" ಅದೆಲ್ಲಾ ಯಾಕೆ ಕೇಳುತ್ತೀರಿ ಸ್ವಾಮಿ."

" ಹೇಳು ಪರವಾಯಿಲ್ಲ ವೆಂಕಟಮ್ಮ. ಅದನ್ನೆಲ್ಲಾ ನನ್ನ ಸ್ನೇಹಿತ ಯಾರ ಹತ್ತಿರವೂ ಬಾಯಿ ಬಿಡುವುದಿಲ್ಲ"

ಎಂದು ಶರ್ಮ ಸೂಚಿಸಿದ.

" ನನ್ನ ಗಂಡ ಮನೆಗೆ ತಂದು ಹಾಕುವುದು ಸಾಲುವುದಿಲ್ಲ. ನಾನೂ ದುಡಿದು ಮನೆ ಖರ್ಚು ನೋಡಿಕೊಳ್ಳುತ್ತೇನೆ"

" ಹೇಗೆ ದುಡಿಯುತ್ತೀ ಎಂದವನು ಕೇಳುವುದಿಲ್ಲವೇ ?"

" ನಮ್ಮಲ್ಲಿ ಹಾಗೆ ಕೇಳುವ ಅಭ್ಯಾಸವೇ ಇಲ್ಲ ಸ್ವಾಮಿ."

ಎಂದಳು.

ಹೊರಗಡೆ ಗಾಡಿಯ ಸಪ್ಪಳವಾಯಿತು. ವೆಂಕಟಮ್ಮ ಎದ್ದು ರೂಮಿಗೆ ಹೊರಟಳು. ಶರ್ಮ ಎದ್ದು ಹೋಗಿ ನೋಡಿದ. ರಸ್ತೆಯ ಕಡೆಯಿಂದ ಮುತ್ತಮ್ಮ ಯಾರನ್ನೋ ಕರೆದುಕೊಂಡು ಬರುತ್ತಿದ್ದಳು. ಶರ್ಮನ ಮನಸ್ಸು ಹಗುರವಾಯಿತು. ಕೂಡಲೆ ಒಳಕ್ಕೆ ಬಂದು

" ಶ್ರೀನಾಥ, ಈಗ ಬರುವವಳನ್ನು ನೋಡು. ಇಬ್ಬರಲ್ಲಿ ನಿನಗೆ ಯಾರು ಬೇಕು ಅವರ ಜತೆಯಲ್ಲಿರಬಹುದು."

ಎಂದು ಹೇಳಿದ.

ಮುತ್ತಮ್ಮ ಮನೆಯೊಳಗೆ ಕಮಲನೊಂದಿಗೆ ಬಂದು ' ಉಸ್ಸಪ್ಪಾ ' ಎಂದು ಕುಳಿತಳು.

"ಏನು ಕಾಟ ಕೊಡುತ್ತೀಯಪ್ಪಾ....ಗಾಡಿಯವನು ಕಾದಿದ್ದಾನೆ. ಅವನನ್ನು ಕಳುಹಿಸಿಬಿಡು"

ಎಂದಳು. ಶರ್ಮ ಎದ್ದು ಹೋಗಿ ಗಾಡಿಯವನಿಗೆ ಬಾಡಿಗೆಕೊಟ್ಟು ಕಳಿಸಿಬಂದ.

ಶ್ರೀನಾಥ ಕಮಲನನ್ನು ಎವೆಯಿಕ್ಕದೆ ನೋಡಿದ. ಸ್ವಲ್ಪ ಹೊತ್ತು ನೀರವ.

ಮುತ್ತಮ್ಮ ಆಕಳಿಸುತ್ತಾ

"ಏನು ಹೇಳಪ್ಪಾ....ನನಗೆ ನಿದ್ರೆ ಬರುತ್ತಿದೆ"

ಎಂದಳು.

ಶರ್ಮ ಅವಳನ್ನು ಹೊರಗೆ ಕರೆದುಕೊಂಡು ಹೋಗಿ

"ಏನು ಹೇಳಿದ್ದೀ ಮುತ್ತಮ್ಮ"

ಎಂದ.

"ನಾನೇನೂ ಹೇಳಲಿಲ್ಲ. ನೀನೇ ಮಾತನಾಡು."

ಶರ್ಮ ಜೇಬಿನಿಂದ ಇಪ್ಪತ್ತು ರೂಪಾಯಿ ತೆಗೆದು ಮುತ್ತಮ್ಮನ ಕೈಯಲ್ಲಿಟ್ಟ. ಅವಳು ನೋಟುಗಳನ್ನು ಎಣಿಸಿಕೊಂಡು

"ಇಬ್ಬರಿಗೂ...."

"ಹೂ!"

"ಕಮಲ ಒಪ್ಪುವುದಿಲ್ಲ. ಅವಳಿಗೇ ಇಪ್ಪತ್ತು ಕೊಡಬೇಕು."

"ಇರಲಿ—ಒಪ್ಪಿಸು."

"ನನಗೆ"

ಶರ್ಮ ಮತ್ತೆ ಹತ್ತು ರೂಪಾಯಿ ತೆಗೆದು ಮುತ್ತಮ್ಮನ ಕೈಯಲ್ಲಿಟ್ಟ.

ಶರ್ಮ ಒಳಕ್ಕೆ ಬಂದವನೇ ಒಂದು ರೂಮಿಗೆ ಶ್ರೀನಾಥನನ್ನು ಕರೆದೊಯ್ದು

"ನಿನಗೆ ಯಾರು ಬೇಕಯ್ಯಾ"

ಎಂದು ಕೇಳಿದ.

ಶ್ರೀನಾಥ ಅನುಮಾನಿಸಿ

"ಈಗ ಬಂದವಳು"

ಬಿಲು.

ಶರ್ಮ ಹೊರಗೆ ಹೋದ ಸ್ವಲ್ಪ ಹೊತ್ತಿನಲ್ಲಿ ಕಮಲ ಒಂದು ಬೆಡ್ ಲ್ಯಾಂಪ್ ಹಿಡಿದು ಒಳಕ್ಕೆ ಬಂದಳು. ಮುತ್ತಮ್ಮ ಒಂದು ದಿಂಬು, ಹೊದಿಕೆ ಕೊಟ್ಟಳು. ಶ್ರೀನಾಥ ಕುಡಿಯುವುದಕ್ಕೆ ನೀರು ಬೇಕೆಂದ. ಮುತ್ತಮ್ಮ ಒಂದು ತಂಬಿಗೆ, ಒಂದು ಲೋಟಾ ತಂದಿತ್ತಳು.

ಶರ್ಮ ವೆಂಕಟಮ್ಮನನ್ನು ಕರೆದುಕೊಂಡು ಬೇರೊಂದು ರೂಮಿಗೆ ಹೋಗಿ ಬಾಗಿಲು ಹಾಕಿಕೊಂಡ.

ಕಮಲ ಕೈಯಲ್ಲಿದ್ದ ಬೆಡ್‌ಲ್ಯಾಂಪನ್ನು ಕಿಟಕಿಯಲ್ಲಿಟ್ಟು ದೀಪ ಚಿಕ್ಕದು ಮಾಡಿದಳು. ಶ್ರೀನಾಥ ಎದ್ದು ದೀಪವನ್ನು ದೊಡ್ಡದು ಮಾಡಿ ಅದರ ಬೆಳಕಿನಲ್ಲಿ ಕಮಲನನ್ನೊಮ್ಮೆ ನೋಡಿದ.

ಕಮಲ ನಿಜವಾಗಿ ಸುಂದರಿಯಾಗಿದ್ದಳು. ಅವಳ ಗುಂಗುರು ಮುಂಗುರುಳು ಹಣೆಯ ಅಕ್ಕಪಕ್ಕವನ್ನು ಮುಚ್ಚಿದ್ದವು. ಕಣ್ಣುಗಳಿಗಿಟ್ಟಿದ್ದ ಕಪ್ಪು ಅದರ ಕಾಂತಿಯನ್ನು ಮತ್ತಷ್ಟು ಹೆಚ್ಚಿಸಿದ್ದವು. ಮಾಟವಾದ ದೇಹ. ಕೆಂಪು ಮಿಶ್ರ ಬಿಳಿಯ ಬಣ್ಣ. ಅವಳು ಉಟ್ಟಿದ್ದ ಸಾಧಾರಣ ಮಿಲ್ಲಿನ ಸೀರೆಯ ಸಾಮಾನ್ಯತೆಯನ್ನು ಮರೆಸಿತ್ತು ಅವಳ ಸೌಂದರ್ಯ.

ಶ್ರೀನಾಥ ತನ್ನ ಎರಡು ಕೈಗಳಿಂದ ಕಮಲನ ಮುಖವನ್ನು ಹಿಡಿದ. ಕಮಲ ಶ್ರೀನಾಥನನ್ನು ನೋಡಿ

"ಎಷ್ಟು ಕೊಟ್ಟಿರಿ"

ಎಂದು ಕೇಳಿದಳು. ರಸಾಭಾಸವಾದ ಹಾಗಾಯಿತು. ಕೈಗಳನ್ನು ಹಿಂದಕ್ಕೆ ತೆಗೆದುಕೊಂಡು

"ನನ್ನ ಸ್ನೇಹಿತರು ಏನು ಕೊಟ್ಟಿದ್ದಾರೋ ಗೊತ್ತಿಲ್ಲ."

"ಅವರು ಕೊಟ್ಟುದರಲ್ಲಿ ನನ್ನ ಕೈಗೆ ಬರುವುದು ಅರ್ಧವೇ."

"ಹಾಗಂದರೆ."

"ಮುತ್ತಮ್ಮ ಅರ್ಧಹಣ ಕಿತ್ತುಕೊಂಡುಬಿಡುತ್ತಾಳೆ. ನೀವು ನನಗೆ ಏನಾದರೂ ಕೊಡಬೇಕು."

ಎಂದು ಶ್ರೀನಾಥನ ಜೇಬಿಗೆ ಕೈಹಾಕಿ ಹುಡುಕಿದಳು. ಹತ್ತು ರೂಪಾ

ಯಿಯ ಒಂದು ನೋಟು ಸಿಕ್ಕಿತು. ಅದನ್ನು ಶ್ರೀನಾಥನ ಮುಖದ ಮುಂದೆ ಹಿಡಿದು

"ತೆಗೆದುಕೊಳ್ಳಲೀ?"

"ತೆಗೆದುಕೋ."

"ನಿಮಗೆ ಕೋಪ ಬರುವ ಹಾಗಿದ್ದರೆ ಬೇಡ."

ಶ್ರೀನಾಥ ಅವಳ ಕೈಯಿಂದ ನೋಟನ್ನು ತೆಗೆದುಕೊಂಡು ಅವಳ ಕೈ ಹಿಡಿದು ಅದರಲ್ಲಿ ನೋಟನ್ನಿಟ್ಟು

"ತೆಗೆದುಕೋ—ನಾನೇ ಸಂತೋಷವಾಗಿ ಕೊಡುತ್ತೇನೆ."

ಕಮಲ ನಸುನಗುತ್ತಾ ನೋಟನ್ನು ತನ್ನ ಸೊಂಟಕ್ಕೆ ಸಿಕ್ಕಿಸಿಕೊಂಡಳು. ಶ್ರೀನಾಥನ ಕಣ್ಣಲ್ಲಿ ಹಾಸಿಗೆಯ ಕಡೆ ನೋಡುವುದನ್ನು ಕಂಡು ಕಮಲ ಹಾಸಿಗೆ ಹಾಸಿ ಅದರಮೇಲೆ ಕುಳಿತಳು. ಶ್ರೀನಾಥ ಹೋಗಿ ಅವಳ ಪಕ್ಕದಲ್ಲಿ ಕುಳಿತುಕೊಂಡ. ಅವನ ಕೈ ಅವಳ ಸೊಂಟ ಬಳಸಿತು.

"ಕಮಲಾ....ಕಮಲಾ.."

"ಏನು?"

"ನಿನ್ನ ಹೆಸರು ಎಷ್ಟು ಚೆನ್ನಾಗಿದೆ."

"ಈ ಹೆಸರು ಎಷ್ಟೋ ಜನ ಇಟ್ಟುಕೊಳ್ಳುತ್ತಾರೆ."

"ಆದರೂ ನಿನಗೇ ಒಪ್ಪು. ನೀನು ಕಮಲದ ಹಾಗೇ ಇದ್ದೀಯಾ"

"ನಿಮ್ಮ ಹೆಸರೇನು?"

"ಶ್ರೀನಾಥ."

"ವ್ಯಾಪಾರ ಮಾಡುತ್ತಿರುವಿರಾ?"

"ಇಲ್ಲ....ನಾನೊಬ್ಬ ಸೋಮಾರಿ."

"ಹಾಗಂದರೆ...."

"ಪುಸ್ತಕ ಬರೆಯುವುದೇ ನನ್ನ ವೃತ್ತಿ."

"ಅದರಲ್ಲಿ ಸಂಪಾದನೆಯಾಗುತ್ತದೆಯೇ?"

"ಏನೋ ಅಲ್ಪಸ್ವಲ್ಪ."

"ನಿಮಗೆ ಮದುವೆಯಾಗಿದೆಯೇ?"

"ಇಲ್ಲ....ನಿನಗೆ...."

“ ಆಗಿತ್ತು. ಈಗ ಗಂಡ ನನ್ನ ಜತೆಯಲಿಲ್ಲ.”

“ ಎಲ್ಲಿದ್ದಾನೆ.”

“ ಬೇರೆ ಮದುವೆಮಾಡಿಕೊಂಡು ಎಲ್ಲೋ ಇದ್ದಾನೆ.”

“ ನಿನಗಿಂತ ಹೆಂಡತಿಬೇಕೇ ? ಬೇರೆ ಮದುವೆಮಾಡಿಕೊಳ್ಳುವುದಕ್ಕೆ ಏತಕ್ಕೆ ಹೋದ.”

“ ಅದು ದೊಡ್ಡ ಕಥೆ. ಈಗ ಬೇಡ. ಇನ್ನು ಯಾವಾಗಲಾದರೂ ಹೇಳುತ್ತೇನೆ....ನನ್ನ ಕಥೆ ಕಟ್ಟಿಕೊಂಡು ನಿಮಗೆ ಆಗಬೇಕಾದುದೇನು ? ನಾಳೆ ಬೆಳಗಾದರೆ ನೀವು ಯಾರೋ ನಾನು ಯಾರೋ ?”

“ ನಮ್ಮ ಸ್ನೇಹ ಅಷ್ಟು ಬೇಗ ಕೊನೆಗಾಣುವುದೇ ?”

“ ಪ್ರಪಂಚ ಇರುವುದೇ ಹಾಗೆ.”

“ ಪ್ರಪಂಚದಲ್ಲಿ ಎಲ್ಲರೂ ಒಂದೇ ರೀತಿಯಲ್ಲಿರುವುದಿಲ್ಲ. ಐದು ಬೆರಳೂ ಒಂದೇ ಸಮನಾಗಿವೆಯೇ ?”

“ ಇತರರಿಗಿಂತ ನೀವು ಹೇಗೆ ಬೇರೆ ತಿಳಿಸಿ.”

“ ನಿನ್ನ ನೋಡಿ ಮನಸ್ಸಿಗೆ ಒಂದು ತರಹವಾಗಿದೆ. ನಾನು ನಿನ್ನ ನೋಡಿದುದು ಇದೇ ಮೊದಲು ಎಂದನಿಸುವುದಿಲ್ಲ.”

“ ಇನ್ನೇನನಿಸುತ್ತದೆ.”

“ ನೀನೂ ನಾನೂ ಬಹಳ ದಿವಸಗಳ ಸ್ನೇಹಿತರು ಎಂದನಿಸುತ್ತದೆ.”

“ ನೀವೆಲ್ಲಾ ಹೀಗೆಯೇ–ಬೇಕ್ಸ್ ಮಾತಾಡುವುದರಲ್ಲಿ ಗಟ್ಟಿಗರು.”

“ ಸತ್ಯವಾಗಿ ನಾನು ಬೇಕ್ಸ್ ಮಾತಾಡುತ್ತಿಲ್ಲ. ನಾನು ಹೆಂಗಸಿನ ಸಂಗ ಮಾಡಿರುವುದು ಬಹಳ ಸ್ವಲ್ಪ–ಮಾಡಿಯೇ ಇಲ್ಲವೆಂದರೂ ತಪ್ಪಾಗುವುದಿಲ್ಲ. ನಾನು ಯಾರಿಗೂ ಈ ಮಾತು ಇದುವರೆಗೆ ಹೇಳಿಲ್ಲ. ನನ್ನ ಮಾತು ನಂಬುವೆಯಾ ?”

“ ನಂಬುತ್ತೇನೆ. ನೀವು ಸುಳ್ಳು ಹೇಳುತ್ತಿಲ್ಲವೆನಿಸುತ್ತಿದೆ.”

ಕಮಲನ ಆಶ್ವಾಸನಕ್ಕೆ ಶ್ರೀನಾಥ ಹಿಗ್ಗಿಹೋದ. ತಾನೇ ಎದ್ದು ದೀಪ ಸಣ್ಣದು ಮಾಡಿ ಬಂದು ಮಲಗಿದ.

ಮಧ್ಯರಾತ್ರಿ ಸಮಯ. ಶ್ರೀನಾಥನಿಗೆ ನಿದ್ರೆ ಹತ್ತಲಿಲ್ಲ. ಕಮಲನೂ ಕಣ್ಣೆರೆದುಕೊಂಡೇ ಮಲಗಿದ್ದಳು. ತೊಟ್ಟಿಲಕೆಕ್ಕೆಯಲ್ಲಿ ಮಲಗಿದ್ದ ನಲ್ಲೆಯನ್ನಪ್ಪಿ

"ಈಗ ಹೇಳು ನಿನ್ನ ಗಂಡ ಏಕೆ ಜತೆಯಲಿಲ್ಲ."

"ಸಂತೋಷವಾಗಿರುವಾಗ ಆ ಹಾಳು ಮಾತೇಕೆ ಎತ್ತುವಿರಿ?"

"ಅವನನ್ನು ಕಂಡರೆ ನಿನಗೆ ಅಷ್ಟು ಕೋಪವೇ ?"

"ಅವನು ಮಾಡಿದ್ದನ್ನು ಕೇಳಿದರೆ ನೀವೇನನ್ನುವಿರೋ ?"

"ಏನು ಮಾಡಿದ."

ಕಮಲ ಎದ್ದು ಕುಳಿತಳು. ಗಂಡನ ನೆನಪಾಗಿ ಕಣ್ಣಿನಲ್ಲಿ ಒಂದೆರಡು ಹನಿ ಮಿಡಿಯಿತು.

"ನನಗೆ ಮದುವೆಯಾಯಿತು. ಗಂಡ, ನಾನು, ನನ್ನ ತಾಯಿ ಸಂಸಾರ ಮಾಡಿಕೊಂಡಿದ್ದೆವು. ಎಲೆಕ್ಟ್ರಿಕ್ ಫ್ಯಾಕ್ಟರಿಗೆ ಕೆಲಸಕ್ಕೆ ಹೋಗುತ್ತಿದ್ದ. ಭಾನುವಾರ ಬಂದಿತೆಂದರೆ ತಪ್ಪದೆ ನನ್ನನ್ನೂ ತಾಯಿಯನ್ನೂ ಸಿನೀಮಾಕ್ಕೆ ಕರೆದುಕೊಂಡು ಹೋಗುತ್ತಿದ್ದ. ನನ್ನ ತಾಯಿಯೂ ಅವನನ್ನು ತುಂಬ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದಳು. ಅವಳೇ ಅವನಿಗೆ ಎಣ್ಣೆಯೊತ್ತಿ ನೀರು ಹಾಕುತ್ತಿದ್ದಳು; ಊಟಕ್ಕೆ ಬಡಿಸುತ್ತಿದ್ದಳು; ಗಂಟೆ ಗಂಟೆ ಅವನೊಂದಿಗೆ ಕುಳಿತು ಹರಟೆ ಹೊಡೆಯುತ್ತಿದ್ದಳು. ನಾನು ಆಗ ಬಹಳ ಚಿಕ್ಕವಳು. ಯಾವದನ್ನೂ ತಪ್ಪು ತಿಳಿದುಕೊಳ್ಳುತ್ತಿರಲಿಲ್ಲ. ಹೀಗೆ ಎರಡುಮೂರು ವರ್ಷ ಸಂಸಾರ ಮಾಡಿದೆವು. ಒಂದು ದಿನ ನನ್ನ ತಾಯಿ ಅವನಿಗೆ ನೀರು ಹಾಕುತ್ತಾ ಮೈಕೈ ಮುಟ್ಟುತ್ತಿದ್ದುದನ್ನು ಕಂಡೆ—ಎದೆ ಕಳಕ್ಕೆಂದಿತು. ಅನುಮಾನ ಹುಟ್ಟಿತು. ಅವರಿಗೆ ಗೋಚರವಾಗದಂತೆ ಕಣ್ಣಿಟ್ಟೆ. ಇದು ಕಳೆದ ಮೂರು ನಾಲ್ಕು ದಿವಸವಾಗಿರಬಹುದು. ನಾನೂ ನನ್ನ ಗಂಡ ರೂಮಿನಲ್ಲಿ ಮಲಗು ತ್ತಿದ್ದೆವು—ನನ್ನ ತಾಯಿ ಹೊರಗಡೆ ತೊಟ್ಟಿಯಲ್ಲಿ ಮಲಗುತ್ತಿದ್ದಳು. ಮಲಗಿ ದೊಡನೆಯೇ ನನಗೆ ನಿದ್ರೆ ಹತ್ತುತ್ತಿತ್ತು. ಒಂದು ದಿನ ನಿದ್ರೆ ಬಂದಂತೆ ನಟಿ ಸುತ್ತಾ ಮಲಗಿದೆ. ನನ್ನ ಗಂಡ ಎದ್ದು ಕುಳಿತು ನನ್ನನ್ನೇ ಪರೀಕ್ಷಿಸಿ ನೋಡಿದ. ನನಗೆ ಚೆನ್ನಾಗಿ ನಿದ್ರೆ ಬಂದಿದೆಯೆಂದು ಧೈರ್ಯಮಾಡಿಕೊಂಡು ಎದ್ದು ಹೋದ. ಎಲ್ಲಿಗೆ ಹೋಗುತ್ತಾನೆಂದು ನಾನು ನೋಡುತ್ತ ಮಲಗಿದ್ದೆ. ಹೋಗಿ ನನ್ನ ತಾಯಿಯ ಮಗ್ಗುಲಲ್ಲಿ ಮಲಗಿಕೊಂಡ. ನಾನು ನೋಡಲಾರದೆ ಮುಖವನ್ನತ್ತ ತಿರುಗಿಸಿಕೊಂಡು ಅಳುತ್ತ ಮಲಗಿದೆ. ಬೆಳಗಾಗಲೆಂದು ಕಾದಿದ್ದೆ. ತಾಯಿಯನ್ನೂ ಅವನನ್ನೂ ಎದುರಿಗೆ ನಿಲ್ಲಿಸಿಕೊಂಡು ಪಂಚಾಯಿತಿ ಮಾಡಿದೆ.

ಅವನು ಕೋಪಮಾಡಿಕೊಂಡು, ನನಗೆ ನಾಲ್ಕು ಏಟು ಹಾಕಿ ಊಟಮಾಡದೆ ಫ್ಯಾಕ್ಟರಿಗೆ ಹೋದ. ಸಂಜೆ ಅವನು ಬರುತ್ತಲೂ ಮತ್ತೆ ಪಂಚಾಯಿತಿ ಯಾಯಿತು. ಪಂಚಾಯಿತಿ ಮುಗಿಯಲೇ ಇಲ್ಲ. ಅವನೂ ಒಂದು ತಿಂಗಳು ಹಾಗೂ ಹೀಗೂ ತಳ್ಳಿದ. ನನ್ನನ್ನು ಸಮಾಧಾನ ಮಾಡಲೆತ್ನಿಸಿದ. ನನಗೆ ಸಮಾಧಾನವಾಗಲೇ ಒಲ್ಲದು. ಕೊನೆಗೊಂದು ದಿನ ಮಾತಿಗೆ ಮಾತು ಬೆಳೆದು ವಿಪರೀತ ವ್ಯಾಜ್ಯವಾಯಿತು. ಕೋಪದಲ್ಲಿ ನಾನು ತಾಳೀ ಕಿತ್ತು ಅವನ ಮುಖದ ಮೇಲೆ ಎಸೆದೆ. ಅವನಿಗೂ ಕೋಪಬಂತು. ತನ್ನ ಬಟ್ಟೆ ಬರೆ ಕಟ್ಟಿಕೊಂಡು ಹೊರಟು ಹೋದ."

"ಪುನಃ ಬರಲೇ ಇಲ್ಲವೇ ?"

"ಕೆಲವು ತಿಂಗಳಾದ ಮೇಲೆ ಬೇರೆ ಮದುವೆಮಾಡಿಕೊಂಡು ನನಗೆ ಹೇಳಿ ಹೋಗುವುದಕ್ಕೆ ಬಂದಿದ್ದ. 'ಸಂತೋಷ–ಹೋಗು. ಎಲ್ಲಿಯಾದರೂ ಚೆನ್ನಾಗಿರು' ಎಂದು ಹೇಳಿ ಕಳಿಸಿದೆ."

"ಅಲ್ಲಿಂದ ಮುಂದೆ–ನಿಮ್ಮ ಪಾಡು."

"ನಮಗೆ ಜೀವನ ಸಾಗುವುದೇ ಕಷ್ಟವಾಯಿತು. ಈ ವೃತ್ತಿಗೆ ನಮ್ಮಮ್ಮ ನನ್ನನ್ನಿಳಿಸಿದಳು. ಮುತ್ತಮ್ಮನ ಪರಿಚಯವಾಯಿತು–ಇವತ್ತು ನಿಮ್ಮ ಸ್ನೇಹ ವಾಯಿತು."

ಕಮಲನ ಕರುಣಕಥೆ ಕೇಳಿ ಶ್ರೀನಾಥನ ಹೃದಯ ಮರುಗಿತು.

"ಕಮಲ, ನೀನೇನೂ ದೋಷಿಯಲ್ಲ. ಆದದ್ದು ಆಗಿಹೋಯಿತು. ಹಳೆಯ ಕಥೆ ಮರೆತುಬಿಡು."

ಎಂದು ಸಮಾಧಾನ ಹೇಳಿದ.

ಶ್ರೀನಾಥನ ತಲೆಯಲ್ಲಿ ನಾನಾ ವಿಚಾರಗಳು ಸುಳಿದಾಡತೊಡಗಿದವು. ಅವನು ಚಿಂತಿಸುತ್ತ ಕುಳಿತುದನ್ನು ಕಂಡು ಕಮಲ

"ಏನು ಯೋಚನೆ ?" ಎಂದು ಕೇಳಿದಳು.

"ಕಮಲಾ, ಈ ಮನೆಗೆ ನೀನು ಬಹಳ ಬರುತ್ತೀಯಾ ?"

"ನಾನಾಗಿ ನಾನೇ ಬರುವುದೇ ಇಲ್ಲ. ಮುತ್ತಮ್ಮ ಹೇಳಿ ಕಳಿಸಿದರೆ ಮಾತ್ರ ಬರುತ್ತೇನೆ."

"ಅದನ್ನೂ ನಿಲ್ಲಿಸುವುದಕ್ಕಾಗುವುದಿಲ್ಲವೇ ?"

" ಏಕೆ ?–ಇಲ್ಲಿ ನಾನು ಬರದಿದ್ದರೆ ನಿಮ್ಮನ್ನು ಕಾಣುವುದು ಹೇಗೆ ?"

" ನನ್ನ ಕಾಣುವ ಮಾತು ಹಾಗಿರಲಿ–ಇಲ್ಲಿ ಬರುವುದನ್ನು ನಿಲ್ಲಿಸುವುದಕ್ಕಾಗುವುದಿಲ್ಲವೇ ?"

" ಬರದಿದ್ದರೆ ನಮ್ಮ ರಥ ಸಾಗಬೇಕಲ್ಲಾ."

" ಆ ವಿಷಯ ಯೋಚನೆ ಮಾಡೋಣ. ನಾನು ನಿಮ್ಮ ಮನೆಗೆ ಬರಬಹುದೇ ?"

" ನನ್ನ ತಾಯಿ ಕೇಳಿ ನೋಡಬೇಕು."

" ತಾಯಿಯನ್ನೊಪ್ಪಿಸುವುದು ನಿನ್ನ ಭಾರ. ನಾನು ನಾಳೆ ಬರುತ್ತೇನೆ. ಅಲ್ಲಿ ಎಲ್ಲಾ ಮಾತಾಡೋಣ. ಈ ಮನೆಯಲ್ಲಿ ಮಾತಾಡುವುದಕ್ಕೆ ನನಗಿಷ್ಟವಿಲ್ಲ."

" ಹಾಗೇ ಆಗಲಿ. ಮನೆ ನಿಮಗೆ ಹೇಗೆ ಪತ್ತೆಯಾಗುತ್ತದೆ."

" ಗುರುತು ಹೇಳು. ಹುಡುಕಿಕೊಂಡು ಬರುತ್ತೇನೆ."

" ನನ್ನ ತಾಯಿ ಒಂದು ತರಹದವಳು. ಬಹಳ ಸಿಡುಕಿ. ಆದರೆ ಒಂದು ಗುಟ್ಟು ಹೇಳುತ್ತೇನೆ–ನಾನು ಹೇಳಿದೆ ಎಂದು ತಾಯಿಯ ಹತ್ತಿರ ನುಡಿದು ಬಿಡಬೇಡಿ."

" ಇಲ್ಲ ಹೇಳು."

" ನನ್ನ ತಾಯಿಗೆ ಅಸಾಧ್ಯ ಸಿನೀಮಾಹುಚ್ಚು."

" ನಾಳೆ ನಾನು ಮಧ್ಯಾಹ್ನ ಎರಡು ಗಂಟೆಗೇ ಬರುತ್ತೇನೆ. ಮಾತುಕತೆ ಮುಗಿಸಿಕೊಂಡು ಸಾಯಂಕಾಲ ಯಾವದಾದರೂ ಸಿನೀಮಾಗೆ ಹೋಗೋಣ."

" ಆಗಬಹುದು. ನೀವು ಬನ್ನಿ....ಆ ಮೇಲೆ ಏನಾಗುತ್ತದೋ ನೋಡೋಣ"

ಎಂದಳು. ಶ್ರೀನಾಥ ಮರೆಯದೆ ಅವಳ ಮನೆ ಗುರುತು ವಿವರವಾಗಿ ತಿಳಿದುಕೊಂಡ.

ರಾತ್ರಿ ಕಳೆದುಹೋದುದು ಶ್ರೀನಾಥನಿಗೆ ಅರಿವಾಗಲೇ ಇಲ್ಲ. ಬೆಳಗಾಯಿತೆಂದು ಶರ್ಮ ಕೂಗಿ ಎಬ್ಬಿಸಿದ.

ಎದ್ದು ಹೊರಗೆ ಹೋಗುವ ಮುನ್ನ ಶ್ರೀನಾಥ ಕಮಲನನ್ನಪ್ಪಿ

" ಮಧ್ಯಾಹ್ನ ಎರಡು ಗಂಟೆ ಜ್ಞಾಪಕವಿರಲಿ"

ಎಂದು ಹೇಳಿದ.

ಶರ್ಮನ ಹತ್ತಿರ ದುಡ್ಡು ತೆಗೆದುಕೊಂಡು ಮುತ್ತಮ್ಮ ನಾಗರಾಜನ ಹತ್ತಿರ ಕಾಫಿ ದೋಸೆ ತರಿಸಿದಳು. ನಾಗರಾಜ ಅಚ್ಚಮ್ಮನಿಗೆ ರೂಮಿಗೇ ತಿಂಡಿ ತೆಗೆದುಕೊಂಡು ಹೋಗಿ ಕೊಟ್ಟ.

ಎಲ್ಲರೂ ಉಪಾಹಾರ ಮುಗಿಸಿದಮೇಲೆ ಶ್ರೀನಾಥ ಶರ್ಮ ಹೊರ ಡಲಿದ್ದರು.

"ತಿರುಗಿ ಯಾವಾಗಪ್ಪಾ ಈ ಕಡೆ ಸವಾರಿ ಚಿತ್ತೈಸುವುದು–ಇನ್ನು ಆರು ತಿಂಗಳಿಗೋ ?"

ಎಂದು ಮುತ್ತಮ್ಮ ಶರ್ಮನನ್ನು ಕೇಳಿದಳು.

ಶರ್ಮ ನಸುನಗುತ್ತಾ

"ಇಲ್ಲಮ್ಮ. ನಾಳೆಯೋ ನಾಳಿದ್ದೋ ಬರುತ್ತೇನೆ. ನನ್ನ ಸ್ನೇಹಿತರು ಬರುತ್ತಿರುತ್ತಾರೆ. ಅವರ ಗುರುತು ಇಟ್ಟುಕೊಂಡಿರು. ಮುಂದಿನ ಸಲ ಬಂದಾಗ 'ನೀವು ಯಾರು ?' ಎಂದು ಕೇಳಬಡಬೇಡ."

"ನಾನು ಎಂದಿಗಾದರೂ ಹಾಗೆ ಮಾಡುತ್ತೇನೇನಪ್ಪಾ"

ಎಂದಳು.

ಅವರ ಜತೆ ನಾಗರಾಜನೂ ಹೊರಟ. ಸ್ವಲ್ಪ ದೂರ ಸಾಗಿದ ಮೇಲೆ ಶರ್ಮ ಒಂದು ರೂಪಾಯಿ ತೆಗೆದು ಅವನ ಕೈಯಲ್ಲಿ ಹಾಕಿ

"ಇವನದು ಬೇರೆ ನಮಗೆ ಋಣ"

ಎಂದ. ನಾಗರಾಜ ಹಣವನ್ನು ಕಿಸೆಗೆ ಹಾಕುತ್ತ

"ನೀವು ಕೊಡದೆ ಇನ್ನು ಯಾರು ಕೊಡಬೇಕಪ್ಪಾ. ಶರ್ಮಾವರೇ, ನನಗೊಂದು ಕೋಟು, ಪಂಟು ಹೊಲಿಸಿಕೊಡುವುದಿಲ್ಲವೇನು ?"

"ಆಗಲಿ. ಈ ತಿಂಗಳು ಕಳೆಯಲಿ, ಮುಂದಿನ ತಿಂಗಳು ನೋಡೋಣ"

ಎಂದ. ಶರ್ಮ ಶ್ರೀನಾಥರ ಅಪ್ಪಣೆ ಪಡೆದು ನಾಗರಾಜ ಮನೆಗೆ ಹಿಂದಿರುಗಿದ.

ದಾರಿಯಲ್ಲಿ ಬರುತ್ತ ಶರ್ಮ ಕೇಳಿದ

"ಕವಿಗಳ ಅನುಭವ ಏನಾಯಿತೋ ?"

"ಎಲ್ಲಾ ಸರಿಯಾಗಿ ಆಯಿತು. ಒಳ್ಳೆಯ ಹುಡುಗಿ."

"ನನ್ನ ಬಯ್ದುಕೊಳ್ಳುವುದಿಲ್ಲವಷ್ಟೇ ?"

"ಬಯ್ದುಕೊಳ್ಳುವುದೇಕೆ? ಶರ್ಮ, ಖರ್ಚೆಲ್ಲಾ ನಿನ್ನ ತಲೆಯ-ಮೇಲೇ ಬಿತ್ತಲ್ಲಯ್ಯಾ."

"ಚಿಂತೆಯಿಲ್ಲ. ನೀನು ಸದ್ಯ ಗೆಲುವಾಗಿದ್ದರೆ ಸಾಕು."

"ನಿನ್ನ ಆಫೀಸಿನ ಗತಿ ?"

"ಹೋಗಬೇಕಪ್ಪಾ. ನಾನು ಮನೆಗೆ ಹೋಗಿ ಬಟ್ಟೆ ಬದಲಾಯಿಸಿ ಕೊಂಡು ಆಫೀಸಿಗೆ ಹೋಗುತ್ತೇನೆ. ಬಸ್ ಸಿಕ್ಕಬಹುದು."

ಎಂದು ಹೇಳಿ ಬಸ್ ನಿಲ್ದಾಣದ ಕಡೆ ನಡೆದ. ಶ್ರೀನಾಥ ತನ್ನ ರೂಮು ಬಂದು ಸೇರಿದ.

ಶ್ರೀನಾಥನಿಗೆ ಹೊಸಜೀವ ಬಂದಂತಾಗಿತ್ತು. ಮನಸ್ಸಿನ ಜಂಜಡ ಪರಿಹಾರವಾಗಿತ್ತು. ರೂಮಿಗೆ ಬಂದವನೇ ನೀರುಕಾಸಿ ಸ್ನಾನಮಾಡಿ ಬಟ್ಟೆ ಬದಲಾಯಿಸಿಕೊಂಡು ಬಿಸಿ ಕಾಫಿ ಕುಡಿದು ನೀಲಕಂಠನನ್ನು ಹುಡುಕಿಕೊಂಡು ಆಸ್ಪತ್ರೆಯ ಕಡೆ ಹೊರಟ.

ನೀಲಕಂಠನ ಭೆಟ್ಟಿ 'ದೊರೆಯಬೇಕಾದರೆ ಶ್ರೀನಾಥ ಆಸ್ಪತ್ರೆಯಲ್ಲಿ' ಒಂದು ಗಂಟೆ ಕಾಯಬೇಕಾಯಿತು. ನೀಲಕಂಠ ಸ್ವಲ್ಪ ಪುರಸತ್ತು ಮಾಡಿ ಕೊಂಡು ಬಂದು ಒಂದು ಸಿಗರೇಟ್ ಹಚ್ಚಿಕೊಂಡು

"ಏನಾಗಿಬಿಟ್ಟಿದ್ದೆಯಯ್ಯಾ ಇಷ್ಟು ದಿವಸ. ಮನೆಯ ಕಡೆ ಬರಲಿಲ್ಲ."

"ಬಹಳ ಕೆಲಸವಿತ್ತು ಡಾಕ್ಟರ್-ಪುರಸತ್ತಾಗಲಿಲ್ಲ."

"ಏನು ಅರ್ಜೆಂಟಾಗಿ ಇಲ್ಲಿಗೆ ಬಂದಿರುವೆಯಲ್ಲಾ."

"ನಿನ್ನಿಂದ ಒಂದು ಕೆಲಸವಾಗಬೇಕಾಗಿತ್ತು."

"ಹೇಳು-ದಾಕ್ಷಿಣ್ಯವೇಕೆ ?"

"ನೂರು ರೂಪಾಯಿ ಬೇಕಾಗಿತ್ತು."

"ಅಷ್ಟು ದುಡ್ಡು ಹತ್ತಿರ ಇಲ್ಲವಲ್ಲಾ. ಮನೆಯಲ್ಲಿದೆ. ಮಧ್ಯಾಹ್ನ ಅಲ್ಲಿಗೆ ಊಟಕ್ಕೆ ಬಂದುಬಿಡು."

"ಇಲ್ಲ-ನನಗೆ ಬೇರೆ ಕೆಲಸವಿದೆ. ನೂರು ರೂಪಾಯಿ ಹೊಂದಿಸಿ ಕೊಳ್ಳದಿದ್ದರೆ ಮರ್ಯಾದೆ ಹೋಗುತ್ತದೆ."

"ಚೆಕ್ ಕೊಡಲೇನು ?"

"ಕೊಡು ಪರವಾಗಿಲ್ಲ."

ನೀಲಕಂಠ 'ಮೈಸೂರು ಬ್ಯಾಂಕಿ'ನ ಮೇಲೆ ನೂರು ರೂಪಾಯಿಗೆ ಒಂದು ಚೆಕ್ಕನ್ನು ಬರೆದು ಶ್ರೀನಾಥನ ಕೈಯಲ್ಲಿಟ್ಟು

"ಮತ್ತೆ ದರ್ಶನ."

"ನಾಳೆ ಸಂಜೆಗೆ ಮನೆಗೆ ಬರುತ್ತೇನೆ"

ಎಂದು ಹೇಳಿ ನೀಲಕಂಠನ ಅಪ್ಪಣೆ ಪಡೆದು ಹೊರಟ. ಅವನ ಮನಸ್ಸಿನ ದೊಡ್ಡ ಭಾರ ಇಳುಹಿದಂತಾಗಿತ್ತು.

ಬ್ಯಾಂಕ್ ತೆಗೆಯುವ ಹೊತ್ತಿಗೆ ಹೋಗಿ ಚೆಕ್ಕಿನ ಹಣ ತೆಗೆದು ಕೊಂಡು ರೂಮಿಗೆ ಬಂದು ಕುಳಿತ–ಗಂಟೆ ಹನ್ನೆರಡಕ್ಕೆ ಬಂದಿತ್ತು. 'ಒಂದು ಗಂಟೆಗೆ ಬರುತ್ತೇನೆ ಎಂದು ಹೇಳಬೇಕಾಗಿತ್ತು' ಎಂದು ಕೊಂಡ.

ಊಟದ ಶಾಸ್ತ್ರಮುಗಿಸಿ ಹಾಸಿಗೆಯ ಮೇಲೆ ಕಾಲುಚಾಚಿ ಮಲಗಿದ. ಚಿತ್ತಕ್ಕೆ ಸ್ವಾಸ್ಥ್ಯವಿಲ್ಲ–ನಿದ್ರೆ ಬರಲೊಲ್ಲದು. ಗಡಿಯಾರ ಕುಂಟುತ್ತ ಎಡವುತ್ತ ಹೋಗುತ್ತಿದ್ದಂತೆ ಭಾಸವಾಯಿತು.

ಒಂದು ಗಂಟೆಗೆ ಎದ್ದು ಕುಳಿತ. ರೂಮಿನಲ್ಲಿ ಕೂರಲು ಮನಸ್ಸಾಗಲಿಲ್ಲ. ಮುಖ ತೊಳೆದುಕೊಂಡು, ತಲೆ ಬಾಚಿಕೊಂಡು, ಬಟ್ಟೆ ಬದಲಾಯಿಸಿಕೊಂಡು ಸಾವಕಾಶವಾಗಿ ಕಬ್ಬನ್‌ಪೇಟೆಯ ಕಡೆ ಹೊರಟ.

ಅಲ್ಲಲ್ಲಿಯೇ ಸುತ್ತಾಡಿಕೊಂಡು ವೇಳೆಯನ್ನು ಪ್ರಯತ್ನಪೂರ್ವಕವಾಗಿ ಖರ್ಚು ಮಾಡಿಕೊಂಡು ಕಮಲ ಹೇಳಿದ ಗುರುತಿನ ಚೌಕದ ಬಳಿಗೆ ಬರುವ ಹೊತ್ತಿಗೆ ಒಂದೂಮುಕ್ಕಾಲು ಗಂಟೆಯಾಗಿತ್ತು.

ಶ್ರೀನಾಥನಿಗೆ ತಕ್ಷಣ ಏನೋ ಹೊಳೆಯಿತು.

ಅಲ್ಲಿಯೇ ಇದ್ದ ಮಾರ್ಕೆಟ್ಟಿಗೆ ಹೋಗಿ ನಾಲ್ಕು ಕುಚ್ಚುಮಲ್ಲಿಗೆ ಹೂ ಕಟ್ಟಿಸಿ, ಎರಡು ಬಗೆ ಹಣ್ಣು ಕೊಂಡುಕೊಂಡ. ಎದುರಿಗಿದ್ದ ಹೊಟೇಲಿಗೆ ಹೋಗಿ ಒಂದು ಸೇರು ಖಾರದ ತಿಂಡಿ, ಒಂದು ಸೇರು ಸಿಹಿ ತಿಂಡಿ ಕಟ್ಟಿಸಿದ. ಹೂವು, ಹಣ್ಣು, ತಿಂಡಿಯನ್ನು ತನ್ನ ಕರವಸ್ತ್ರಗಳಲ್ಲಿ ಕಟ್ಟಿಕೊಂಡು ಕಮಲನ ಮನೆ ಹುಡುಕುವುದಕ್ಕಾರಂಭಿಸಿದ.

ಅದೇ ಚೌಕ–ಅವಳು ಹೇಳಿದ್ದ ಗುರುತು ಅದೇ–ಮಾರ್ಕೆಟ್ಟಿನ ಬಲಕ್ಕೆ

ಹೊರಳಿದರೆ ಮೊದಲನೆಯ ಸಂದಿ. ಅದರ ಕೊನೆಯ ಮನೆ–ಎದುರಿಗೆ ಬೀದಿ ನಲ್ಲಿ ಇದೆ–ಮನೆಗೆ ಎರಡು ಕಡೆ ಬಾಗಿಲು. ಒಂದು ಕಡೆ ಎಕ್ಸ್ಪ್ಯಾಂಡೆಡ್ ಮೆಟಲ್ ಹಾಕಿದೆ. ದೊಡ್ಡ ಬಾಗಿಲಿಗೆ ಅರಶಿನ ಕುಂಕುಮ ಬಳಿದಿದೆ. ಗುರುತನ್ನ ನುಸರಿಸಿ ಕಮಲನ ಮನೆಯ ಬಳಿ ಬಂದು ನಿಂತ. ಬಾಗಿಲು ಹಾಕಿತ್ತು. ಶ್ರೀನಾಥನ ಎದೆ ಡವಡವನೆ ಹೊಡೆದುಕೊಳ್ಳಲಾರಂಭಿಸಿತು. ನಾಲ್ಕಾರು ನಾರಿ ಅತ್ತಿತ್ತ ನೋಡಿದ. ಬೀದಿಯಲ್ಲಿ ಯಾರೂ ಸುಳಿದಾಡುತ್ತಿರಲಿಲ್ಲ. ಎಕ್ಸ್ಪ್ಯಾಂಡೆಡ್ ಮೆಟಲ್ ಹಾಕಿದ ಕಡೆ ಹೋಗಿ ಒಳಗೆ ನೋಡಿದ. ಒಳಗೆ ಓಡಾಡುತ್ತಿದ್ದ ಕಮಲ ಅವನ ಮುಖ ನೋಡಿ ಬಂದು ಬಾಗಿಲು ತೆಗೆದಳು.

ಶ್ರೀನಾಥ ತೊಟ್ಟಿಗೆ ಹೋಗಿ ನಿಂತ. ಕಮಲ ಒಂದು ಚಾಪೆ ಹಾಸಿ "ಕುಳಿತುಕೊಳ್ಳಿ" ಎಂದಳು.

ಶ್ರೀನಾಥ ಕೈಯಲ್ಲಿದ್ದ ಪೊಟ್ಟಣಗಳನ್ನು ಕಮಲನ ಕೈಯಲ್ಲಿಟ್ಟು ಕುಳಿತು ಕೊಂಡ. ಕಮಲ ಅವುಗಳನ್ನು ಒಳಗಿಟ್ಟು ಕರವಸ್ತ್ರಗಳನ್ನು ಒಂದಕ್ಕೆ ತಂದುಕೊಟ್ಟು

"ಅಮ್ಮ–ಈಗಲೇ ಬರುತ್ತಾಳೆ. ಪಕ್ಕದ ಮನೆಗೆ ಹೋಗಿದ್ದಾಳೆ."

"ಎಲ್ಲಾ ಹೇಳಿದೆಯಾ ?"

"ಹೇಳಿದೆ."

"ಏನಂದಳು ?"

"ಬರಲಿ ಎಂದಳು."

ಕಮಲ ಕಾಫಿ ಒಲೆ ಹೊತ್ತಿಸುವುದಕ್ಕೆ ಒಳಕ್ಕೆ ಹೋದಳು. ಶ್ರೀನಾಥ "ಏನು ಮಾಡುತ್ತಿದ್ದೀ ಕಮಲ" ಎಂದು ಕೇಳಿದ.

"ಕಾಫಿ ಮಾಡುತ್ತಿದ್ದೇನೆ."

"ಇರಲಿ ಬಾ. ಆಮೇಲೆ ಮಾಡಿದರಾಗದೆ ?"

"ಡಿಕಾಕ್ಷನ್ ಹಾಕಿದ್ದೇನೆ. ಬಿಸಿ ಮಾಡುವುದು ಬಾಕಿ"

ಶ್ರೀನಾಥ ಕುಳಿತಲ್ಲಿಂದಲೇ ಮನೆಯನ್ನೀಕ್ಷಿಸಿದ. ಮನೆ ಚಿಕ್ಕದಾದರೂ ಬಹಳ ಶುಭ್ರವಾಗಿತ್ತು. ಪಾತ್ರೆ ಪದಾರ್ಥಗಳು ಓರಣವಾಗಿಡಲ್ಪಟ್ಟಿದ್ದವು. ಗೋಡೆಗಳ ಮೇಲೆಲ್ಲಾ ದೇವದೇವತೆಗಳ ಪಟಗಳು. ಅವುಗಳನ್ನು ನೋಡುತ್ತ ಶ್ರೀನಾಥನ ಮುಖದಲ್ಲಿ ನಗೆತೇಲಿತು. ಹೊರಗೆ ಬಂದ ಕಮಲ ಕೇಳಿದಳು

"ಏತಕ್ಕೋ ನಗುತ್ತಿರುವಿರಿ ?"

"ದೇವರುಗಳ ಜಾತ್ರೆಯಾಗಿದೆಯಲ್ಲಾ !"

"ನನ್ನ ತಾಯಿ ತುಂಬ ದೈವಭಕ್ತಳು. ಅವಳ ಶುಕ್ರವಾರದ ಪೂಜೆಯ ವೈಭವ ನೀವು ನೋಡಬೇಕು."

"ಇನ್ನುಮೇಲೆ ನೋಡುತ್ತೇನಲ್ಲಾ"

ಎಂದು ನಕ್ಕ ; ಕಮಲನೂ ನಕ್ಕಳು.

ಕಮಲನ ತಾಯಿ ಭಾಗ್ಯಮ್ಮ ಕೈಯಲ್ಲಿ ಒಂದು ಸಣ್ಣ ಬುಟ್ಟಿ ಹಿಡಿದು ಒಳಕ್ಕೆ ಬಂದಳು. ಒಂದೇ ನೋಟದಲ್ಲಿ ಶ್ರೀನಾಥನನ್ನು ಆಪಾದಮಸ್ತಕ ನೋಡಿ ಒಳಗೆ ಹೋಗಿ ಬುಟ್ಟಿಯನ್ನಿಟ್ಟಳು. ಕಮಲ ತಾಯಿಗೆ

"ನಾನು ಹೇಳಿದೆನಲ್ಲಾ–ಅವರೇ–ಬಂದಿದ್ದಾರೆ"

ಎಂದಳು. ಭಾಗ್ಯಮ್ಮ ಶ್ರೀನಾಥನೆದುರು ಗೋಡೆ ಒರಗಿಕೊಂಡು ಕುಳಿತಳು. ಕಮಲ ತಾಯಿಗೂ ಶ್ರೀನಾಥನಿಗೂ ತಿಂಡಿ ಕಾಫಿ ತಂದಿಟ್ಟಳು.

ಭಾಗ್ಯಮ್ಮ ಕೈಗೆ ದಪ್ ರೋಟ್ ತೆಗೆದುಕೊಂಡು

"ತೆಗೆದುಕೊಳ್ಳಿಯಪ್ಪಾ"

ಎಂದಳು. ಶ್ರೀನಾಥ ತಿಂಡಿಯನ್ನು ಕುರುಕುವುದಕ್ಕಾರಂಭಿಸಿದ. ಕಮಲನೂ ತಿಂಡಿ ಕಾಫಿ ತೆಗೆದುಕೊಂಡು ಬಂದು ತಾಯಿಯ ಸಮೀಪದಲ್ಲಿ ಕುಳಿತಳು.

ಭಾಗ್ಯಮ್ಮ ಶ್ರೀನಾಥನಿಗೆ

"ಮಗೂ–ನಿಮ್ಮನ್ನು ಬಹಳ ಹೊಗಳಿದಳಪ್ಪಾ." ಎಂದಳು.

"ಹೊಗಳಿಸಿಕೊಳ್ಳುವಂಥದೇನು ನಾನು ಮಾಡಿದೆ."

"ತುಂಬ ಒಳ್ಳೆಯವರು ಎಂದು ಹೇಳಿದಳು."

"ಅದು ಮುಂದೆ ಗೊತ್ತಾಗಬೇಕು."

"ಏನೋ ಹೇಳಬೇಕೆಂದಿರುವಿರಿ ಎಂದು ಮಗು ತಿಳಿಸಿದಳು."

"ಹೇಳಬೇಕಾದದ್ದಿದೆ. ಸ್ಪಷ್ಟವಾಗಿ ಮಾತಾಡಿದರೆ ನೀವು ಕೋಪಮಾಡಿಕೊಳ್ಳುವುದಿಲ್ಲವಷ್ಟೇ."

"ಕೋಪವೇತಕ್ಕೆ–ಹೇಳಿ."

"ಕಮಲ ಮುತ್ತಮ್ಮನ ಮನೆಗೆ ಹೋಗದಿರುವುದಕ್ಕಾಗುವುದಿಲ್ಲವೇ ?"

" ಏಕೆ ?"

" ಏಕೆಯೆಂದು ಹೇಳಲಿ. ಎಳೆಯ ಮುಡುಗಿ. ಈಗಲೇ ದೇಹ ಕೆಡಿಸಿಕೊಂಡರೆ ನಾಳೆ ಅವಳ ಗತಿಯೇನು ?"

" ನಮ್ಮ ಪಥ ಸಾಗುವುದು ಹೇಗೆ? ನನಗೂ ವಯಸ್ಸಾಯಿತು. ದುಡಿದು ಹಾಕುವುದಕ್ಕೆ ಸಾಧ್ಯವಿಲ್ಲ. ಹೊಟ್ಟೆ ಕಟ್ಟಿ, ಬಟ್ಟೆ ಕಟ್ಟಿ ಕಮಲಸಿಗೆ ಮದುವೆ ಮಾಡಿದೆ. ಆ ಗಂಡ ಅನಿಸಿಕೊಂಡ ಹತಭಾಗ್ಯ ಬೇರೆ ಮದುವೆ ಮಾಡಿಕೊಂಡ."

" ನಿಮ್ಮ ಸಂಸಾರದ ಜವಾಬ್ದಾರಿ ನಾನು ಹೊತ್ತುಕೊಂಡರೆ ಆಗ ಕಮಲ ನಿರಾಂತಕವಾಗಿರಬಹುದಲ್ಲ."

" ನೀವು ಹೊರುವಿರಾ ?"

" ನಿಮ್ಮ ಮನೆಯ ಖರ್ಚಿಗೆ ತಿಂಗಳಿಗೆಷ್ಟು ಬೇಕು ?"

" ಅರವತ್ತೈವತ್ತು ರೂಪಾಯಿ ಬೇಕಾಗಬಹುದು. ಇರುವವರು ನಾವಿಬ್ಬರೇ. ಮನೆ ಬಾಡಿಗೆಯೂ ಹೆಚ್ಚಿಲ್ಲ—ಎಂಟೇ ರೂಪಾಯಿ."

" ನಾನು ತಿಂಗಳಿಗೆ ಎಪ್ಪತ್ತೈದು ರೂಪಾಯಿ ಕೊಟ್ಟುಕೊಂಡು ಹೋಗುತ್ತೇನೆ. ಹೆಚ್ಚು ಖರ್ಚು ಏನಾದರೂ ಬಂದರೆ ನೋಡಿಕೊಳ್ಳೋಣ. ಇದು ನನ್ನ ಮನೆ ಎನ್ನುವ ಅಭಿಮಾನ ಬಂದರೆ ನನಗೂ ಎಲ್ಲದಕ್ಕೂ ಉತ್ಸಾಹವಿರುತ್ತದೆ."

" ಅಭಿಮಾನ ಇಟ್ಟುಕೊಳ್ಳಬೇಕು."

" ನಾನು ಏಕಾಂಗಿ. ನನಗೆ ನೀನೇ ಎನ್ನುವವರು ದಿಕ್ಕಿಲ್ಲ. ನನ್ನ ಸರ್ವಸ್ವ ಕಮಲ ಆಗಬೇಕು. ಲೋಕದಲ್ಲಿ ನಾನೂ ಅಲ್ಪ ಸ್ವಲ್ಪ ಕೀರ್ತಿ ಸಂಪಾದಿಸಿಕೊಂಡಿದ್ದೇನೆ—ನೀವು ಅದನ್ನು ಕಾಪಾಡಿಕೊಂಡು ಹೋಗಬೇಕು."

" ನಾವು ನೀಯತ್ತು ಬಿಟ್ಟು ಹೋಗುವವರಲ್ಲಪ್ಪಾ."

ಶ್ರೀನಾಥ ಕಿಸೆಯಿಂದ ಹಣ ತೆಗೆದು ಎಪ್ಪತ್ತೈದು ರೂಪಾಯಿಗಳ ನೋಟುಗಳನ್ನೆಣಿಸಿ ಭಾಗ್ಯಮ್ಮನ ಕೈಯಲ್ಲಿಟ್ಟು

" ನೋಡೀಯಮ್ಮ—ನಾನು ಶ್ರೀಮಂತನಲ್ಲ. ನಾನು ಅವಲಂಬಿಸಿರುವ ವೃತ್ತಿ ವ್ಯಾಪಾರವಲ್ಲ ಸಾಹಿತ್ಯ. ಇದರಿಂದ ನಾನು ನಾಳೆಯಾದರೂ ಶ್ರೀಮಂತನಾಗಬಹುದೆಂಬ ಧೈರ್ಯವಿಲ್ಲ. ಆದರೆ ನಿಮ್ಮ ಸಂಸಾರ ಮರ್ಯಾದೆಯಾಗಿ ನಡೆದುಕೊಂಡು ಹೋಗುವಷ್ಟು ಮಾಡಬಲ್ಲೆ. ನಾನು ದುಡಿದು ಸಂಪಾದಿಸ

ಬೇಕು. ಹೆಚ್ಚು ದುಡಿದಷ್ಟು ಹೆಚ್ಚು ಸಂಪಾದಿಸಬಲ್ಲೆ. ನನ್ನ ಮನಸ್ಸಿಗೆ ಕಿರುಕುಳವಾಗದಂತೆ ನೋಡಿಕೊಳ್ಳುವುದು ನಿಮ್ಮ ಭಾರ. ನನ್ನ ಸ್ವಂತ ಖರ್ಚಾದರೂ ಬಹಳ ಸ್ವಲ್ಪ. ದುಡಿದದ್ದನ್ನು ತಂದು ನಿಮಗೇ ಕೊಡುತ್ತೇನೆ. ಅನುಕೂಲವಾದಾಗ ಕಮಲ ಒಂದೆರಡು ಒಡವೆ ವಸ್ತ್ರ ಮಾಡಿಕೊಳ್ಳಲಿ."

"ನೋಡೀಪ್ಪ. ತಿಳಿದವರು ನಿಮಗೆ ಹೇಳಬೇಕಾದದ್ದೇನೂ ಇಲ್ಲ. ನಾವೂ ಚೆನ್ನಾಗಿದ್ದವರು. ಕಷ್ಟಕ್ಕೆ ಸಿಕ್ಕಿ ಹೀಗಾಗಿದ್ದೇವೆ. ಮಗೂ ಮೈಮೇಲೆ ಒಂದು ಗುಂಜಿ ತೂಕ ಬಂಗಾರ ಇಲ್ಲದ ಹಾಗಾಯಿತು. ಉಟ್ಟುಕೊಳ್ಳುವುದಕ್ಕೆ ಅವಳಿಗೆ ಸರಿಯಾಗಿ ಒಂದು ಸೀರೆಯಿಲ್ಲ."

"ಮುಂದಿನ ತಿಂಗಳು ನನಗೆ ಸ್ವಲ್ಪ ಹೆಚ್ಚು ಹಣ ಬರುವುದಿದೆ. ಅದರಲ್ಲಿ ಏನಾದರೂ ತೆಗೆದುಕೊಳ್ಳೋಣ."

ಎಂದು ಹೇಳಿದ.

ಭಾಗ್ಯಮ್ಮ ಹೊರಡಲು ಎದ್ದು ನಿಂತು

"ನನಗೆ ಸ್ವಲ್ಪ ಕೆಲಸವಿದೆ. ಹೊರಗೆ ಹೋಗಿ ಬರುತ್ತೇನೆ."

ಎಂದಳು. ಕಮಲ ತಾಯಿಗೆ

"ಅಮ್ಮಾ....ಎಷ್ಟು ಹೊತ್ತಿಗೆ ಬರುತ್ತೀ ?" ಎಂದು ಕೇಳಿದಳು.

"ಏಕೆ ?"

"ಸಾಯಂಕಾಲ ಸಿನೀಮಾಕ್ಕೆ ಹೋಗೋಣ ಎಂದು ಹೇಳುತ್ತಿದ್ದರು."

"ಬೇಗ ಬರುತ್ತೇನೆ. ಐದು, ಐದೂವರೆ ಒಳಗೆ ಮನೆಯಲ್ಲಿರುತ್ತೇನೆ"

ಎಂದು ಹೇಳಿ ಹೊರಟಳು. ಕಮಲ ತಾಯಿಯ ಹಿಂದೆ ಹೋಗಿ ಬಾಗಿಲು ಭದ್ರಪಡಿಸಿ ಬಂದಳು.

ಕಮಲನ ಕೈಹಿಡಿದು ಶ್ರೀನಾಥ

"ಹೂವು ಮುಡಿದುಕೊಳ್ಳಬೇಕಾಗಿತ್ತು."

"ಈಗೇಕೆ ? ನಲುಗಿ ಹೋಗುತ್ತದೆ. ಸಾಯಂಕಾಲ ಹೊರಗೆ ಹೋಗುತ್ತೇವಲ್ಲ."

"ಸ್ವಲ್ಪ ತೆಗೆದುಕೊಂಡು ಬಾ. ನಾನು ಮುಡಿಸುತ್ತೇನೆ."

ಕಮಲ ಹೂವು ತಂದು ಶ್ರೀನಾಥನ ಕೈಗಿತ್ತಳು. ಶ್ರೀನಾಥ ಅಕ್ಕರೆಯಿಂದ ಕಮಲನ ಮುಡಿಗೆ ಹೂವು ಮುಡಿಸಿದ.

"ಒಳಕ್ಕೆ ಬನ್ನಿ"

ಎಂದು ಕಮಲಿ ಶ್ರೀನಾಥನನ್ನು ರೂಮಿಗೆ ಕರೆದೊಯ್ದಳು.

ಕಮಲಿನ ರೂಮೂ ಒಂದು ಭಜನೆ ಮನೆಯಾಗಿತ್ತು. ಅಲ್ಲಿಯೂ ದೇವ ದೇವತೆಗಳ ಚಿತ್ರ. ಚಾಪೆ, ಹಾಸಿಗೆಯಲ್ಲದೆ ಬೇರೆ ಯಾವ ಪರಿಕರವೂ ಇರಲಿಲ್ಲ. ಗೂಟದ ಮೇಲೆ ಕಮಲಿನ ಎರಡು ಒಗೆದ ಸೀರೆ, ಕುಪ್ಪಸ ಮಡಿಸಿತಲ್ಪಟ್ಟಿದ್ದವು.

"ನಿನ್ನ ತಾಯಿಗೆ ಸಂತೋಷವಾಯಿತೇ ?" ಎಂದು ಕೇಳಿದ.

"ಅವಳ ಮನಸ್ಸನ್ನು ತಿಳಿಯುವುದು ಸ್ವಲ್ಪ ಕಷ್ಟ. ನೀವು ಒಂದು ಒಳ್ಳೆಯ ಕೆಲಸ ಮಾಡಿದಿರಿ."

"ಏನದು ?"

"ಅವಳ ಕೈಗೆ ಇನಸ್ಟು ದುಡ್ಡು ಕೊಟ್ಟಿದ್ದು."

"ಏಕೆ ಹಾಗನ್ನುವೆ. ಕೊಡಬೇಕಾದುದು ನನ್ನ ಧರ್ಮ."

"ಅವಳು ಧನಪಿಶಾಚಿಯ ಒಕ್ಕಲು."

"ಹೋಗಲಿ ಬಿಡು. ಹಾಗೇಕನ್ನುವೆ. ಕಷ್ಟಪಟ್ಟಿರುವ ಜೀವ. ಸ್ವಲ್ಪ ಆಸೆಯಿರುವುದು ಸ್ವಾಭಾವಿಕ."

"ಕಷ್ಟ ! ಯಾರಿಗೆ ಕಷ್ಟ ! ಅವಳಿಗೇ ? ಅವಳೆಂದಿಗೂ ಕಷ್ಟಪಟ್ಟವಳೇ ಅಲ್ಲ. ನನ್ನ ರಕ್ತ ಹೀರಿಯಾದರೂ ಸುಖವಾಗಿರುತ್ತಾಳೆ."

"ಕಮಲಿ, ಅವಳು ಎಷ್ಟಾದರೂ ನಿನ್ನ ತಾಯಿ."

"ತಾಯಿ ಮಗಳ ಸಂಬಂಧ ಎಂದೋ ಕಡಿದು ಹೋಯಿತು. ನನಗೂ ದಿಕ್ಕಿಲ್ಲ—ಅವಳನ್ನೇ ಆಶ್ರಯಿಸಿಕೊಂಡಿದ್ದೇನೆ."

"ನಿಮ್ಮ ತಾಯಿ ನೋಡಿದರೆ ಎಷ್ಟು ಒಳ್ಳೆಯವಳ ಹಾಗೆ ಕಾಣುತ್ತಾಳೆ."

"ವಿಷನಾಗರವೂ ನೋಡುವುದಕ್ಕೆ ಬಹಳ ಚೆನ್ನಾಗಿರುತ್ತದೆ."

"ತಾಯಿಯ ವಿಚಾರದಲ್ಲಿ ನಿನ್ನ ಮನಸ್ಸು ಕಲ್ಲಾಗಿದೆ."

"ಪಾಷಾಣವಾಗಿದೆ."

"ಹೋಗಲಿ ಬಿಡು. ಆ ಮಾತು ಬೇಡ. ಮುಂದಿನ ತಿಂಗಳು ನಿನಗೇನು ತರಲಿ ಹೇಳು."

"ನನಗೇನು ತರಬೇಕಾದರೂ ಮೊದಲು ಅವಳಿಗೆ ತಂದು ಮೋಚಿಸ ಬೇಕು."

"ಹಾಗೇ ಆಗಲಿ. ಇಬ್ಬರಿಗೂ ಸೀರೆ ತರೋಣ."

ರೂಮಿನ ಸುತ್ತ ಕಣ್ಣು ಹೊರಳಿಸಿ ಶ್ರೀನಾಥ ಯೋಚಿಸುತ್ತಿರುವುದನ್ನು ನೋಡಿ ಕಮಲಾ ಕೇಳಿದಳು

"ಏನು ಯೋಚನೆಮಾಡುತ್ತಿರುವಿರಿ ?"

"ಮನೆಗೆ ಕೆಲವು ಸಾಮಾನುಗಳು ಬೇಕು. ನಮ್ಮ ರೂಮಿಗೆ ಒಂದು ಮಂಚ. ಒಂದು ಮೇಜು, ಎರಡು ಕುರ್ಚಿ."

"ಅವು ಸಿಧಾನವಾಗಿ ಆಗಲಿ–ಈಗಲೇ ಏನವಸರ "

"ನೀನು ನನ್ನ ರಾಣಿ ಕಮಲ. ನಿನ್ನನ್ನು ರಾಣಿಯ ಹಾಗೆ ಇಡಬೇಕೆಂದು ನನ್ನ ಇಚ್ಛೆ. ದೇವರು ಅನುಕೂಲಮಾಡಿಕೊಡಬೇಕು."

"ಮನಸ್ಸಿದ್ದಲ್ಲಿ ಮಾರ್ಗವಿದ್ದೇ ಇರುತ್ತದೆ."

"ಮನಸ್ಸಿದೆ–ಮಾರ್ಗ ತಿಳಿಯಲೊಲ್ಲದು. ಕಮಲ, ನಿನ್ನ ಒಂದು ಪ್ರಶ್ನೆಕೇಳಲೇ ? ನೀನು ಅಸಮಾಧಾನಪಟ್ಟುಕೊಳ್ಳಬಾರದು."

"ಇಲ್ಲ ಕೇಳಿ."

"ಯಾವ ಜನ್ಮದ ಋಣಾನುಬಂಧವೋ ನನಗೂ ನಿನಗೂ ಪರಿಚಯವಾಯಿತು. ನನ್ನ ಮನಸ್ಸು ಏನೋ ಬೇಕೆಂದು ಹಾತೊರೆಯುತ್ತಿತ್ತು. ಏನು ಎಂದು ಅದಕ್ಕೇ ಗೊತ್ತಿರಲಿಲ್ಲ. ನಿನ್ನ ಕಂಡಕೂಡಲೆ 'ಇದೇ ಅದು' ಎನಿಸಿತು. ಈ ನಮ್ಮ ಸಂಬಂಧ ಚಿರಕಾಲ ಉಳಿಯುವಂತೆ ನಾವಿಬ್ಬರೂ ಪ್ರಯತ್ನಿಸ ಬೇಕು."

"ಆಗಬಹುದು."

"ನಮ್ಮಿಬ್ಬರ ಮಧ್ಯೆ ಬೇರೆ ಯಾರೂ ಬರುವುದಿಲ್ಲವೇ ?"

"ಏತಕ್ಕೆ ಬರಬೇಕು ?"

"ನಿನ್ನ ತಾಯಿ ಬಲವಂತಕ್ಕೆ."

"ಅಂಥ ಮಾತು ಅವಳು ಹೇಳಿದರೆ ನಾನು ಕೇಳುವುದಿಲ್ಲ."

"ಇದು ಸತ್ಯವೇ ?"

"ಸತ್ಯ."

" ನಂಬಲೇ ?"

" ನಂಬಿ – ಏಕೆ ಹೀಗೆ ಅನುಮಾನಪಡುವಿರಿ !"

" ನನ್ನ ಸ್ವಭಾವ ಅಂಥಹದು. ಯಾರನ್ನಾದರೂ ನಂಬಿದರೆ ಪೂರ್ತಿಯಾಗಿ ನಂಬುತ್ತೇನೆ. ಯಾರ ಮೇಲಾದರೂ ವಿಶ್ವಾಸವಿಟ್ಟರೆ ಪೂರ್ತಿ ವಿಶ್ವಾಸವಿಡುತ್ತೇನೆ. ಅರ್ಧಮರ್ಧ ಭಾವನೆ – ಒಳಗೊಂದು ಹೊರಗೊಂದು ನನಗೆ ಸಾಧ್ಯವಿಲ್ಲ. ನೀನು ನನಗೆ ಎಂದೆಂದಿಗೂ ದ್ರೋಹಮಾಡುವುದಿಲ್ಲವೇ ?"

" ಮಾಡುವುದಿಲ್ಲವೆಂದು ಹೇಳಲಿಲ್ಲವೇ ?"

ಕಮಲನ ವಚನ ಶ್ರೀನಾಥನ ಹೃದಯದ ತಾಪವನ್ನು ಕಡಿಮೆಮಾಡಿತು.

ಶ್ರೀನಾಥ ಸ್ವಲ್ಪಕಾಲ ಕಮಲನ ಸುಖಸಂಗದಲ್ಲಿ ಮೈಮರೆತುಬಿಟ್ಟ. ತಾಯಿ ಬಂದು ಹೊರಬಾಗಿಲು ಬಡಿದಾಗಲೇ ಎಚ್ಚರ.

ಭಾಗ್ಯಮ್ಮ ಮಗಳನ್ನು ನೋಡಿ

" ಐದು ಗಂಟೆ ಆಗಿ ಹೋಯಿತಲ್ಲೇ" ಎಂದಳು.

ಕಮಲಾ ಬಂದು ಶ್ರೀನಾಥನಿಗೆ

" ಮುಖ ತೊಳೆದುಕೊಳ್ಳುತ್ತೀರಾ. ನಾನು ತಲೆ ಬಾಚಿಕೊಂಡು ಬೇರೆ ಸೀರೆ ಉಟ್ಟುಕೊಳ್ಳುತ್ತೇನೆ"

ಎಂದಳು. ಶ್ರೀನಾಥ ಮುಖ ತೊಳೆದುಕೊಂಡು ಕಮಲನ ಬಾಚಣಿಗೆಯಿಂದಲೇ ತಲೆಬಾಚಿಕೊಂಡ. ಕಮಲ ಅಲಂಕೃತಳಾದಳು. ಮುಖಕ್ಕೆ ತೆಳುವಾಗಿ ಪೌಡರ್ ಧರಿಸಿದಳು. ತಲೆತುಂಬ ಹೂ ಮುಡಿದುಕೊಂಡಳು.

ಸಾಲಂಕೃತೆಯಾದ ಸುಂದರಿಯನ್ನು ನೋಡಿ ನೋಡಿ ಶ್ರೀನಾಥ ಕಣ್ಣು ತುಂಬಿಕೊಂಡ. ಅವಳ ತಲೆಗೆದರುವುದನ್ನು ಕೂಡ ಲಕ್ಷಿಸದೆ ಅಪ್ಪಿ ಮುದ್ದಿಟ್ಟ.

ಭಾಗ್ಯಮ್ಮನೂ ಹೊಸಸೀರೆ ಉಟ್ಟುಕೊಂಡು ಹೊರಡುವುದಕ್ಕೆ ಸಿದ್ಧಳಾದಳು.

ಶ್ರೀನಾಥ ತಾನೇ ಹೋಗಿ ಒಂದು ಗಾಡಿ ಗೊತ್ತುಮಾಡಿಕೊಂಡು ಬಂದ.

" ಎಲ್ಲಿಗೆ ಹೋಗುವುದು" ಎಂದು ಕಮಲ ಕೇಳಿದಳು.

" ಗ್ಲೋಬ್‌ಗೆ ಹೋಗೋಣ."

" ಅಮ್ಮನಿಗೆ ಇಂಗ್ಲಿಷ್ ಪಿಕ್ಚರ್ ಆಗುವುದಿಲ್ಲ."

" ಹಾಗಾದರೆ ಎಲ್ಲಿಗೆ ಹೋಗೋಣ."

" ಕಂಟೋನ್ಮೆಂಟಿನಲ್ಲಿಲ್ಲೊ 'ಅಶೋಕಕುಮಾರ್' ನಡೆಯುತ್ತಿದೆ ಯಂತೆ !"

" ಹೊ ; ಆಪೆರಾದಲ್ಲಿ."

" ಅಲ್ಲಿಗೇ ಹೋಗೋಣ."

'ಅಶೋಕ ಕುಮಾರ್' ನೋಡುವ ಮನಸ್ಸಿಲ್ಲದಿದ್ದರೂ ಶ್ರೀನಾಥ ಕಮಲನನ್ನೂ ಭಾಗ್ಯಮ್ಮನನ್ನೂ ಕರೆದುಕೊಂಡು ಆಪೆರಾಕ್ಕೆ ಹೋದ.

ಮೇಲ್ತರಗತಿಗೆ ಟಿಕೆಟ್‌ಕೊಂಡು ತನ್ನ ನಲ್ಲೆ, ನಲ್ಲೆಯ ತಾಯಿಯೊಂದಿಗೆ ಕುಳಿತ. ಶ್ರೀನಾಥನ ಎದೆ ಒಂದೇ ಸಮನಾಗಿ ಹೊಡೆದುಕೊಳ್ಳುತ್ತಿತ್ತು. 'ಗುರುತು ಕಂಡವರು ಯಾರಾದರೂ ನೋಡಿದರೆ ಏನುಗತಿ' ಎಂದು ಯೋಚಿಸುತ್ತಿದ್ದ. ಚಿತ್ರ ಆರಂಭಿಸಲು ದೀಪ ಆರಿಸಿದಾಗಲೇ ಅವನ ಮನಸ್ಸಿಗೆ ಸಮಾಧಾನ.

ತಾಯಿ ಮಗಳಿಬ್ಬರೂ ಚಿತ್ರ ನೋಡಿ ಅತ್ಯಾನಂದಭರಿತರಾದರು. ಶ್ರೀನಾಥನಿಗೆ ಎರಡೂವರೆಗಂಟೆ ನರಕವಾಯಿತು. ಚಿತ್ರದ ಅಭಿನಯ, ಕಥೆ, ಸಂಗೀತ ಅವನಿಗೆ ತಲೆನೋವು ಬರಿಸಿತು.

ಸಿನೀಮಾ ಮುಗಿದ ಮೇಲೆ ಶ್ರೀನಾಥ ಕಮಲನನ್ನು ಮೆಲ್ಲನೆ ಕೇಳಿದ

" ಈಗ ಊಟದ ಪಾಡು. ಮನೆಯಲ್ಲಿ ಮಾಡಿಟ್ಟು ಬಂದಿರುವೆಯಾ ?"

" ಇಲ್ಲ. ಹಾಗೇ ಬಂದುಬಿಟ್ವಿ."

" ಬನ್ನಿ. ಹೊಟೇಲಿಗೆ ಹೋಗಿ ಊಟಮಾಡಿ ಹೋಗೋಣ."

" ಊಟ ಬೇಡ. ಏನಾದರೂ ತಿಂಡಿ ತಿಂದರೆ ಸಾಕು."

ಶ್ರೀನಾಥ ಅವರನ್ನು ಪಕ್ಕದಲ್ಲಿದ್ದ ಬೊಂಬಾಯಿ ಹೋಟಲೊಂದಕ್ಕೆ ಕರೆದೊಯ್ದ. ತಾಯಿ ಮಗಳು ದೋಸೆ, ಜಾಮೂನು, ಕಾಫಿ ತೆಗೆದುಕೊಂಡರು. ಶ್ರೀನಾಥ ಒಂದು ಉದ್ದಿನ ವಡೆ ತಿಂದು ಕಾಫಿ ಕುಡಿದ.

ಹೊಟೇಲ್ ಮಾಲಿಕನ ಮೇಜಿನ ಮೇಲೆ ಗ್ಲಾಸು ಶೀಷೆಗಳಿದ್ದ ಚಾಕಲೇಟ್ ನೋಡಿ ಕಮಲಾ 'ಚಾಕಲೇಟ್' ಎಂದಳು. ಶ್ರೀನಾಥ ಎರಡು ಪ್ಯಾಕೆಟ್ 'ಕ್ಯಾಡ್‌ಬರಿ' ಕೊಂಡು ಅವಳ ಕೈಯಲ್ಲಿಟ್ಟ.

ಗಾಡಿ ಮಾಡಿಕೊಂಡು ಮನೆಯ ಕಡೆ ಹೊರಟರು. ಗಾಡಿಯಲ್ಲಿ ಶ್ರೀನಾಥ ಭಾಗ್ಯಮ್ಮನವನ್ನು ಕೇಳಿದ

" ಸಿನೀಮಾ ಹೇಗಿತ್ತಮ್ಮ."

" ಚೆನ್ನಾಗಿತ್ತಪ್ಪ. ತ್ಯಾಗರಾಜ ಭಾಗವತರ್ ಏನು ಮಾಡಿದರೂ ಚೆನ್ನಾಗಿಮಾಡುತ್ತಾರೆ. ಬಹಳ ಸೊಗಸಾಗಿ ಹಾಡುತ್ತಾರೆ."

" ನಿನಗೆ ಕಮಲಾ."

" ನನಗೂ ಚೆನ್ನಾಗಿತ್ತು. ಇನ್ನೊಂದು ಸಾರಿ ನೋಡಬೇಕೆನಿಸುತ್ತದೆ."

ಅವರ ಅಭಿರುಚಿ ಕಂಡು ಶ್ರೀನಾಥ ವಿಸ್ಮಯಗೊಂಡ.

" ಒಳ್ಳೆಯ ಇಂಗ್ಲಿಷ್ ಪಿಕ್ಚರ್ ಇತ್ತು. ' ಅನಾ ಕೆರಿನೀನಾ ' ಅದಕ್ಕೆ ಹೋಗಬಹುದಾಗಿತ್ತು "

ಎಂದು ಹೇಳಿದ. ಭಾಗ್ಯಮ್ಮ

" ಥೂ–ಇಂಗ್ಲಿಷ್ ಪಿಕ್ಚರ್ ನೋಡಲಾರೆನಪ್ಪ. ಸುಮ್ಮನೆ ಮುತ್ತುಗಳಿಟ್ಟುಕೊಳ್ಳುತ್ತಾರೆ "

ಎಂದಳು. ಶ್ರೀನಾಥ ಅವಳ ವಿಮರ್ಶೆ ಕೇಳಿ ಗಹಗಹಿಸಿ ನಕ್ಕ. ಮನೆ ತಲುಪುತ್ತಲೂ ಗಾಡಿಯವನಿಗೆ ದುಡ್ಡು ಕೊಟ್ಟು ಕಳುಹಿಸಿ ಶ್ರೀನಾಥ ರಾತ್ರಿಯನ್ನು ಅಲ್ಲಿಯೇ ಕಳೆದ.

ಬೆಳಗಾಯಿತು. ಶ್ರೀನಾಥ ಏಳುವಷ್ಟರಲ್ಲಿ ಕಮಲಾ ಅವನ ಕಿಸೆಯಲ್ಲಿದ್ದ ಹಣ ತೆಗೆದುಕೊಂಡು ಹೊಟೇಲಿನಿಂದ ದೋಸೆ, ಕೇಸರೀಭಾತ್ ತರಿಸಿ ಕಾಫಿ ಸಿದ್ಧ ಮಾಡಿದ್ದಳು. ಉಪಾಹಾರ ಮುಗಿಸಿಕೊಂಡು ಶ್ರೀನಾಥ ಹೊರಡಲನುವಾದ. ಕಮಲಾ ಕೇಳಿದಳು

" ಪುನಃ ಯಾವಾಗ ದರ್ಶನ."

" ನಾಲ್ಕು ಗಂಟೆ ಸುಮಾರಿಗೆ ಬರುತ್ತೇನೆ "

ಎಂದು ಹೇಳಿ ಕಮಲ, ಭಾಗ್ಯಮ್ಮನ ಅಪ್ಪಣೆ ಪಡೆದು ಹೊರಟುಬಿಟ್ಟ.

ಶ್ರೀನಾಥ ರೂಮಿಗೆ ಹೋಗಿ ಹಿಂದಿನ ದಿನ ಮಿಂಚಿನಂತೆ ಸುಳಿದುಹೋದ ಘಟನೆಗಳನ್ನು ಯೋಚಿಸುತ್ತ ಮಲಗಿದ. ಯಾರೋ ಬಾಗಿಲು ಬಡಿದರು. ಎದ್ದು ನೋಡುವಲ್ಲಿ ಶರ್ಮ. ಶರ್ಮ ಒಳಗೆ ಕಾಲಿಡುತ್ತಿರುವಂತೆ

"ನಿನ್ನೆಯೆಲ್ಲಾ ಎಲ್ಲಿಗೆ ಹೋಗಿಬಿಟ್ಟಿದ್ದೆಯಯ್ಯಾ. ಸಂಜೆ ಮೂರು ನಾಲ್ಕು ಸಲ ಬಂದಿದ್ದೆ."

"ಏನೋ ಒಂದು ವ್ಯವಹಾರ ಮುಗಿಸುವ ಎಂದು ಹೋಗಿದ್ದೆನಪ್ಪಾ."

"ರಾತ್ರಿ ಎಷ್ಟು ಹೊತ್ತಿಗೆ ಬಂದೆ ?"

"ಹತ್ತು ಗಂಟೆಯಾಗಿರಬಹುದು."

"ಸಂಜೆಗೇನು ಪ್ರೋಗ್ರಾಂ ?"

"ಏನೂ ಇಲ್ಲ."

"ಮುತ್ತಮ್ಮನ ಮನೆಗೆ ಹೋಗೋಣವೇನು ?"

"ನನಗೆ ನಾಲ್ಕು ಗಂಟೆಗೆ ಎಂಗೇಜ್‌ಮೆಂಟ್ ಇವೆ ಶರ್ಮ."

"ಬಹಳ ಕೆಲಸ ಹಚ್ಚಿಕೊಂಡ ಹಾಗೆ ಕಾಣುತ್ತದೆ."

"ಹಚ್ಚಿಕೊಳ್ಳಬೇಕಲ್ಲಪ್ಪಾ – ಹೊಟ್ಟೆಯ ಪಾಡು."

"ಒಳ್ಳೆಯದು. ನಾಳೆ ನೀನೇ ಆಫೀಸಿನ ಹತ್ತಿರ ಬಾ."

"ಹಾಗೇ ಆಗಲಿ" ಎಂದು ಹೇಳಿದ.

ಶರ್ಮನಿಗೆ ಹೇಳಿದ ಸುಳ್ಳಿನ ಸರಮಾಲೆ ಕಂಡು ಶ್ರೀನಾಥನ ಮನಸ್ಸಿಗೆ ವಿಷಾದವಾಯಿತು. ತನ್ನ ಬಾಳನೌಕೆ ಎಲ್ಲಿಗೆ ಹೋಗುತ್ತಿದೆ ಎಂದು ಯೋಚಿಸಿದ. 'ಹೋದಲ್ಲಿಗೆ ಹೋಗಲಿ. ವಿಶಾಲ ಸಾಗರದ ಮೇಲೆ ಅದನ್ನು ಬಿಟ್ಟಿದ್ದೇನೆ. ಎಡಕ್ಕೆ ಹೋದರೂ ಒಂದೇ–ಬಲಕ್ಕೆ ಹೋದರೂ ಒಂದೇ' ಎಂದು ನಿರ್ಧರಿಸಿದ.

ಶ್ರೀನಾಥನ ಜೀವನದಲ್ಲಿ ಇಂದು ಒಂದು ಹೊಸ ಪ್ರಕರಣ ಕಾಣಿಸಿಕೊಂಡಿತು. ಅವನ ಮನಸ್ಸು ಹಣ ಬಯಸತೊಡಗಿತು. ಇನ್ನು ಸಾಹಿತ್ಯಸೃಷ್ಟಿ ನಿರಪೇಕ್ಷಬುದ್ಧಿಯಿಂದ ಮಾಡುವುದು ಸಾಧ್ಯವಿಲ್ಲವೆಂದು ಗ್ರಹಿಸಿದ. 'ಹಣ ಬೇಕು–ಹಣ ದೊರಕಿಸುವುದು ಹೇಗೆ ?' ಎನ್ನುವ ಕಡೆ ಅವನ ಚಿತ್ತ ಹರಿಯಿತು.

ಕಮಲನಿಗೆ ತಾನು ಹೇಳಿದ್ದ ಮಾತುಗಳನ್ನು ಜ್ಞಾಪಿಸಿಕೊಂಡ. ಭಾಗ್ಯಮ್ಮ ಬೇಕೆಂದು ತಿಳಿಸಿದ್ದ ವಿಷಯಗಳು ನೆನಪಿಗೆ ಬಂದವು. ಅವುಗಳನ್ನು ಒದಗಿಸಬೇಕು–ಬೇಗ ಒದಗಿಸಬೇಕು. ಭಾಗ್ಯಮ್ಮ ತೃಪ್ತಳಾಗಿ ಹಸನ್ಮುಖಿಯಾಗಿದ್ದರೇ ತನಗೆ ಸುಖ–ಶಾಂತಿ. ಕಮಲಾ ಸ್ಪಷ್ಟವಾಗಿ ಹೇಳಿದ್ದಳು 'ನನ್ನ

ತಾಯಿ ಧನಪಿಶಾಚಿಯ ಒಕ್ಕಲು ' ಎಂದು. ಭಾಗ್ಯಮ್ಮನ ಧನ ಪಿಪಾಸೆಯನ್ನು ಪೂರೈಸಬೇಕು.

ಪೂರೈಸುವುದು ಹೇಗೆ? ಸಾಹಿತ್ಯದಿಂದ ಬರುವುದಾದರೂ ಏನು? ತಿಂಗಳೆಲ್ಲಾ ದುಡಿದರೂ ಕೈಗೆ ನೂರಾರು ರೂಪಾಯಿ ಬರುವುದಿಲ್ಲ. ಜತೆಗೆ ಪ್ರಕಾಶಕರು ಒಂದೇ ಗಂಟಿನಲ್ಲಿ ಹಣ ಕೊಡುವುದಿಲ್ಲ. ಅವರು ಚಿಲ್ಲರೆ ಚಿಲ್ಲರೆಯಾಗಿ ಕೊಡುವ ಹಣ ನಂಬಿಕೊಂಡು ಇಂಥ ಜವಾಬ್ದಾರಿಯನ್ನು ಪೂರೈಸಲು ಸಾಧ್ಯವೇ?

ತಾನು ಆಡಿದ ಮಾತು – ಕೊಟ್ಟ ವಚನ ಜ್ಞಾಪಿಸಿಕೊಂಡ. ಅದನ್ನು ಸರಿಯಾಗಿ ಪರಿಪಾಲಿಸದಿದ್ದರೆ ಆಗುವ ಅನರ್ಥ ಪರಂಪರೆ ಅವನ ಚಿತ್ತಫಲಕದ ಮೇಲೆ ಹೊಳೆಯಿತು.

"ಇಲ್ಲ. ಕಮಲನನ್ನು ಕಳೆದುಕೊಳ್ಳಲಾರೆ. ಅವಳು ಕಂಡವರ ಕೈಗೆ ಬೀಳುವುದನ್ನು ನೋಡಲಾರೆ. ಕಮಲ ನನ್ನ ಕೈಬಿಟ್ಟು ಹೋದರೆ ನಾನು ಬದುಕಿರುವುದು ನಿಸ್ಸಾರ್ಥಕ."

ಎಂದುಕೊಂಡ. ಹಣ–ಹಣ–ಹಣವನ್ನು ಸಂಪಾದಿಸುವುದು ಹೇಗೆ ಎನ್ನುವ ಒಂದೇ ಯೋಚನೆ ಅವನನ್ನು ಕಾಡತೊಡಗಿತು.

ಹೊಟೇಲ್ ಮಾಣಿ ಬಂದು ಬಾಗಿಲು ತಟ್ಟಿ, ಊಟದ ಡಬ್ಬ ಕೊಟ್ಟು ಹೋದ.

ಶ್ರೀನಾಥ ಊಟಕ್ಕೆ ಕುಳಿತ. ಗಂಟಲಲ್ಲಿ ಅನ್ನ ವಿಳಿಯಲಿಲ್ಲ. ಮನಸ್ಸು ಅಲ್ಲಕಲ್ಲೋಲವಾಗಿತ್ತು.

ಶ್ರೀನಾಥ ಏಕೆ ಹೀಗೆ ಕಣ್ಣು ತಪ್ಪಿಸುತ್ತಿದ್ದಾನೆಂದು ನೀಲಕಂಠನಿಗೆ ಅರ್ಥವಾಗಲಿಲ್ಲ. ಶರ್ಮನನ್ನು ಕೇಳಿ ನೋಡಿದ. ಅವನಿಗೂ ಶ್ರೀನಾಥನ ವರ್ತನೆ ಬಗೆಹರಿಯದ ಸಮಸ್ಯೆಯಾಗಿತ್ತು.

ಮನೆಗೆ ಬಂದೊಡನೆಯೇ ನೀಲಕಂಠ ಹೆಂಡತಿಯನ್ನು "ಶ್ರೀನಾಥ ಬಂದಿದ್ದನೇ?"

ಎಂದು ಕೇಳುವುದು ವಾಡಿಕೆಯಾಗುತ್ತ ಬಂತು. 'ಇಲ್ಲ ಇಲ್ಲ'ವೆಂದು ಹೇಳಿ ಹೇಳಿ ಸುಶೀಲಮ್ಮನೂ ಬೇಸತ್ತಳು.

ಒಂದು ದಿನ ಸಂಜೆ ನೀಲಕಂಠ ತನ್ನ ಕೆಲಸ ಕಾರ್ಯ ಬೇಗ ಮುಗಿಸಿ

ಕೊಂಡು ಮನೆಗೆ ಬಂದ. ಹೆಂಡತಿಯನ್ನು ಸಿನೀಮಾಕ್ಕೆ ಕರೆದುಕೊಂಡು ಹೋಗಲು ಉದ್ದೇಶಪಟ್ಟುಕೊಂಡಿದ್ದ.

"ರಾತ್ರಿ ಏಳೂವರೆಕ್ಕಾಲಿಗೆ ಮದರಾಸು ಸ್ಟೇಷನ್ನಿನಿಂದ ಪಟ್ಟೆನ್ಮಾಳ್ ಹಾಡುಗಾರಿಕೆ ಇದೆ. ಸಿನೀಮಾ ಬೇಡ"

ಎಂದು ಹೇಳಿದಳು. ಗಂಡಹೆಂಡತಿ ಹರಟೆಕೊಚ್ಚುತ್ತ ಕುಳಿತರು.

ಶ್ರೀನಾಥ ಇದ್ದಕ್ಕಿದ್ದಂತೆ ಬಂದುದನ್ನು ಕಂಡು ಗಂಡ ಹೆಂಡತಿ ಇಬ್ಬರೂ ಆಶ್ಚರ್ಯಚಕಿತರಾದರು. ಸುಶೀಲಮ್ಮ ಪರಿಹಾಸ್ಯದಿಂದ

"ನಿತ್ಯ ಕೇಳುತ್ತಿದ್ದಿರಲ್ಲಾ–ಇಗೋ ನಿಮ್ಮ ಸ್ನೇಹಿತರು ಬಂದಿದ್ದಾರೆ"

ಎಂದಳು.

"ಏನಯ್ಯಾ ಆಗಿಹೋಗಿದ್ದೆ ಇಷ್ಟುದಿವಸ. ಯಾವಾಗ ನೋಡಲಿ ರೂಮಿನ ಬಾಗಿಲು ಬೀಗ ಹಾಕಿರುತ್ತದೆ."

"ವಿಪರೀತ ಕೆಲಸ ಡಾಕ್ಟರ್. ರೂಮು ಸೇರುವುದಕ್ಕೂ ಪುರಸತ್ತಿಲ್ಲ."

"ಈಗೇನು ಬರೆಯುತ್ತಿರುವಿರಿ."

ಎಂದು ಸುಶೀಲಮ್ಮ ಕೇಳಿದಳು.

"ಒಂದಲ್ಲ–ಎರಡು ಕಾದಂಬರಿಗಳನ್ನು ಒಟ್ಟಿಗೆ ಬರೆಯುತ್ತಿದ್ದೇನೆ."

"ಇಷ್ಟು ಆಯಾಸಪಟ್ಟುಕೊಳ್ಳಬೇಡ ಶ್ರೀನಾಥ್. ದೇಹ ತಡೆಯಬೇಕಲ್ಲ....ನೋಡು ಹೇಗೆ ಆಗಿಹೋಗಿದ್ದೀ. ದೀರ್ಘಕಾಲ ಕಾಹಿಲೆ ಬಿದ್ದಿದ್ದು ಎದ್ದು ಬಂದಂತೆ ಕಾಣುತ್ತಿರುವೆ."

"ಆರೋಗ್ಯ ಚೆನ್ನಾಗಿ ನೋಡಿಕೊಳ್ಳಿ"

ಎಂದು ಸುಶೀಲಮ್ಮ ಹೇಳಿ ಒಳಗೆ ಎದ್ದು ಹೋದಳು. ಸ್ವಲ್ಪ ಹೊತ್ತಿನೊಳಗಾಗಿ ಗೆಳೆಯರಿಬ್ಬರಿಗೂ ಕಾಫಿ, ಬಿಸ್ಕತ್ತು ಬಂತು. ಅವರು ಕಾಫಿ ಲೋಟಕ್ಕೆ ಕೈಹಾಕುತ್ತಲು ಸುಶೀಲಮ್ಮ ಮೆಲ್ಲನೆ ಒಳಕ್ಕೆ ಜಾರಿ ರೇಡಿಯೋ ಮುಂದೆ ಕುಳಿತಳು.

ಕಾಫಿ ಮುಗಿಸಿ ಶ್ರೀನಾಥ ಕಿಸೆಯಿಂದ ನೂರು ರೂಪಾಯಿ ತೆಗೆದು ನೀಲಕಂಠನ ಕೈಯಲ್ಲಿಟ್ಟ.

"ಇದಕ್ಕೇನು ಅವಸರವಾಗಿತ್ತು. ನಿನಗೆ ನಾನು ಹಣ ಸಾಲವಾಗಿ ಕೊಡಲಿಲ್ಲ."

"ಸರಿ. ಈಗ ಕೈಯಲ್ಲಿ ಹಣವಿದೆ, ಹಿಂದಕ್ಕೆ ಕೊಡುತ್ತಿದ್ದೇನೆ. ಇಲ್ಲದಿದ್ದರೆ ಸ್ವಾಹಾ ಮಾಡುವುದು ಕಂಡೇ ಇದೆ."

"ಯಾವದಾದರೂ ಹಣ ಬಂತೇ ?"

"ಬಂತು. 'ಪತಿತಪಾವನ'ದಿಂದ ಒಂದು ಸಾವಿರ ರೂಪಾಯಿ ಬಂತು."

"ಅದರ ಗೌರವಧನ ನಿನ್ನ ಪ್ರಕಾಶಕರು ಮೊದಲೇ ಕೊಟ್ಟಿದ್ದರಲ್ಲಾ."

"ಕೊಟ್ಟಿದ್ದರು. ಈಗ ಅದರ ಸ್ವಾಮ್ಯ ಮಾರಿಬಿಟ್ಟೆ."

"ಮಾರಿಬಿಟ್ಟೆ ! ದುಡುಕುವುದಕ್ಕೇನಾಗಿತ್ತು ?"

"ಹಣ ಬೇಕಾಗಿತ್ತು."

"ನಾನು ಕೊಡುತ್ತಿದ್ದೆ."

"ಎಷ್ಟಕ್ಕೆ ನಿನ್ನ ಪೀಡಿಸುವುದು ನೀಲಕಂಠ."

"ನಿನ್ನ ಹಣ ನೀನು ಹೇಗೆ ಬೇಕಾದರೂ ಖರ್ಚುಮಾಡಿಕೊಳ್ಳಬಹುದು. ಅದನ್ನು ಕೇಳುವ ಅಧಿಕಾರ ನನಗಿಲ್ಲ. ಆದರೂ ಕೇಳುತ್ತೇನೆ. ಇಷ್ಟು ಹಣ ಏಕೆ ಬೇಕಾಗಿತ್ತು."

"ಯಾವದೋ ಸಾಲ ತೀರಿಸಬೇಕಾಗಿತ್ತು."

"ಒಳ್ಳೆಯದಾಯಿತು. ಇನ್ನುಮೇಲೆ ನಿನ್ನ ಕೃತಿಗಳ ಸ್ವಾಮ್ಯ ಮಾರುವುದಕ್ಕೆ ಹೋಗಬೇಡ. ಇಂದಲ್ಲ ನಾಳೆಯಾದರೂ ಅವು ನಿನ್ನ ಪೊರೆಯುತ್ತವೆ."

"ಹಾಗೇ ಆಗಲಿ. ಇನ್ನು ನಾನು ಬರಲೇ ?"

"ಇಷ್ಟು ಬೇಗ ಹೊರಡಬೇಕೇ ?"

"ಹೂ ! ಜವಾಬುದಾರಿ ಹೊತ್ತುಕೊಂಡ ಮೇಲೆ ಅದನ್ನು ನಿರ್ವಹಿಸಬೇಕು."

"ಮತ್ತೆ ಭೇಟಿ."

"ಪುರಸತ್ತಾದಾಗ ನಾನೇ ಬರುತ್ತೇನೆ. ಅಕ್ಕಾವರಿಗೆ ಹೇಳಿಬಿಡು. ರೇಡಿಯೋ ಕೇಳುತ್ತಿದ್ದಾರೆ."

ಎಂದು ಹೊರಟುಬಿಟ್ಟ. ನೀಲಕಂಠ ಒಳಗೆ ಬಂದು ಖಿನ್ನನಾಗಿ ಕುಳಿತುಕೊಂಡ. ಸುಶೀಲಮ್ಮ ರೇಡಿಯೋ ಧ್ವನಿ ತಗ್ಗಿಸಿ

"ಹೊರಟು ಹೋದರೇ ?"

" ಹೂ ! "

" ಇಲ್ಲೇ ಊಟಕ್ಕೆಬ್ಬಿಸಬೇಕಾಗಿತ್ತು."

" ಅವನಿಗೇನೋ ವಿಪರೀತ ಕೆಲಸವಂತೆ !"

" ಎರಡು ಕಾದಂಬರಿ ಒಟ್ಟಿಗೆ ಬರೆಯುವುದೇನು ಸಾಮಾನ್ಯವೇ ?"

" ಶ್ರೀನಾಥನಲ್ಲಿ ಏನೋ ಬದಲಾವಣೆಯಾಗಿದೆ ಸುಶೀ – ಅವನು ಮೊದಲಿನಂತೆ ಇಲ್ಲ. ಅವನ ಮನಸ್ಸಿನಲ್ಲಿ ಏನೋ ಕೊರಗು ಹತ್ತಿದೆ. ಬಾಯಿ ಬಿಟ್ಟು ಹೇಳಲೊಲ್ಲ"

ಎಂದು ನೀಲಕಂಠ ಹೇಳಿದ. ಗಂಡನ ಮನಸ್ಸು ತುಂಬ ವ್ಯಗ್ರವಾಗಿದ್ದುದನ್ನು ಕಂಡು ಸುಶೀಲಮ್ಮ ಮಾತು ಬೆಳಸಲಿಲ್ಲ.

ನೀಲಕಂಠನ ಮನೆ ಬಿಟ್ಟ ಶ್ರೀನಾಥ ಒಂದು ಗಾಡಿ ಮಾಡಿಕೊಂಡು ನೇರವಾಗಿ ಕಬ್ಬನ್‌ಪೇಟೆಗೆ ಬಂದ.

ಅವನು ಬರುವಷ್ಟರಲ್ಲಿ ಕಮಲಾ, ಭಾಗ್ಯಮ್ಮ, ಇಬ್ಬರೂ ಅಲಂಕಾರ ಮಾಡಿಕೊಂಡು ಹೊರಗೆ ಹೊರಡಲು ಅಣಿಯಾಗಿದ್ದರು. ಅವರನ್ನು ನೋಡಿ ಶ್ರೀನಾಥ

" ಎಲ್ಲಿಗೋ ಹೊರಟಿರುವ ಹಾಗಿದೆ." ಎಂದ.

" ಇವತ್ತು ಸಾಗರ್‌ನಲ್ಲಿ ಒಳ್ಳೆಯ ಪಿಕ್ಚರ್ ಇದೆ – ವಂದೇ ಮಾತರಂ – ಏಳಿ ಹೋಗೋಣ."

" ಪಿಕ್ಚರಿಗೆ ಹೋಗಲೇಬೇಕೇ ?"

" ಹೋಗೋಣವೆಂದು ಅಮ್ಮ ಹೇಳಿದಳು."

" ಊಟ ತಿಂಡಿ ಒಂದೂ ಬೇಡವೇ ?"

" ಸ್ವಲ್ಪ ಬೇಗ ಹೊರಟರೆ ದಾರಿಯಲ್ಲಿಯೇ ಏನಾದರೂ ಆಗತ್ತೆ."

ಪಿಕ್ಚರಿಗೆ ಹೊರಡುವುದಕ್ಕೆ–ಅದರಲ್ಲಿಯೂ 'ವಂದೇ ಮಾತರಂ' ನೋಡುವುದಕ್ಕೆ ಶ್ರೀನಾಥನಿಗೆ ಸ್ವಲ್ಪವೂ ಮನಸ್ಸಿಲ್ಲ. ತಾನು ಬೇಸರ ತೋರಿಸಿದರೆ ಕಮಲ ಎಲ್ಲಿ ಕಹಿಯಾಗುತ್ತಾಳೋ ಎಂಬ ಕಳವಳ. ಅವರ ಜತೆ ಹೊರಡಲನುವಾದ.

ಮಾರ್ಕೆಟ್ ಮುಂದೆ ಗಾಡಿ ಹೊಡೆಸಲು ಕಮಲ ಸೂಚಿಸಿದಳು. ಗಾಡಿಯನ್ನು ಮಾರ್ಕೆಟ್ ಬಳಿ ನಿಲ್ಲಿಸಿ ಕಮಲ ಶ್ರೀನಾಥನನ್ನು ಕರೆದುಕೊಂಡು

ಹೋಗಿ ತಲೆತುಂಬ ಮುಡಿಯಲು ಹೂವು ತಂದಳು. ತಾಯಿಗರ್ಧ ಕೊಟ್ಟು ತಾನು ಉಳಿದರ್ಧ ಮುಡಿದಳು.

'ಪ್ಲಾಜಾ ಸುಖಾನಂದ' ಹೊಟೇಲ್ ಮುಂದೆ ಗಾಡಿ ನಿಲ್ಲಲು ಶ್ರೀನಾಥ ಸೂಚಿಸಿದ. ಗಾಡಿಯವನನ್ನು ಕಳುಹಿಸಿ ಕಮಲಾ, ಭಾಗ್ಯಮ್ಮನೊಂದಿಗೆ ಒಳಗೆ ಪ್ರವೇಶಿಸಿದ.

"ಊಟ ಸಿಕ್ಕುತ್ತದೆ – ತರಿಸೋಣವೇ?"

"ಬೇಡ – ತಿಂಡಿಯಾದರೆ ಸಾಕು."

ಎಂದಳು ಕಮಲಾ.

ಉಪಾಹಾರ ಮುಗಿಸಿಕೊಂಡು ಅವರನ್ನು ಕರೆದುಕೊಂಡು ಸಾಗರ್ ಸಿನೀಮಾ ಮಂದಿರಕ್ಕೆ ಹೋದ.

ಚಿತ್ರ ಮುಗಿಯುವ ವೇಳೆಗೆ ಶ್ರೀನಾಥನಿಗೆ ತಲೆ ಸಿಡಿದುಹೋಗುವಂತಾಯಿತು. ಚಿತ್ರವನ್ನು ಅವನು ಸ್ವಲ್ಪವೂ ನೋಡಿರಲಿಲ್ಲ. ಆದರೂ ಬೇಸರ ಅವನನ್ನು ತಾನೇತಾನಾಗಿ ವ್ಯಾಪಿಸಿತ್ತು-

ರಾತ್ರಿ ಯಾರಿಗೂ ಊಟ ತಿಂಡಿ ಬೇಕಾಗಲಿಲ್ಲ. ಮನೆಗೆ ಬಂದು ನೀರು ಕುಡಿದು ಮಲಗಿದರು.

ಬೆಳಗ್ಗೆ ತಿಂಡಿ ತರಿಸುವುದಕ್ಕೆ ಕಮಲ, ಶ್ರೀನಾಥನ ಕೋಟಿನ ಜೇಬಿಗೆ ಕೈಹಾಕಿ ಎರಡು ರೂಪಾಯಿ ತೆಗೆದುಕೊಂಡಳು. ಅವನ ಜೇಬಿನಲ್ಲಿದ್ದ ನೋಟಿನ ಕಂತೆ ಅವಳ ಕಣ್ಣಿಗೆ ಬಿತ್ತು. ತಾಯಿಗೆ ಸೂಕ್ಷ್ಮವಾಗಿ ತಿಳಿಸಿದಳು

"ತಡೀ ನೋಡೋಣ. ಏನು ಮಾಡುತ್ತಾರೋ"

ಎಂದು ಭಾಗ್ಯಮ್ಮ ಹೇಳಿದಳು.

ಶ್ರೀನಾಥ ಎದ್ದವನೇ ಕಾಫಿ, ಉಪಾಹಾರ ಮುಗಿಸಿ ಕಮಲನನ್ನು ಕರೆದು

"ಸ್ನಾನಕ್ಕೆ ನೀರು ಕಾದಿದೆಯೇ?" ಎಂದು ಕೇಳಿದ.

"ಕಾದಿದೆ – ಸ್ನಾನಕ್ಕೆ ಏಳುತ್ತೀರೇನು."

"ಅಮ್ಮ ಏನು ಮಾಡುತ್ತಿದ್ದಾರೆ."

"ಅಡಿಗೆಗಿಟ್ಟಿದ್ದಾರೆ."

"ಬೇಗ ಅಡಿಗೆ ಮುಗಿಸಿ ಎಂದು ಹೇಳು."

" ಏಕೆ ?"

" ಸ್ವಲ್ಪ ಪೇಟೆಕಡೆ ಹೋಗಿಬರಬೇಕು."

ಕಮಲನ ಮುಖ ಅರಳಿತು. ಕೂಡಲೆ ಹೋಗಿ ಸಂತೋಷದ ಸುದ್ದಿಯನ್ನರುಹಿದಳು.

ಅಡಿಗೆಯ ಕೆಲಸವನ್ನು ಭಾಗ್ಯಮ್ಮ ಬೇಗ ಮುಗಿಸಿದಳು. ಶ್ರೀನಾಥ ಸ್ನಾನ ಮುಗಿಸಿದ. ಕಮಲ ಅಲಂಕಾರಮಾಡಿಕೊಂಡು ಹೊರಡಲನುವಾದಳು.

ಶ್ರೀನಾಥ ಒಂದು ಗಾಡಿ ಗೊತ್ತುಮಾಡಿ ಅವರನ್ನು ನೇರವಾಗಿ ಚಿಕ್ಕಪೇಟೆಗೆ ಒಂದು ಜವಳಿ ಅಂಗಡಿಗೆ ಕರೆದೊಯ್ದ. ಕಮಲ ಅಂಗಡಿಯಲ್ಲಿ ಕುಳಿತು ಶ್ರೀನಾಥನ ಮುಖ ನೋಡಿದಳು. ಶ್ರೀನಾಥ ಅಂಗಡಿಯವನನ್ನು ಕರೆದು

" ಒಳ್ಳೆಯ ಧರ್ಮಾವರದ ಸೀರೆಗಳನ್ನು ತೋರಿಸಿ "

ಎಂದು ಹೇಳಿದ. ಅಂಗಡಿಯವನು ಹತ್ತಾರು ಬಗೆಬಗೆಯ ಸೀರೆಗಳನ್ನು ತೆಗೆದು ಹರಹಿದ.

ಶ್ರೀನಾಥ

" ನೀನೊಂದು, ಅಮ್ಮ ಒಂದು ಸೀರೆ ತೆಗೆದುಕೊಳ್ಳಿ "

ಎಂದ.

ಕಮಲಾ ಕೇಸರಿಬಣ್ಣದ ಸೀರೆ ಆಯ್ದಳು. ಭಾಗ್ಯಮ್ಮ ಅಚ್ಚಕೆಂಪಿನ ಸೀರೆ ಆರಿಸಿಕೊಂಡಳು. ಅಂಗಡಿಯವನು ಅವುಗಳಿಗನುಗುಣವಾದ ಕಣಗಳನ್ನೂ ಹರಹಿದ.

" ವಾಯಲ್ ಸೀರೆಗಳಿವೆಯೇನು ?"

ಅಂಗಡಿಯವನು ವಾಯಲ್ ಸೀರೆಗಳನ್ನು ತಂದು ಮುಂದೆ ಹರಹಿದ. ನಾಲ್ಕು ಸೀರೆಗಳನ್ನು ಆರಿಸಿಕೊಳ್ಳುವಂತೆ ಕಮಲನಿಗೆ ಹೇಳಿ

" ನಿಮ್ಮ ತಾಯಿಗೆ ಯಾವದು ಬೇಕು ಕೇಳು " ಎಂದ.

ಭಾಗ್ಯಮ್ಮ

" ನಾನು ವಾಯಿಲ್ ಉಡುವುದಿಲ್ಲ. ಮಧುರೆ, ಕಂಚಿ ಕಡೆಯದು ಮಡಿಸೀರೆಯಾದರೆ ಒಳ್ಳೆಯದು "

ಎಂದಳು. ಅಂಗಡಿಯವನು ಭಾಗ್ಯಮ್ಮ ಕೇಳಿದ ಮಧುರೆ, ಕಂಚಿ ಸೀರೆಗಳನ್ನು ತಂದು ಮುಂದಿಟ್ಟ. ಭಾಗ್ಯಮ್ಮ ಒಂದು ಜತೆ ಸೀರೆ ಆರಿಸಿಕೊಂಡಳು.

ಸೀರೆಯ ವ್ಯಾಪಾರ ಮುಗಿಯಲು ಅದೇ ಅಂಗಡಿಯಲ್ಲಿ ಎರಡು ಜತೆ ಮುಗ್ಗಲು ಹಾಸಿಗೆ, ನಾಲ್ಕುಜತೆ ಟವಲು ವ್ಯಾಪಾರಮಾಡಿ

"ಬಿಲ್ ಹಾಕಿ" ಎಂದ.

ಅಂಗಡಿಯವನು ಲೆಕ್ಕಹಾಕಿ ಮುನ್ನೂರತೊಂಭತ್ತೇಳು ರೂಪಾಯಿಗಳಿಗೆ ಬಿಲ್ ಕೊಟ್ಟ. ಶ್ರೀನಾಥ ಹಣ ಕೆತ್ತು ಬಟ್ಟೆಯ ಗಂಟನ್ನು ಗಾಡಿಯಲ್ಲಿಡಲು ಅಂಗಡಿಯವನಿಗೆ ತಿಳಿಸಿ, ಭಾಗ್ಯಮ್ಮ ಕಮಲನೊಂದಿಗೆ ಬಂದು ಗಾಡಿಯಲ್ಲಿ ಕುಳಿತ.

ಶ್ರೀನಾಥನ ಔದಾರ್ಯ ತಾಯಿಮಗಳಿಬ್ಬರನ್ನೂ ಚಿಕ್ಕಸ ಬೆರಗು ಗೊಳಿಸಿತ್ತು.

ಗಾಡಿಯವನಿಗೆ ಜಯಚಾಮರಾಜ ರಸ್ತೆಗೆ ಹೊಡೆಯಲು ಸೂಚಿಸಿದ.

ಗಾಡಿ ಒಂದು ಫರ್ನೀಚರ್ ಅಂಗಡಿಯ ಮುಂದೆ ಬರಲು ನಿಲ್ಲಹೇಳಿ ಶ್ರೀನಾಥ ಒಳಕ್ಕೆ ಪ್ರವೇಶಿಸಿದ.

ಫರ್ನೀಚರ್ ಅಂಗಡಿಯಲ್ಲಿ ಒಂದು ಡಬ್ಬಲ್ ಕಾಟ್, ಒಂದು ಸಿಂಗಲ್ ಕಾಟ್, ನಾಲ್ಕು ಕುರ್ಚಿಗಳು, ಒಂದು ಮೇಜು ವ್ಯಾಪಾರ ಮಾಡಿ ಬಿಲ್ ಹಾಕಿಸಿದ. ಅಂಗಡಿಯವನು ಇನ್ನೂರತೊಂಭತ್ತೈದು ರೂಪಾಯಿಗಳಿಗೆ ಬಿಲ್ ಕೊಟ್ಟ. ಬಿಲ್ ಹಣ ಅಂಗಡಿಯವನಿಗೆ ಕೊಟ್ಟು

"ಇವುಗಳನ್ನು ಹೇಗೆ ಕಳಿಸಿಕೊಡುತ್ತೀರಿ."

"ಎಲ್ಲೀಗೆ ಕಳಿಸಬೇಕು"

"ಇಲ್ಲೇ ಕಬ್ಬನ್ ಪೇಟೆಗೆ."

"ಕೂಲಿಗಳನ್ನು ಕೊಡುತ್ತೇನೆ. ನೀವೇ ತೆಗೆಸಿಕೊಂಡು ಹೋಗುವಿರಾ?"

"ಹಾಗೇ ಆಗಲಿ – ಕೂಲಿಗಳನ್ನು ಕರಸಿ"

ಎಂದು ಹೇಳಿ ಕಮಲನ ಕೈಗೆ ಐದು ರೂಪಾಯಿ ಚಿಲ್ಲರೆ ಹಣಕೊಟ್ಟು

"ನೀವು ಗಾಡಿಯಲ್ಲಿ ಮನೆಗೆ ಹೋಗಿಬಿಡಿ. ನಾನು ಸಾಮಾನು ತೆಗೆಸಿ ಕೊಂಡು ಬರುತ್ತೇನೆ"

ಎಂದು ಹೇಳಿದ.

ಕಮಲ, ಭಾಗ್ಯಮ್ಮ ಮನೆ ಸೇರಿದ ಅರ್ಧ ಗಂಟೆಯೊಳಗೆ ಶ್ರೀನಾಥ ಸಾಮಾನುಗಳನ್ನು ತೆಗೆಸಿಕೊಂಡು ಮನೆಗೆ ಬಂದ.

ಸಾಮಾನು ತಂದ ಕೂಲಿಗಳಿಂದಲೇ ಮಂಚ, ಮೇಜು, ಕುರ್ಚಿಗಳನ್ನು ರೂಮಿನಲ್ಲಿ ತೊಟ್ಟಿಯಲ್ಲಿ ಇಡಿಸಿ ಅವರಿಗೆ ಕೂಲಿಕೊಟ್ಟು ಕಳಿಸಿದ.

ಶ್ರೀನಾಥನಿಗೆ ಸಾಕು ಸಾಕಾಗಿ ಹೋಗಿತ್ತು. ಅವನಿಗೆ ಆಯಾಸವಾಗಿರುವುದನ್ನರಿತು ಕಮಲಿ ಮಂಚದ ಮೇಲೆ ಹಾಸಿಗೆ ಹಾಸಿ, ಹೊಸ ಮಗ್ಗಲು ಹಾಸಿಗೆ ಹಾಕಿ

"ನೀವು ಸ್ವಲ್ಪ ವಿಶ್ರಮಿಸಿಕೊಳ್ಳಿ – ನಾನು ಈಗಲೇ ಬರುತ್ತೇನೆ"

ಎಂದು ಹೇಳಿ ಒಳಗೆ ಹೋಗಿ ಒಂದು ಕಪ್ ಬಿಸಿ ಕಾಫಿಮಾಡಿ ತಂದು ಶ್ರೀನಾಥನ ಕೈಗಿತ್ತಳು.

ಶ್ರೀನಾಥ ಮಲಗಿದ್ದವನು ಎದ್ದು ಕುಳಿತು ಕಾಫಿ ಕುಡಿದು

"ಜೇಬಿನಲ್ಲಿ ಪರ್ಸ್ ಇದೆ. ತೆಗೆದುಕೋ"

ಎಂದ. ಕಮಲಿ ಪರ್ಸ್ ತೆಗೆದು ಶ್ರೀನಾಥನ ಕೈಗಿತ್ತಳು. ಉಳಿದಿದ್ದ ಹಣ ಲೆಕ್ಕ ಹಾಕಿದ. ಎಂಟು ರೂಪಾಯಿ ಚಿಲ್ಲರೆ ಹಣ ಸಿಕ್ಕಿತ್ತು.

"ಇವತ್ತು ಎಷ್ಟು ಖರ್ಚು ಮಾಡಿದಿರಿ?"

"ಖರ್ಚಾದುದನ್ನು ಲೆಕ್ಕ ಹಾಕಬಾರದು. ಹೆಚ್ಚು ಹಣ ನನ್ನಲ್ಲಿದ್ದಿದ್ದರೆ ಸಂತೋಷವಾಗಿ ಖರ್ಚುಮಾಡುತ್ತಿದ್ದೆ. ನಿಮ್ಮ ತಾಯಿಗೆ ತೃಪ್ತಿಯಾಯಿತೇ?"

"ತೃಪ್ತಿಯಾಗದೆ ಏನು?"

"ನೋಡು ಕಮಲಿ. ಸಾವಿರ ರೂಪಾಯಿ ಬಂತು. ಅದರಲ್ಲಿ ಗೆಳೆಯನೊಬ್ಬನ ಹತ್ತಿರ ನೂರು ರೂಪಾಯಿ ಸಾಲ ತೆಗೆದುಕೊಂಡಿದ್ದೆ–ಅದನ್ನು ಒಂದಿರುಗಿ ಕೊಟ್ಟೆ. ಹೊಟೇಲಿನವನಿಗೆ ಮೂರು ತಿಂಗಳ ಹಣ ನೂರೈವತ್ತು ಮುಂಗಡವಾಗಿ ಕೊಟ್ಟೆ.—ನನ್ನ ರೂಮಿನ ಬಾಡಿಗೆ ಮೂರು ತಿಂಗಳ ಮುಂಗಡ ಕೊಟ್ಟೆ ಅದು ನಲವತ್ತೈದು–ಇವತ್ತು ಬೆಳಿಗ್ಗೆ ಬಟ್ಟೆ ಅಂಗಡಿಗೆ ಮುನ್ನೂರ ತೊಂಭತ್ತೇಳು ಕೊಟ್ಟೆ–ಫರ್ನೀಚರಿಗೆ ಇನ್ನೂರ ತೊಂಭತ್ತೈದು ಕೊಟ್ಟೆ–ಚಿಲ್ಲರೆ ಖರ್ಚುಹೋಗಿ ಉಳಿದಿರುವುದು ಎಂಟು ರೂಪಾಯಿ."

"ಕೈಯಲ್ಲಿ ಹಣವಿದ್ದರೆ ಹೀಗೆ ಖರ್ಚುಮಾಡುವಿರಲ್ಲಾ.... ಇಲ್ಲದಿದ್ದಾಗ....?"

"ಇಲ್ಲದೆ ಇದ್ದರೆ ತಿಳಿದೇ ಇದೆ.... ಭವತಿ ಭಿಕ್ಷಾಂದೇಹಿ*.... ನಾನೊಂದು ಮಾತು ಕೇಳುವೆನು, ಸರಿಯಾಗಿ ಉತ್ತರ ಹೇಳುವೆಯಾ?"

" ಕೇಳಿ."

" ಇನ್ನು ಮುತ್ತಮ್ಮನ ಮನೆಗೆ ಹೋಗುವ ಚಪಲವಿಲ್ಲವೇ ?"

" ನೀವೇ ನೋಡುತ್ತಿರುವಿರಲ್ಲಾ....ನಾನು ಹೋಗಿದ್ದೇನೆಯೇ ?"

" ಈವರೆಗಿಲ್ಲ....ಇನ್ನು ಮುಂದೆ."

" ಮುಂದೆಯೂ ಇಲ್ಲ."

" ಖರ್ಚಿಗೆ ಹಣ ಸಾಲದೆ ಬಂದರೆ ?"

" ಬಂದರೆ ಬರಲಿ. ಎಲ್ಲಾ ದಿವಸಗಳೂ ಒಂದೇ ರೀತಿಯಾಗಿರಬೇಕೆಂದರೆ ಹೇಗೆ ಸಾಧ್ಯ. ನಾಲ್ಕುದಿನ ಕಷ್ಟವಾದರೂ ಚಿಂತೆಯಿಲ್ಲ."

" ನನಗೆ ವಂಚನೆಮಾಡುವುದಿಲ್ಲವೇ ?"

" ಯಾರು ?"

" ನೀನು ?"

" ಸತ್ಯವಾಗಿಯೂ ಮಾಡುವುದಿಲ್ಲ."

" ನಿಮ್ಮ ತಾಯಿ ಬಲವಂತಮಾಡಿದರೆ."

" ಆಗಲೂ ಮಾಡುವುದಿಲ್ಲ."

" ನೋಡು—ನಾನು ಬಡವ, ಶ್ರೀಮಂತನಲ್ಲ. ಆದರೆ ಮೈಮುರಿಯ ದುಡಿದು ಈ ಸಂಸಾರ ನಿರ್ವಹಿಸಬಲ್ಲೆನೆಂಬ ಧೈರ್ಯವಿದೆ. ನಾನು ಹೆಚ್ಚು ದುಡಿದರೆ ಹೆಚ್ಚು ಸಂಪಾದಿಸಬಲ್ಲೆ. ಸಂಪಾದಿಸಿದುದನ್ನು ನಿರ್ವಂಚನೆಯಿಂದ ನಿನ್ನ ಕೈಗೆ ಹಾಕುತ್ತೇನೆ. ದುಡಿಯುವುದಕ್ಕೆ ನಾನು ಅಂಜುವುದಿಲ್ಲ, ಆದರೆ ಅದಕ್ಕೆ ತಕ್ಕ ಶಕ್ತಿ ಬೇಕು."

" ಶಕ್ತಿಯೇ ?"

" ಹೌದು. ಆ ಶಕ್ತಿಯನ್ನು ನೀನು ನನಗೆ ಕೊಡಬೇಕು."

" ಹೇಗೆ ?"

" ನಿಶ್ಚಲ ಪ್ರೇಮದಿಂದ. ಈ ಹೃದಯ ಪ್ರೇಮಕ್ಕೆ ಹಾತೊರೆಯುತ್ತಿತ್ತು. ಏನೋ ಕರ್ಮಧರ್ಮ ಸಂಯೋಗದಿಂದ ನಿನ್ನ ಪರಿಚಯವಾಯಿತು. ನಿನ್ನ ನೋಡಿ – ಒಂದೇ ರಾತ್ರಿ ನಿನ್ನ ಜತೆಯಲ್ಲಿದ್ದುದೇ ನನಗೊಂದು ಅಪೂರ್ವ ಅನುಭವ. ನನ್ನ ಮನಸ್ಸನ್ನು ನೀನು ಗೆದ್ದೆ—ನನ್ನ ಬಾಳಗೆಳತಿ ಸಿಕ್ಕಿದಳೆಂದು ನಾನು ಹಿರಿ ಹಿಗ್ಗಿದೆ. ನನ್ನ ಹೃದಯ ಒಡೆಯಬೇಡ—ನನ್ನ ನಂಬಿಕೆಗೆ ದ್ರೋಹ

ಬಗೆಯಬೇಡ—ಈ ಜೀವ ಹೇಗೆ ನಿನಗೆ ಮೀಸಲಾಗಿದೆ, ಹಾಗೆ ನಿನ್ನ ಜೀವವೂ ನನಗೆ ಮೀಸಲಾಗಲಿ - ಇದೇ ನನ್ನ ಆಸೆ - ಪ್ರಾರ್ಥನೆ."

"ಅಯ್ಯೋ! ಅಷ್ಟು ದೊಡ್ಡ ಮಾತೇಕೆ ಆಡುವಿರಿ. ನೀವು ನನ್ನ ಕೇಳಿಕೊಳ್ಳಬೇಕೇ?"

"ನೋಡು ಕಮಲ, ನನ್ನ ವಿಷಯ ನಿನಗೆ ಗೊತ್ತಿಲ್ಲ. ನಮ್ಮಿಬ್ಬರ ಸ್ನೇಹ ತೀರ ಹೊಸದು. ನನ್ನ ಕೆಲಸವೆಲ್ಲಾ ಬುದ್ಧಿಯನ್ನವಲಂಬಿಸಿದ್ದು. ನನ್ನ ತಲೆ ಶಾಂತವಾಗಿದ್ದರೆ ಅದರಿಂದ ಒಳ್ಳೆಯ ಸಾಹಿತ್ಯ ಹೊರ ಬೀಳುತ್ತದೆ."

"ನಿಮ್ಮ ಪುಸ್ತಕಗಳನ್ನು ನನಗೇಕೆ ತಂದುಕೊಟ್ಟಿಲ್ಲ."

"ಓದುವೆಯಾ?"

"ಖಂಡಿತವಾಗಿ."

"ನನ್ನ 'ಪತಿತಪಾವನ' ಕಾದಂಬರಿ ನೀನು ಓದಲೇಬೇಕು."

"ಏನದು ಕಥೆ."

"ಒಬ್ಬ ವೇಶ್ಯೆಯ ಜೀವನ. ಅವಳ ಪತಿತಜೀವನವನ್ನು ಕನಿಕರದಿಂದ ನೋಡಲೆತ್ನಿಸಿದ್ದೇನೆ. ಅವಳ ವೃತ್ತಿಗೆ ಹೇಗೆ ಅವಳಲ್ಲ - ಪರಿಸ್ಥಿತಿ ಕಾರಣ ವೆಂಬುದನ್ನು ತೋರಿಸಿದ್ದೇನೆ. ಇದು ಬಹಳ ಜನರಿಗೆ ಅಪ್ರಿಯವಾಯಿತು. ನನ್ನನ್ನು ಅನೀತಿಪರ ಎಂದು ತೆಗಳಿದರು."

"ಅದರಲ್ಲಿ ನೀವು ಮಾಡಿದ ತಪ್ಪೇನು?"

"ವೇಶ್ಯೆಯೆಂದ ಕೂಡಲೆ ಅವಳು ನರರಾಕ್ಷಸಿ ಎಂದು ಭಾವಿಸಿಕೊಳ್ಳ ಬೇಕು. ಹಾಗೇ ಚಿತ್ರಿಸಬೇಕು. ನಾನು ವೇಶ್ಯೆಯನ್ನು ಮನುಷ್ಯಳಂತೆ ಕಾಣಿಸಿದ್ದೇನೆ. ಅವಳ ಸುಖದುಃಖಗಳು ಮಾನವ ಸಹಜವಾದುದೆಂದು ತೋರಿಸಿದ್ದೇನೆ. ಈ ಅಪರಾಧಕ್ಕಾಗಿ ನಾನು ಮನೆಬಿಟ್ಟು ಹೊರಬರಬೇಕಾ ಯಿತು."

"ನಿಮ್ಮ ತಂದೆ ಕೋಪಿಸಿಕೊಂಡರೇ!"

"ತಂದೆ, ಚಿಕ್ಕಮ್ಮ ಇಬ್ಬರೂ ನನ್ನನ್ನು 'ಮಹಾಪಾಪಿ' ಎಂದು ಭಾವಿಸಿದರು. ನನ್ನ ಅಂತರಂಗದ ಗೆಳೆಯನ ಪತ್ನಿಕೂಡ ನನ್ನ ಕಾದಂಬರಿ ನೋಡಿ ಅಸಮಾಧಾನಪಟ್ಟುಕೊಂಡರು."

"ಕಾದಂಬರಿ ಬರೆದುದಕ್ಕೆ ಅವರು ನಿಮ್ಮಮೇಲೆ ಅಷ್ಟು ಕೋಪ ಮಾಡಿಕೊಂಡರೆ, ಈಗೇನು ಗತಿ ?"

"ನನ್ನ ಗೆಳೆಯರು ಕೈಬಿಡುವುದಿಲ್ಲ – ನನ್ನನ್ನು ಅರ್ಥಮಾಡಿಕೊಳ್ಳುತ್ತಾರೆಂದು ನಂಬಿದ್ದೇನೆ. ಒಂದು ವೇಳೆ ಅವರೂ ನನ್ನನ್ನು ಹೊರದೂಡಿದರೆ ದೂಡಲಿ – ದೈವಚಿತ್ತಕ್ಕೆ ಯಾರು ಹೊಣೆ. ಯಾರು ನನ್ನ ಹೊರದೂಡಿದರೂ ನೀನು ಹೊರದೂಡುವುದಿಲ್ಲವಲ್ಲ."

"ಇಲ್ಲ ನನ್ನ ದೊರೆ – ನೀವು ನನಗಾಗಿ ಮಾಡಿರುವ ತ್ಯಾಗ ಹೇಗೆ ಮರೆಯಲಿ."

ಕಮಲಳ ಆ ಒಂದು ಮಾತು ಶ್ರೀನಾಥನ ಹೃದಯಕ್ಕೆ ಅಮೃತಸೇಚನೆ ಮಾಡಿದಂತಾಯಿತು.

ಹೊರಗಡೆ ಭಾಗ್ಯಮ್ಮ

"ಕಮಲ, ಊಟಕ್ಕೇಳುವುದಿಲ್ಲವೇ"

ಎಂದು ಕೇಳಿದಳು.

"ಕಮಲ, ಶ್ರೀನಾಥನನ್ನು ಊಟಕ್ಕೆಬ್ಬಿಸಿ ಕರೆದುಕೊಂಡು ಹೋದಳು.

ಮಾಡಿದ ಅಡಿಗೆ ಆರಿಹೋಗಿತ್ತು. ಅಡಿಗೆಯಲ್ಲಿದ್ದ ಕೊರತೆಯನ್ನು ಉಪಚಾರದಿಂದ ತುಂಬಲು ಭಾಗ್ಯಮ್ಮ ಯತ್ನಿಸಿದಳು. ಕಮಲನ ಜತೆ ಊಟಕ್ಕೆ ಕುಳಿತ ಶ್ರೀನಾಥನಿಗೆ ಕದನ್ನವೂ ಮೃಷ್ಟಾನ್ನವಾಯಿತು.

ಶ್ರೀನಾಥ ಕಮಲನ ಹತ್ತಿರ ಯಾವದನ್ನೂ ಮುಚ್ಚಿಡಲೆತ್ನಿಸಲಿಲ್ಲ. ಒಂದೆರಡು ವಾರಗಳಲ್ಲಿ ಅವಳಿಗೆ ತನ್ನ ಸಾಹಿತ್ಯ, ತನ್ನ ಗೆಳೆಯರು, ಅವರ ಸಂಸಾರ, ತನ್ನ ಆರ್ಥಿಕ ಪರಿಸ್ಥಿತಿಗಳೆಲ್ಲವನ್ನೂ ವಿವರವಾಗಿ ತಿಳಿಸಿದ.

ಕಮಲನ ಸಂಗದಲ್ಲಿ ಶ್ರೀನಾಥನಿಗೆ ರೂಮಿನ ನೆನಪು, ತನ್ನ ಕೆಲಸದ ನೆನಪು ಹಾರುತ್ತ ಬಂತು. ದಿವಸ ದಿವಸಗಳು ಅವಳ ಸಂಗ, ಶೃಂಗಾರದಲ್ಲಿ ಕಳೆಯಲಾರಂಭಿಸಿದ.

ಶರ್ಮ, ನೀಲಕಂಠ ಶ್ರೀನಾಥನಿಗೆ ಹುಡುಕಿ ಹುಡುಕಿ ಬೇಸತ್ತರು.

ಶರ್ಮನಿಗೆ ಬಲವಾದ ಯೋಚನೆ ಹತ್ತಿತು. ಶ್ರೀನಾಥ ಏನಾಗಿರಬಹುದು – ಎಲ್ಲಿಗೆ ಹೋಗಿರಬಹುದು ಎಂದು ವಿಚಾರ ಮಾಡಿದ. ಹೊಟೇಲಿನವನು, ನೆರೆಹೊರೆಯವರು ಯಾರೂ ಅವನಿಗೆ ಸಮಾಧಾನ ಕೊಡಲು ಸಾಧ್ಯ

ವಾಗಲಿಲ್ಲ. ಮುತ್ತಮ್ಮನ ಮನೆಗೆ ಹೋಗಿ ಕೇಳಿದ. ತನ್ನ ಮನೆಗೆ ಅವರು ಬಂದೇ ಇಲ್ಲ – ಅವತ್ತಿನಿಂದ ಎಂದು ಮುತ್ತಮ್ಮ ಹೇಳಿದಳು.

ಒಂದು ದಿನ ಮುತ್ತಮ್ಮ ರಾಮರಾಜಪ್ಪನ ಬಲವಂತಕ್ಕೆ ಕಮಲನನ್ನು ಕರೆದೊಯ್ಯಲು ಬಂದಳು. ಅವಳು ಬಂದಾಗ ಕಮಲಾ, ಶ್ರೀನಾಥ ರೂಮಿನಲ್ಲಿದ್ದರು. ಮುತ್ತಮ್ಮ ಹೊರಗೆ ತೊಟ್ಟಿಯಲ್ಲಿ ಭಾಗ್ಯಮ್ಮನೊಂದಿಗೆ ಮಾತಾಡುತ್ತ ಕುಳಿತಳು.

ಸ್ವಲ್ಪ ಹೊತ್ತು ಕಳೆದಮೇಲೆ ಮಲಗಿದ್ದು ಎದ್ದ ಶ್ರೀನಾಥ ಮುಖ ತೊಳೆಯಲು ಹೊರಗೆ ಬಂದ. ಅವನ ಮುಖ ನೋಡಿ ಮುತ್ತಮ್ಮನ ಮುಖ ನಿರ್ಜೀವವಾಯಿತು. ಒಂದೇ ಕ್ಷಣದಲ್ಲಿ ನಡೆದಿದ್ದ ವಿದ್ಯಮಾನ ಅವಳ ದೃಕ್ಪಟಲದ ಮೇಲೆ ಹೊಳೆಯಿತು. ಮುತ್ತಮ್ಮ ಕಣ್ಣು ಅರಳಿಸಿ ನೋಡಿದಳು. ಮನೆಯಲ್ಲಾಗಿದ್ದ ಮಾರ್ಪಾಟು ಅವಳ ಗಮನವನ್ನು ಸೆಳೆಯಿತು.

ಶ್ರೀನಾಥ ಬಚ್ಚಲುಮನೆಯಿಂದ ಹಿಂದಿರುಗುತ್ತಾ ಮುತ್ತಮ್ಮನನ್ನು ನೋಡಿ

"ಏನು ಮುತ್ತಮ್ಮ – ಚೆನ್ನಾಗಿದ್ದೀಯಾ ?" ಎಂದ.

"ಏನೋಪ್ಪ ಇಷ್ಟರಮಟ್ಟಿಗೆ. ಮನೆಕಡೆ ಬರಲೇ ಇಲ್ಲ."

"ಪುರಸತ್ತಾಗಲಿಲ್ಲಮ್ಮ.'

ಎಂದು ಒಳಕ್ಕೆ ಹೋಗಿಬಿಟ್ಟ. ಕಮಲನನ್ನು ಕಳುಹಿಸುವುದಕ್ಕಾಗುವುದಿಲ್ಲವೆಂದು ಭಾಗ್ಯಮ್ಮ ತಿಳಿಸಿದಳು. ಮುತ್ತಮ್ಮ ಮುಸಿಸುಗೊಂಡು ಮನೆಯ ಕಡೆ ಹೊರಟಳು.

ಶ್ರೀನಾಥ ಕಮಲನ ಮನೆಯಲ್ಲಿದ್ದ ವಿಷಯ ಶರ್ಮನ ಕಿವಿಯ ಮೇಲೆ ಬೀಳಲು ತಡವಾಗಲಿಲ್ಲ. ಅವನು ಕೂಡಲೆ ಬಂದು ನೀಲಕಂಠನಿಗೆ ತಮ್ಮ ಗೆಳೆಯನ ಪ್ರಣಯಚಾರಿತ್ರ್ಯವನ್ನು ನಿರೂಪಿಸಿದ.

ಶರ್ಮನ ವರದಿಕೇಳಿ ನೀಲಕಂಠ ಕುಸಿದು ಕುರ್ಚಿಯಮೇಲೆ ಕುಕ್ಕರಿಸಿಬಿಟ್ಟ. 'ಅಯ್ಯೋ' ಎಂದು ಮರುಗಿತು ಅವನ ಹೃದಯ.

"ಶ್ರೀನಾಥನ ಗತಿಯೇನು ಶರ್ಮ" ಎಂದು ಕೇಳಿದ.

"ಏನೆಂದು ಹೇಳಲಪ್ಪಾ. ಎಲ್ಲಾ ಪರಮಾಶ್ಚರ್ಯಕರವಾಗಿದೆ."

"ಅವನಿಗೆ ಈ ಹೀನ ಸಹವಾಸ ಮಾಡಿಸಿದವರು ಯಾರು ?"

ಶರ್ಮ ಉಗುಳುನುಂಗಿಕೊಂಡ. ಸಾವಕಾಶವಾಗಿ ಧೈರ್ಯ ತಂದುಕೊಂಡು

"ಯಾರೆಂದು ಹೇಳುವುದು. ಅವನ ಕರ್ಮ ಎಂದು ಹೇಳಬೇಕು."

"ಅವನಿಗೆ ಇಂಥ ಹವ್ಯಾಸ ಇದ್ದುದು ನನಗೆ ಗೊತ್ತಿರಲಿಲ್ಲ."

"ನನಗೆ ಗೊತ್ತಿತ್ತೇ ?"

"ಆ ರಂಭೆ ಮನೆ ಎಲ್ಲಿದೆ ಪತ್ತೆಮಾಡುವೆಯಾ ?"

"ಪತ್ತೆ ಮಾಡಿ...."

"ನಾವು ಅಲ್ಲಿಗೇ ಹೋಗಿ ಅವನನ್ನು ನೋಡಿಕೊಂಡು ಬರಬೇಕು."

"ಅದರಿಂದೇನು ಪ್ರಯೋಜನ."

"ಏನು ಪ್ರಯೋಜನ ! ನಮ್ಮ ಗೆಳೆಯ ಕಣ್ಣುಮುಂದೆ ಹಾಳಾಗ ಹೋಗುತ್ತಿದ್ದರೆ ನೋಡಿಕೊಂಡು ಕುಳಿತಿರುವುದು ನ್ಯಾಯವೇ ?"

"ಅವಳ ಮನೆ ಪತ್ತೆಮಾಡಿದೆವು - ಅಲ್ಲಿಗೆ ಹೋದೆವು – ಮುಂದೆ "

"ಇಬ್ಬರಿಗೂ ತಿಳಿಯಹೇಳುವುದು. ಅವಳು ಕಾಸು ಮುಷ್ಟಿ ಕೇಳಿದರೆ ಕೊಟ್ಟು ಶ್ರೀನಾಥನನ್ನು ಬಿಡಿಸಿಕೊಂಡು ಬರುವುದು."

"ಶುದ್ಧ ಅವ್ಯವಹಾರಿಯ ಹಾಗೆ ಮಾತನಾಡುತ್ತಿರುವೆ ಡಾಕ್ಟರ್. ಅವನು ಬುದ್ಧಿಗೆಟ್ಟು, ಅವಳಿಗೆ ಮನಸ್ಸು ಸೋತಿದ್ದರೆ ನಾವೇನು ಮಾಡುವುದಕ್ಕಾಗುತ್ತದೆ. ಇದರಿಂದ ನಮ್ಮ ಸ್ನೇಹಕ್ಕೆ ಚ್ಯುತಿ ಬರುತ್ತದೆ."

"ನಾವೇನೂ ಮಾಡುವುದಕ್ಕಾಗುವುದಿಲ್ಲವೇ ?"

"ಅವಸರಪಡುವುದು ಬೇಡ. ಶ್ರೀನಾಥನ ಮತ್ತು ಅವಳ ಸಂಬಂಧ ಯಾವ ಸ್ಥಿತಿಯಲ್ಲಿದೆ ಮೊದಲು ತಿಳಿದುಕೊಂಡು ಮುಂದಿನ ಕೆಲಸಕ್ಕೆ ಕೈಹಾಕೋಣ. ಅವನನ್ನು ಹುಡುಕಿ ಇಲ್ಲಿಗೆ ಹಿಡಿದುಕೊಂಡು ಬರುವ ಪ್ರಯತ್ನ ನಾನು ಮಾಡುತ್ತೇನೆ."

"ನಿಜ – ಇದು ದುಡುಕುವ ವಿಷಯವಲ್ಲ."

ನೀಲಕಂಠ ವಿಧಿಯಿಲ್ಲದೆ ಶರ್ಮನ ಸಲಹೆಗೆ ಒಪ್ಪಿಗೆಗೊಟ್ಟ.

ಕಬ್ಬನ್‌ಪೇಟೆಯಲ್ಲಿ ಭಾಗ್ಯಮ್ಮನ ಮನೆ ಪತ್ತೆ ಮಾಡಲು ಶರ್ಮನಿಗೆ ಕಷ್ಟವಾಗಲಿಲ್ಲ. ಕೋರ್ಟಿಗೆ ಹೋಗುವಾಗ, ಕೋರ್ಟಿನಿಂದ ಬರುವಾಗ

ಮೂರು ನಾಲ್ಕು ದಿವಸ ಅವರ ಮನೆಯ ಮುಂದೆಯೇ ಬಂದ. ಒಳಕ್ಕೆ ಹೋಗಲು ಧೈರ್ಯವಾಗಲಿಲ್ಲ.

'ನಾನು ಹೋದಾಗ ಶ್ರೀನಾಥ ಅಲ್ಲಿಯೇ ಇದ್ದರೇನು ಮಾಡುವುದು'

ಎಂದು ಯೋಚಿಸಿದ. ಶ್ರೀನಾಥ ಇಲ್ಲದ ವೇಳೆಯಲ್ಲಿ ಹೋಗಬೇಕು - ತಾಯಿ ಮಗಳಿಗೆ ಚೆನ್ನಾಗಿ ಬುದ್ಧಿ ಕಲಿಸಿ ಬರಬೇಕೆಂದು ನಿಶ್ಚಯಿಸಿದ.

ಒಂದು ದಿನ ಕೋರ್ಟಿನ ಕೆಲಸ ನಾಲ್ಕು ಗಂಟೆಗೇ ಮುಗಿಯಿತು. ಶರ್ಮ ಭಾಗ್ಯಮ್ಮನ ಮನೆಯ ಮುಂದೆ ಬಂದ. ಬಾಗಿಲು ತೆಗೆದಿತ್ತು. ಧೈರ್ಯಮಾಡಿ ಒಳಗೆ ಕಾಲಿಟ್ಟ. ಅಡಿಗೆ ಮನೆಯಲ್ಲಿದ್ದ ಭಾಗ್ಯಮ್ಮ

"ಯಾರು ?" ಎಂದಳು.

"ನಾನಮ್ಮ" ಎಂದ.

ಭಾಗ್ಯಮ್ಮ ಹೊರಗೆ ಬಂದು ನೋಡಿದಳು.

"ನೀವು ಯಾರಪ್ಪ ?" ಎಂದಳು.

ಹೊಸಧ್ವನಿ ಕೇಳಿ, ಬಚ್ಚಲು ಮನೆಯಲ್ಲಿ ಬಟ್ಟೆಗಳಿಗೆ ಸೋಪು ಹಾಕುತ್ತಿದ್ದ ಕಮಲ ಹೊರಗೆದ್ದು ಬಂದಳು. ಶರ್ಮನ ಗುರುತು ಅವಳಿಗೆ ಸಿಕ್ಕಿತು. ತಾಯಿಯ ಕಿವಿಯಲ್ಲಿ

"ಅವರ ಸ್ನೇಹಿತರು ಕಣೇ – ಶರ್ಮ ಎಂದು ಅವರ ಹೆಸರು."

ಎಂದಳು. ಶರ್ಮನಿಗೆ ಕುಳಿತುಕೊಳ್ಳಿರೆಂದು ಗೌರವವಾಗಿ ಭಾಗ್ಯಮ್ಮ ಸೂಚಿಸಿದಳು.

ತೊಟ್ಟಿಯಲ್ಲಿ ಹಾಕಿದ ಕುರ್ಚಿಯ ಮೇಲೆ ಶರ್ಮ ಕುಳಿತುಕೊಂಡು ಮನೆಯನ್ನು ಸೂಕ್ಷ್ಮವಾಗಿ ನೋಡಿದ. ರೂಮಿನ ಬಾಗಿಲು ಅರೆತೆರೆದಿತ್ತು. ಒಳಗಿದ್ದ ಮಂಚ, ಕುರ್ಚಿಗಳು ಕಣ್ಣಿಗೆ ಬಿದ್ದವು. ಮೇಜಿನ ಮೇಲೆ ಕಟ್ಟಿದ್ದ ಶ್ರೀನಾಥನ ದೊಡ್ಡ ಭಾವಚಿತ್ರ ನೋಡಿ

"ಈ ಸಂಬಂಧ ನಾನು ಊಹಿಸಿದುದಕ್ಕಿಂತಲೂ ಹೆಚ್ಚಾಗಿ ಬೆಳೆದಿದೆ"

ಎಂದುಕೊಂಡ.

ಶರ್ಮ ಹೇಗಾದರೂ ಮಾತು ಆರಂಭಿಸಬೇಕಾಗಿತ್ತು. ಭಾಗ್ಯಮ್ಮ ತುಟಿ ಪಿಟಕ್ಕೆನ್ನದೆ ಎದುರಿಗೆ ನಿಂತಿದ್ದಳು.

"ನಾನೂ ಶ್ರೀನಾಥ ತುಂಬ ಸ್ನೇಹಿತರು. ನಿನ್ನ ಮಗಳಿಗೆ ಗೊತ್ತು."

"ಹೌದ್ರಪ್ಪಾ. ಹೇಳಿದಳು."

"ಶ್ರೀನಾಥನನ್ನು ಹುಡುಕಿಕೊಂಡು ಬಂದೆ. ಇವತ್ತು ಅವನು ಬರಲಿಲ್ಲ ವೇನೋ ?"

"ಬಂದಿದ್ದರು....ಸ್ವಲ್ಪ ಹೊತ್ತಿಗೆ ಮುಂಚೆ ಹೋದರು."

"ಮನೆ ಸ್ವಂತವ್ವೇನು ?"

"ಸ್ವಂತದ್ದು ಎಲ್ಲಿಂದ ಬರಬೇಕಪ್ಪ. ಬಾಡಿಗೆಯ ಮನೆ.'

"ಎಷ್ಟು ಬಾಡಿಗೆ ?"

"ತಿಂಗಳಿಗೆ ಹನ್ನೆರಡು ರೂಪಾಯಿ."

"ಶ್ರೀನಾಥ ಚೆನ್ನಾಗಿದ್ದಾನೆಯೇ ?"

"ಚೆನ್ನಾಗಿದ್ದಾರೆ. ಯಾಕ್ರಪ್ಪಾ ..ಅವರನ್ನು ನೀವು ಈಚೆಗೆ ನೋಡ ಲಿಲ್ಲವೇ ?"

"ನಾವು ನೋಡುವುದಕ್ಕೆ ನೀವೆಲ್ಲಿ ಬಿಡುತ್ತೀರಿ. ಅವನಿಗಾದೇ ಮನೆ."

ಎಂದು ಸರಸನಾಗಿ ನುಡಿದ. ಭಾಗ್ಯಮ್ಮ ನಕ್ಕಳು.

"ಶ್ರೀನಾಥ ಯಾರು ಏನು ಎನ್ನುವುದು ಗೊತ್ತೋ ?"

"ಗೊತ್ತಿಲ್ಲದೆ ಏನಪ್ಪಾ."

"ತಾನೊಬ್ಬ ದೊಡ್ಡ ಬರಹಗಾರ ಎಂದು ಹೇಳಿದ್ದಾನೆಯೇ ?"

"ತಾವು ಬರೆದ ಕೆಲವು ಪುಸ್ತಕಗಳು ತಂದುಕೊಟ್ಟಿದ್ದಾರೆ."

"ಅದರಲ್ಲಿ 'ಪತಿತಪಾವನ' ಓದಿದೆಯಾ ?"

"ಅಮ್ಮಯ್ಯ ಓದಿ ಕಥೆ ಹೇಳಿದಳು."

"ಅವನು ಅಂಥ – ಅದಕ್ಕೂ ಚೆನ್ನಾದ ನೂರಾರು ಕಥೆ ಬರೆಯಬೇ ಕಾಗಿದೆ."

"ಬರೆಯಲಿ. ಬಹಳ ಸಂತೋಷ."

"ನೀನೂ, ನಿನ್ನ ಮಗಳೂ ಅದಕ್ಕೆ ಅವಕಾಶಕೊಡಬೇಕು."

"ನಾವೇನು ಮಾಡಬೇಕಪ್ಪಾ. ಅವರು ಬರೆಯುವುದಕ್ಕೆ ನಾವು ಅಡ್ಡಿಯಾಗುತ್ತಿದ್ದೇವೆಯೇ ?"

"ಆಗುತ್ತಿದ್ದೀರಿ – ಅದನ್ನು ಹೇಳುವುದಕ್ಕೇ ನಾನು ಇಲ್ಲಿಗೆ ಬಂದದ್ದು."

ಶರ್ಮನ ಆರೋಪಣೆ ಕೇಳಿ ಭಾಗ್ಯಮ್ಮ ಅವಾಕ್ಕಾದಳು. ಕಣ್ಣಲ್ಲಿ ಮಿಡಿದ ಹನಿ ಕಾಣಬಾರದೆಂದು ಕಮಲ ಮುಖವನ್ನತ್ತ ತಿರುಗಿಸಿದಳು.

"ಶ್ರೀನಾಥ ನಿಮಗೇನಾದರೂ ಅಪಕಾರಮಾಡಿದ್ದಾನೆಯೇ? – ಅನ್ಯಾಯ ಮಾಡಿದ್ದಾನೆಯೇ?"

"ಇದೇನಪ್ಪಾ ಹೀಗೆ ಕೇಳುತ್ತೀರಿ. ನಮಗೇಕೆ ಅವರು ಅಪಕಾರ – ಅನ್ಯಾಯ ಮಾಡುತ್ತಾರೆ."

"ಹಾಗಾದರೆ ನೀವು ಅವನಿಗೆ ಅಪಕಾರ, ಅನ್ಯಾಯ ಮಾಡಬೇಡಿ. ಅವನ ಭವಿಷ್ಯ ಹಾಳುಮಾಡಬೇಡಿ. ಸಾಹಿತ್ಯದಲ್ಲಿ ಅವನು ನಿಪುಣ – ಆದರೆ ಲೋಕ ವ್ಯವಹಾರದಲ್ಲಿ ಅವನೊಂದು ಮಗು"

"ನೀವು ಹೇಳುತ್ತಿರುವುದು ನನಗೆ ಅರ್ಥವಾಗಲಿಲ್ಲ."

"ಅರ್ಥವಾಗಿದೆ. ಆದರೆ ಅದನ್ನು ತೋರಿಸಿಕೊಳ್ಳುತ್ತಿಲ್ಲ."

"ನಾವೇನು ಮಾಡಬೇಕೆಂದು ನೀವು ಹೇಳುತ್ತಿರುವುದು."

"ಶ್ರೀನಾಥನನ್ನು ಬಿಡುಗಡೆಮಾಡಿ."

"ಅವರನ್ನು ಇಲ್ಲಿಗೆ ಕರೆದುಕೊಂಡು ಬಂದವರು ನಾವಲ್ಲ. ಅವರಾಗಿಯೇ ಬಂದರು. ನಮ್ಮ ಮನೆ ಜವಾಬ್ದಾರಿ ಹೊತ್ತರು. ಇದಕ್ಕೆ ನಾವು ಹೊಣೆಯೇ?"

"ಮನೆ ಜವಾಬ್ದಾರಿಯನ್ನೆಲ್ಲಾ ಹೊತ್ತಿದ್ದಾನೆಯೇ! ಈ ಜವಾಬ್ದಾರಿಯಿಂದ ಅವನನ್ನು ಪಾರುಮಾಡಿ. ಈ ಉಪಕಾರಕ್ಕೆ ಪ್ರತಿಯಾಗಿ ಎಷ್ಟು ಹಣ ಕೊಡಬೇಕು ತಿಳಿಸಿ."

ಎಂದ. ಭಾಗ್ಯಮ್ಮ ಕಮಲಳ ಮುಖ ನೋಡಿದಳು. ಕಮಲ ಅಲ್ಲಿ ನಿಲ್ಲದೆ ರೂಮಿಗೆ ಹೋಗಿ ಅಳುತ್ತ ಮಲಗಿದಳು.

"ನೀವು ನಮ್ಮ ಹತ್ತಿರ ಹೀಗೆ ಮಾತನಾಡುವುದು ನ್ಯಾಯವಿಲ್ಲಪ್ಪಾ. ಋಣಾನುಬಂಧಕ್ಕೆ ಯಾರು ಹೊಣೆ? ಅಮ್ಮಯ್ಯ ಅವರನ್ನು ಕಂಡರೆ ಜೀವ ಬಿಡುತ್ತಾಳೆ."

"ಬಿಡದೆ ಏನು ಮಾಡುತ್ತಾಳೆ? ಅಂಥ ಮನುಷ್ಯ ಎಲ್ಲರಿಗೂ ಹೇಗೆ ಸಿಕ್ಕಬೇಕು."

"ನಮ್ಮ ಮಗು ಬೀದಿಯಲ್ಲಿ ಬಿದ್ದಿರಲಿಲ್ಲಪ್ಪಾ."

"ಇಲ್ಲ – ಕಸದ ಕುಪ್ಪೆಯಲ್ಲಿ ಹೊರಳಾಡುತ್ತಿತ್ತು."

“ಅವರ ಸ್ನೇಹಿತರು ಎಂದು ಮರ್ಯಾದೆಕೊಟ್ಟದ್ದಕ್ಕೆ ನೀವು ಬಾಯಿಗೆ ಬಂದಂತೆ ಮಾತನಾಡುತ್ತಿರುವಿರಿ.”

“ನೀವು ಅವನನ್ನು ಬಿಡುವುದಿಲ್ಲ.”

“ಬಿಡಬೇಕಾದ ಅಗತ್ಯ ಕಂಡು ಬಂದಿಲ್ಲ.”

“ಇರಲಿ — ನೋಡಿಕೊಳ್ಳುತ್ತೇನೆ”

ಎಂದು ಕನಲಿ ಶರ್ಮ ಹೊರಟುಬಿಟ್ಟ.

ಶರ್ಮನ ಬೆದರಿಕೆಯ ಪರಿಣಾಮವನ್ನು ಕಮಲ ಅನುಭವಿಸಬೇಕಾಯಿತು. ತನ್ನ ಹೊಟ್ಟೆಯಲ್ಲಿದ್ದ ಬೆಂಕಿಯನ್ನು ಮಗಳ ಮೇಲೆ ಕಾರಿದಳು.

“ಇವತ್ತು ಆಯಪ್ಪ ಬರಲಿ — ‘ಇನ್ನು ಇಲ್ಲಿಗೆ ಬರಬೇಡಿ’ ಎಂದು ಖಡಾಖಂಡಿತವಾಗಿ ಹೇಳಿಬಿಡುತ್ತೇನೆ”

ಎಂದಳು. ಕಮಲ ತಾಯಿಯ ಪಾದದಮೇಲೆ ಬಿದ್ದು

“ಹಾಗೆ ಮಾಡಬೇಡವೇ ಅಮ್ಮ. ಅವರ ಮನಸ್ಸು ನೋಯಿಸುವುದು ನಮಗೆ ಧರ್ಮವಲ್ಲ. ನನಗಾಗಿ ಅವರು ಜೀವ ತೇಯುತ್ತಿದ್ದಾರೆ.”

“ಅವರಪ್ಪನಂಥವನನ್ನು ನಾನು ಕರೆದುಕೊಂಡು ಬರಬಲ್ಲೆ.”

“ಅವರನ್ನು ನೀನು ಏನಾದರೂ ಅಂದರೆ ನಾನು ಕೂಡಲೆ ಮನೆ ಬಿಟ್ಟು ಹೋಗುತ್ತೇನೆ. ಈ ವಿಷಯ ನೀನು ಅವರ ಹತ್ತಿರ ಪ್ರಸ್ತಾಪಿಸಕೂಡದು. ನಾನು ಎಲ್ಲಾ ತಿಳಿಸುತ್ತೇನೆ”

ಎಂದು ಖಂಡಿತವಾಗಿ ಹೇಳಿದಳು.

ಮಗಳಿಗೆ ಹಿಡಿಶಾಪ ಹಾಕುತ್ತಾ ಭಾಗ್ಯಮ್ಮ ಮನೆಬಿಟ್ಟು ಹೋದಳು.

ಶ್ರೀನಾಥ ಸಂಜೆ ಏಳುಗಂಟೆ ಹೊತ್ತಿಗೆ ಬಂದ. ಮನೆ ಏಕೋ ‘ಬಿಕೋ’ ಎನ್ನುತ್ತಿತ್ತು. ತೊಟ್ಟಿಯ ದೀಪ ಕೂಡ ಹಚ್ಚಿರಲಿಲ್ಲ. ನೇರವಾಗಿ ರೂಮು ಪ್ರವೇಶಿಸಿದ. ಅಳುತ್ತ ಮಲಗಿದ್ದ ಕಮಲ ಎದ್ದು ಮುಖತೊಳೆದುಕೊಂಡು ಬರುವುದಕ್ಕೆ ಹೋದಳು.

ಶ್ರೀನಾಥನಿಗೆ ಒಂದೂ ಅರ್ಥವಾಗಲಿಲ್ಲ. ಕಮಲ ಮುಖತೊಳೆದುಕೊಂಡು, ತಲೆಬಾಚಿ, ಹಣೆಗೆ ಕುಂಕುಮವಿಟ್ಟುಕೊಂಡು ಬಂದಳು.

“ಅಮ್ಮ ಎಲ್ಲಿ” ಎಂದು ಕೇಳಿದ.

“ಎಲ್ಲಿ ಹಾಳಾಗಿ ಹೋದಳೋ.”

" ಏಕೆ – ಬಹಳ ಕೋಪಮಾಡಿಕೊಂಡಿರುವ ಹಾಗಿದೆಯಲ್ಲಾ. ಅತ್ತು ಅತ್ತು ನಿನ್ನ ಕಣ್ಣಾಗಿರುವುದು ನೋಡು. ಏನಾಯ್ತು, ಅಮ್ಮನಿಗೂ ನಿನಗೂ ಜಗಳವಾಯಿತೇ ?"

ಕಣ್ಣೀರೇ ಕಮಲನ ಉತ್ತರವಾಯಿತು.

" ಅಳುವುದೇಕೆ ? ಹೇಳು – ಏನಾಯಿತು ?"

ಕಮಲು ಸಮಾಧಾನಮಾಡಿಕೊಳ್ಳುವುದಕ್ಕೆ ಶ್ರೀನಾಥ ಸ್ವಲ್ಪ ಅವಕಾಶ ಕೊಡಬೇಕಾಯಿತು. ಅವಳನ್ನು ನೇವರಿಸಿ ಪ್ರೇಮೋಕ್ತಿಗಳನ್ನಾಡಬೇಕಾಯಿತು. ಕಮಲು ಸಮಾಧಾನ ತಂದುಕೊಂಡು

" ನಿಮ್ಮ ಸ್ನೇಹಿತರು ಶರ್ಮ ಬಂದಿದ್ದರು

ಶ್ರೀನಾಥ ಗಾಬರಿಯಾಗಿ

" ಇಲ್ಲಿಗೆ ಬಂದಿದ್ದನೇ ?"

" ಹೂ !"

" ಏನು ಹೇಳಿದ ?"

" ನಾನು ನಿಮ್ಮನ್ನು ಬಿಟ್ಟುಬಿಡಬೇಕೆಂದು ಹೇಳಿದರು. ಅದಕ್ಕೆ ಪ್ರತಿಯಾಗಿ ಹಣ ಕೊಡುತ್ತೇನೆಂದರು. ಅಮ್ಮನಿಗೂ ಅವರಿಗೂ ಬಿಸಿ ಬಿಸಿ ಮಾತಾಯಿತು. ಅಮ್ಮ ಕೋಪಮಾಡಿಕೊಂಡು ಹೋದಳು."

" ನನ್ನ ವ್ಯವಹಾರದಲ್ಲಿ ಕೈಹಾಕುವ ಅಧಿಕಾರ ನಾನು ಯಾವ ಸ್ನೇಹಿತನಿಗೂ ಕೊಟ್ಟಿಲ್ಲ."

" ಮರೆ – ಇದರಿಂದ ನಿಮಗೆ ವೃಥಾ ಹಿಂಸೆ – ತೊಂದರೆ – ಆಕ್ಷೇಪಣೆ."

" ಅದಕ್ಕೇನು ಮಾಡಬೇಕೆನ್ನುವೆ ?"

" ನನ್ನ ಹಂಬಲು ಬಿಟ್ಟುಬಿಡಿ."

" ನನ್ನ ಸ್ನೇಹ ನಿನಗೀಗಲೇ ಬೇಸರವಾಯಿತೇ ?"

" ನೋಡಿದಿರಾ – ನಾನು ಒಂದು ಹೇಳಿದರೆ ನೀವು ಬೇರೆ ಅರ್ಥ ಕೊಳ್ಳುವಿರಿ. ಈ ಜನ್ಮವಿರುವವರೆಗೆ ನಿಮ್ಮ ಸ್ನೇಹ ಬೇಸರವಾಗುವುದಿಲ್ಲ."

" ಬಿಟ್ಟುಬಿಡುವ ಮಾತಾಡಬೇಡ."

" ನಿಮ್ಮ ಸ್ನೇಹಿತರು ಏನನ್ನುತ್ತಾರೆ."

"ಅವರಿಗೆ ಸಂಬಂಧಪಡುವ ವಿಷಯವಲ್ಲ ಇದು – ಈ ಮಾತಿಗೆ ಬರಬೇಡಿರೆಂದು ನಾನು ಅವರಿಗೆ ಹೇಳುತ್ತೇನೆ."

"ನನಗಾಗಿ ಅವರ ಜತೆ ವ್ಯಾಜ್ಯಕಾಯುವಿರಾ ?"

"ನಿನಗಾಗಿ ಇಡೀ ಪ್ರಪಂಚದ ಜತೆ ವ್ಯಾಜ್ಯಕಾಯುವುದಕ್ಕೆ ಸಿದ್ಧನಾಗಿದ್ದೇನೆ."

"ಅಂಥ ಪ್ರೀತಿ, ತ್ಯಾಗಕ್ಕೆ ನಾನು ಅರ್ಹಳಲ್ಲ. ನಾನು ಎಷ್ಟೇ ಆದರೂ ಬೀದಿಯ.... ."

ಶ್ರೀನಾಥ ಅವಳ ಬಾಯಿ ಮುಚ್ಚಿದ.

"ಬೀದಿಯ ಸುದ್ದಿಯೆತ್ತಬೇಡ. ಅದು ಒಂದು ಜನ್ಮ....ಹಳೆಯ ಜನ್ಮ....ಕಳೆದುಹೋಯಿತು. ಯಾರೋ ಮಾಡಿದ ಅಪರಾಧಕ್ಕೆ ನೀನು ಶಿಕ್ಷೆ ಅನುಭವಿಸಿದೆ. ಆದರೆ ನನ್ನ ಕಣ್ಣಿಗೆ ನೀನು ಅಪರಾಧಿಯಲ್ಲ – ಪಾಪಿಯಲ್ಲ. ನನ್ನ ಹೃದಯದಲ್ಲಿ ಇಂಥ ಪ್ರೇಮವನ್ನು ಹುಟ್ಟಿಸುವ ಜೀವ ಪಾಪಿಜೀವವಲ್ಲ. ನನ್ನ ಕಣ್ಣಿಗೆ ಯಾರೂ ಪಾಪಿಗಳಲ್ಲ. ನಾನು ಈ ಮಾತು ಹೇಳಿದರೆ 'ಇವನೊಬ್ಬ ದೊಡ್ಡ ಯೇಸುಕ್ರಿಸ್ತ' ಎಂದು ಜನ ಅಪಹಾಸ್ಯಮಾಡಬಹುದು. ನಾನು ಯೇಸುವಲ್ಲ – ಆ ಮಹಾಪುರುಷನ ಪಾದ ತೊಳೆದ ನೀರು ಕುಡಿಯುವುದಕ್ಕೂ ಅರ್ಹನಲ್ಲ. ಆದರೆ ನನ್ನ ಹೃದಯ ಯೇಸುವಿನ ಅಮೃತವಾಣಿಗೆ ಮಿಡಿಯುತ್ತದೆ. ದಯೆ – ಕರುಣೆಯೇ ಸತ್ಯ, ಉಳಿದುದೆಲ್ಲಾ ಅಸತ್ಯ ಎಂದು ನನಗನಿಸಿದೆ. ನನ್ನ ಹೃದಯ ನಿನಗಾಗಿ – ನಿನ್ನಂಥವರಿಗಾಗಿ ಮರುಗುತ್ತದೆ. ಎಲ್ಲರ ಉದ್ಧಾರ ಮಾಡುವುದು ನನ್ನಿಂದ ಸಾಧ್ಯವಿಲ್ಲ. ನಿನ್ನೊಬ್ಬಳನ್ನು ಈ ಪಾಪದ ಕೆಸರಿನಿಂದ ಮೇಲಕ್ಕೆತ್ತಬಲ್ಲೆನಾದರೆ – ನಿನ್ನೊಬ್ಬಳ ಜೀವನ ತಿದ್ದಿ ಅದನ್ನು ಋಜುಮಾರ್ಗದಲ್ಲಿ ನಡೆಸಬಲ್ಲೆನಾದರೆ ನಾನು ಧನ್ಯ."

"ಕೆಸರಿನಲ್ಲಿ ಕಾಲಿಟ್ಟರೆ ನಿಮ್ಮ ಕಾಲೂ ಕೆಸರಾಗುತ್ತದೆ."

"ಪದ್ಮಪುಷ್ಪ ಬೆಳೆಯುವುದು ಕೆಸರಿನಲ್ಲಿಯೇ ? ಪಾಪಿಗಳ ಸಂಗದಲ್ಲಿದ್ದವನು ಪಾಪಿಯಾಗುವ ಹಾಗಿದ್ದರೆ ಅವನ ಪುಣ್ಯಕ್ಕೆ ಬೆಲೆಯೆಲ್ಲಿ ? ಪಾಪಿಗಳ ಜತೆಯಲ್ಲಿದ್ದೂ ಪಾಪಿಯಾಗದೆ, ಕೋಪಿಗಳ ಜತೆಯಲ್ಲಿದ್ದೂ ಕೋಪಿಯಾಗದೆ ಇರುವವನಲ್ಲವೇ ಪುಣ್ಯಾತ್ಮ. ಪಾಪ – ಪುಣ್ಯವೆಂದರೇನು ? ಮಾಂಸ

ತಿನ್ನುವವನು ನಮ್ಮಲ್ಲಿ ಪಾಪಿ, ಯೂರೋಪಿನಲ್ಲಿ? ಮಾಂಸ ತಿನ್ನದೆ ನಾವು ಬದುಕಬಹುದು, ಯೂರೋಪಿನಲ್ಲಿ ಬದುಕಲು ಸಾಧ್ಯವೇ?"

"ನಿಮ್ಮ ಮಾತಿಗೆ ನಾನೇನು ಉತ್ತರ ಹೇಳಲಿ. ನಾನು ಕಲಿತವಳಲ್ಲ. ಮೂರ್ಖ ಹುಡುಗಿ."

"ಕಮಲಾ, ಪುನಃಪುನಃ ಅದೇ ಪ್ರಶ್ನೆ ಕೇಳುತ್ತಿರುವೆನೆಂದು ಬೇಸರ ಪಟ್ಟುಕೊಳ್ಳಬೇಡ – ನೀನು ನನಗೆ ದ್ರೋಹ ಬಗೆಯುವುದಿಲ್ಲವಷ್ಟೇ?"

"ನಿಮ್ಮ ಆಣೆಗೂ ಬಗೆಯುವುದಿಲ್ಲ"

ಎಂದಳು.

ಹೊರಗಡೆ ಯಾರೋ ಭಾಗ್ಯಮ್ಮನನ್ನು ಕೂಗಿದಂತಾಯಿತು. ಕಮಲ ಎದ್ದು ಹೋದಳು. ಅವರೊಂದಿಗೆ ಮಾತನಾಡುತ್ತಿರುವಂತೆ ಭಾಗ್ಯಮ್ಮ ಒಳಕ್ಕೆ ಬಂದಳು. ಅಭ್ಯಾಗತರನ್ನು ತಾಯಿಗೆ ಒಪ್ಪಿಸಿ ಕಮಲ ಒಳಕ್ಕೆ ಬಂದಳು.

"ಯಾರದು?"

"ಪಾಪಕ್ಕ, ಅಮ್ಮನನ್ನು ಹುಡುಕಿಕೊಂಡು ಬಂದಿದ್ದಳು."

"ಅಮ್ಮ ಬಂದ ಹಾಗಿತ್ತು."

"ಹೂ! ಇದೇ ಬಂದಳು."

"ಪಾಪಕ್ಕ ಯಾರು?"

"ಇಲ್ಲೇ ಹತ್ತಿರ ಇದ್ದಾಳೆ. ನಮಗೆ ತುಂಬ ಬೇಕಾದವಳು."

"ಸಂಸಾರಸ್ಥಳೇನು?

"ಹೂ! ಅವಳದು ದೊಡ್ಡ ಸಂಸಾರ."

"ಇಷ್ಟು ಹೊತ್ತಿನಲ್ಲೇನು ಕೆಲಸ."

"ಮನೆಗೆ ಯಾರೋ ಬಂದಿದ್ದಾರಂತೆ. ಎರಡು ರೂಪಾಯಿ ಬೇಕೆಂದು ಬಂದಿದ್ದಳು."

ಶ್ರೀನಾಥ ಕುಳಿತಕಡೆಯೇ ಸ್ವಲ್ಪ ಪಕ್ಕಕ್ಕೆ ಜರುಗಿ ಬಾಗಿಲುಸಂದಿಯಲ್ಲಿ ಪಾಪಕ್ಕನ ಮುಖ ನೋಡಿದ.

ಪಾಪಕ್ಕ ಹೋದಮೇಲೆ ಕಮಲ ಎದ್ದುಹೋಗಿ ತಾಯಿಗೆ

"ನೀನು ರಾಮಾಯಣ ಮಾಡಬೇಡಮ್ಮ. ನಾನೆಲ್ಲಾ ಹೇಳಿದ್ದೀನಿ. ಸ್ನೇಹಿತರಿಗೆ ತಿಳಿಸುವುದಾಗಿ ಅವರು ಹೇಳಿದ್ದಾರೆ"

ಎಂದಳು. ಭಾಗ್ಯಮ್ಮ ಮುಸಿಮುಸಿ ಎಂದುಕೊಂಡು ಹಾಸಿಗೆ ಹಾಸಿ ಮಲಗಿದಳು.

"ಅಮ್ಮ ಮಲಗಿಬಿಟ್ಟಳಲ್ಲಾ. ಊಟ ಬೇಡವೇ?"

"ಹೊರಗೆ ಹೋಗಿದ್ದಳು. ಪಟ್ಟಾಗಿ ಬಿರಿಯಾನಿ ಹೊಡೆದು ಬಂದಿರುತ್ತಾಳೆ."

"ಅವಳಿಗೂ ಅದೂ ಚಟವಿದೆಯೇ?

"ಕುಡಿಯುವ ಚಟವೂ ಇತ್ತು. ಈಗೀಗ ಎಡೆಗಾಗುವುದಿಲ್ಲವೆಂದು ನಿಲ್ಲಿಸಿದ್ದಾಳೆ."

"ನೀನು ಬಿರಿಯಾನಿ ತಿನ್ನುವುದಿಲ್ಲವೇ?"

"ನನಗೆ. ಅದರ ವಾಸನೆಯೇ ಆಗದು. ಅದಕ್ಕೇ ಅಮ್ಮ ಮನೆಯಲ್ಲಿ ಮಾಡುವುದಕ್ಕೂ ನಾನು ಅವಕಾಶಕೊಡುವುದಿಲ್ಲ. ತಿನ್ನಬೇಕೆನಿಸಿದಾಗ ಅವಳು ಹೊರಗೆ ಹೋಗಿ ಮಿಲ್ಟ್ರೀ ಹೋಟಲಿನಲ್ಲಿ ತಿಂದು ಬರುತ್ತಾಳೆ."

ಮನೆತನದ ಸತ್ಯಸಂಗತಿ ಹೇಳಿದುದಕ್ಕೆ ಶ್ರೀನಾಥನಿಗೆ ಕಮಲಿನಲ್ಲಿ ವಿಶ್ವಾಸ, ಗೌರವ ಇಮ್ಮಡಿಸಿದವು.

ಶ್ರೀನಾಥನನ್ನು ಕಾಣಲು ಅವನ ರೂಮಿಗೆ ತೀರ್ಥಯಾತ್ರೆ ಮಾಡಿ ಮಾಡಿ ನೀಲಕಂಠ ಬೇಸತ್ತ. ಕಮಲಿನ ಸಂಸಾರ ಶ್ರೀನಾಥ ಕಟ್ಟಿಕೊಂಡಿರುವ ಕಥೆ ಶರ್ಮನಿಂದ ಕೇಳಿದ ಮೇಲಂತೂ ನೀಲಕಂಠ ತುಂಬ ಅಸ್ತವ್ಯಸ್ತನಾದ. ತಾನು ಹೇಗಾದರೂ ಮಾಡಿ ಶ್ರೀನಾಥನನ್ನು ಕರೆದುಕೊಂಡು ಬರುವಂತೆ ಶರ್ಮ ಮಾತುಗೊಟ್ಟ.

ಒಂದು ದಿನ ನಾಲ್ಕರಿಂದ ಶರ್ಮ ಕಮಲಿನ ಮನೆಯ ಹತ್ತಿರ ಪಹರೆ ಸುತ್ತಲಾರಂಭಿಸಿದ. ಐದೂವರೆ ವೇಳೆಗೆ ಶ್ರೀನಾಥ ಮನೆಬಿಟ್ಟು ಹೊರಟುದನ್ನು ಕಂಡ. ಅವನು ಹೊರಟ ಹಾದಿ ನೋಡಿಕೊಂಡು, ಬೈಸಿಕಲ್ ಹತ್ತಿ ಬಳಸಿಕೊಂಡು ಅವನ ಎದುರಿಗೆ ಬಂದ. ನರಸಿಂಹರಾಜಾ ರಸ್ತೆಯಲ್ಲಿ ಇಬ್ಬರೂ ಸಂಧಿಸಿದರು.

ಶರ್ಮ ಆಪೇ ಶ್ರೀನಾಥನನ್ನು ಕಂಡವನಂತೆ ಲೋಕಾಭಿರಾಮವಾಗಿ "ಇದೇನಯ್ಯಾ — ಹೀಗೆ ಹೊರಟೆ?" ಎಂದು ಕೇಳಿದ.

ಶರ್ಮನನ್ನು ನೋಡಿ ಶ್ರೀನಾಥನ ಮುಖ ಹುಳಿಹುಳಿಯಾಯಿತು.

"ನೀನೆಲ್ಲಿಗೆ ಹೊರಟಿದ್ದೆ ಶರ್ಮ."

"ಸುಮ್ಮನೆ – ಪಾರ್ಕ್ ಕಡೆ ಹೊರಟಿದ್ದೆ. ಕೆಲಸವೇನೂ ಇರಲಿಲ್ಲ"

ಎಂದು ಬೈಸಿಕಲ್ ತಿರುಗಿಸಿ ಶ್ರೀನಾಥನ ಜತೆ ಮಾತನಾಡಿಕೊಂಡು ಹೊರಟ.

ಇಬ್ಬರೂ ಮಾರ್ಕೆಟ್ ಚೌಕಕ್ಕೆ ಬಂದರು. ಶರ್ಮ ಮೆಲ್ಲನೆ

"ಆಸ್ಪತ್ರೆಯಲ್ಲಿ ಡಾಕ್ಟರು ಸಿಕ್ಕಬಹುದು. ನೋಡಿಕೊಂಡು ಹೋಗೋಣ"

ಎಂದು ಹೇಳಿದ. ಬೇಡವೆನ್ನಲು ಶ್ರೀನಾಥನಿಗೆ ಸಾಧ್ಯವಾಗಲಿಲ್ಲ. ಗೆಳೆಯರು ಬಂದುದನ್ನು ನೋಡಿ ಡಾಕ್ಟರು ಅರ್ಧ ಗಂಟೆಯಲ್ಲಿ ಪುರಸತ್ತು ಮಾಡಿಕೊಂಡು ಕೋಟು ಹಾಕಿಕೊಂಡು ಬಂದು

"ಊರಿನಲ್ಲಿಯೇ ಇದ್ದೀಯಾ ಶ್ರೀನಾಥ್" ಎಂದು ಕೇಳಿದ.

"ಊರಿನಲ್ಲಿರದೆ ಎಲ್ಲಿಗೆ ಹೋಗಲಿ?"

"ಯಾವಾಗ ಬಂದರೂ ಸಿಕ್ಕಲಿಲ್ಲ. ನೀನೂ ಮನೆಯ ಹತ್ತಿರ ಬರಲಿಲ್ಲ."

"ಎಲ್ಲಿಗೆ ಹೋಗೋಣ ಡಾಕ್ಟರ"

ಎಂದು ಶರ್ಮ ಕೇಳಿದ.

"ಶ್ರೀನಾಥನ ರೂಮಿಗೇ ಹೋಗಿ ಕುಳಿತುಕೊಳ್ಳೋಣ"

ಅವನ ಸಲಹೆ ಶ್ರೀನಾಥನಿಗೆ ನುಂಗಲಾರದ ತುತ್ತಾಯಿತು. ಮರು ಮಾತಾಡಲು ಸಾಧ್ಯವಾಗಲಿಲ್ಲ. ಅವರ ಜತೆ ತನ್ನ ರೂಮಿನ ಕಡೆ ನಡೆದ. ದಾರಿಯಲ್ಲಿಯೇ ಇದ್ದ ತನ್ನ ಹೋಟೇಲಿನವನಿಗೆ ರೂಮಿಗೆ ಕಾಫಿ ತಿಂಡಿ ಕಳಿಸುವಂತೆ ಹೇಳಿ, ಗೆಳೆಯರನ್ನು ರೂಮಿಗೆ ಕರೆದುಕೊಂಡು ಹೋದ.

ಶ್ರೀನಾಥ ರೂಮು ಬಾಗಿಲು ತೆಗೆದೊಡನೆಯೇ ಗೆಳೆಯರಿಬ್ಬರ ಕಣ್ಣುಗಳನ್ನು ಗೋಡೆಯ ಮೇಲಿದ್ದ ಕಮಲನ ಭಾವಚಿತ್ರ ಕುಕ್ಕಿತು. ಯಾರೂ ಮಾತನಾಡಲಿಲ್ಲ.

ಅವರು ಕುಳಿತು ಒಂದು ಸಿಗರೇಟ್ ಪೂರೈಸುವಷ್ಟರಲ್ಲಿ ಮಾಣಿ ಕಾಫಿ, ತಿಂಡಿ ತಂದಿತ್ತ. ಉಪಾಹಾರ ಮುಗಿಸಿ ಮಾಣಿಯ ಜತೆಯಲ್ಲಿಯೇ ತಟ್ಟೆ, ಬಟ್ಟಲು ಕಳುಹಿಸಿ ಕುಳಿತರು. ಜೇಬಿನಿಂದ ಒಂದು ಪ್ಯಾಕ್ ಸಿಗರೇಟ್-ಕಡ್ಡಿಯ ಪೊಟ್ಟಣ ತೆಗೆದು ಡಾಕ್ಟರು ಮುಂದಿಟ್ಟ.

“ ಏನು ಸಮಾಚಾರ ಶ್ರೀನಾಥ್ ” ಎಂದು ಡಾಕ್ಟರು ಕೇಳಿದ.

“ ಸಮಾಚಾರ ನಿನಗೆ ಗೊತ್ತೇ ಇದೆಯಲ್ಲ. ಶರ್ಮ ಎಲ್ಲ ಹೇಳಿಯೇ ಇದ್ದಾನೆ.”

“ ಹೇಳಿದ್ದಾನೆ. ನೀನೇನು ಹೇಳುತ್ತೀಯೋ ಕೇಳಬೇಕಾಗಿದೆ ”

“ ಇದೇನು ನನ್ನ ವಿಚಾರಣೆಯೇ ?”

“ ಹಾಗೇ ತಿಳಿದುಕೋ. ವಿಚಾರಣೆ ಮಾಡುವ ಹಕ್ಕು ನಮಗಿದೆಯೋ ಇಲ್ಲವೋ ?”

“ ನಿರ್ಣಯ ಮೊದಲೇ ಮಾಡಿಕೊಂಡು ವಿಚಾರಣೆ ಮಾಡುವ ಹಕ್ಕಿಲ್ಲ.”

“ ನಾವು ನಿರ್ಣಯ ಮಾಡಿದ್ದೇವೆಂದು ನೀನು ಹೇಗೆ ಹೇಳುವೆ ?”

“ ಶರ್ಮ ಅಲ್ಲಿಗೆ ಬಂದು ಮಾಡಿದ ಸಂಧಾನದಿಂದ.. ”

“ ಅವನು ಬರಬಾರದಾಗಿತ್ತೇ ?”

“ ಬಂದದ್ದು ತಪ್ಪಲ್ಲ. ಆದರೆ ನಮ್ಮನಮ್ಮಲ್ಲಿ ವೈಮನಸ್ಯ ತಂದು ಹಾಕುವ ಪ್ರಯತ್ನ ಮಾಡಬಾರದಾಗಿತ್ತು.”

“ ಗೆಳೆಯರಿಗಿಂತ ನಿನಗೊಬ್ಬಳು ಬೀದಿ ಹೆಂಗಸು ಹೆಚ್ಚಾಯಿತೇ ಶ್ರೀನಾಥ ”

ಎಂದು ಶರ್ಮ ಸ್ವಲ್ಪ ಕೋಪದಿಂದ ಕೇಳಿದ.

“ ಅವಳೀಗ ಬೀದಿಯ ಹೆಂಗಸಲ್ಲ.”

“ ಇನ್ನೇನು ?”

“ ನಾನು ಕೈಹಿಡಿದಿರುವ ಹೆಣ್ಣು.”

“ ನೀನು ಸರ್ಪವನ್ನು ಕೈಯಲ್ಲಿ ಹಿಡಿದಿರುವೆ.”

“ ಇರಬಹುದು. ಹಾವಾಡಿಗನೂ ಸರ್ಪವನ್ನೇ ಕೈಯಲ್ಲಿ ಹಿಡಿದಿರುತ್ತಾನೆ.”

“ ಚಮತ್ಕಾರದ ಮಾತು ಸಾಕು ಶ್ರೀನಾಥ್. ಈ ಸಹವಾಸ ನಿನಗೆ ತಕ್ಕುದಲ್ಲ. ನಿನ್ನ ಯೋಗ್ಯತೆಯನ್ನು ಹೀಗೆ ತಿಪ್ಪೆಯ ಕಸಮಾಡಬಾರದು.”

“ ನಾನೇನು ಮಾಡಬೇಕೆಂದು ನೀನು ಹೇಳುತ್ತಿರುವುದು ?”

“ ಅವಳನ್ನು ಬಿಟ್ಟುಬಿಡು. ನೀನು ಒಪ್ಪುವ ಹುಡುಗಿ ತಂದು ಮದುವೆ

ಮಾಡುವ ಜವಾಬ್ದಾರಿ ನಿನಗಿರಲಿ. ನಿನ್ನ ಅಕ್ಕ ಆ ಮಾತು ಹಿಂದೆಯೇ ಹೇಳಿದ್ದಳು ನೆನಪಿದೆಯೇ ?"

"ಇದೆ."

"ನನ್ನ ಪ್ರಾರ್ಥನೆ ಲಾಲಿಸು. ನಾವು ನಿನ್ನ ಹಿತೈಷಿಗಳಲ್ಲವೇ ? ನೀನು ದುಃಖಿಯಾಗಿದ್ದರೆ ನಮಗೆ ಸುಖವಿರುತ್ತದೆಯೇ ?"

"ನಾನೀಗ ದುಃಖಿಯಾಗಿಲ್ಲ. ತುಂಬಾ ಸುಖಿಯಾಗಿದ್ದೇನೆ."

"ಈ ಸುಖ ಎಷ್ಟೆಷ್ಟು ದಿನ ಉಳಿಯುತ್ತದೆ. ಅವಳು ತನ್ನ ಕಲಿತ ಚಾಳಿ ಬಿಡುತ್ತಾಳೆಯೇ ? ಈಗಲೂ ನಿನ್ನ ವಿಷಯದಲ್ಲಿ ಸತ್ಯವಾಗಿದ್ದಾಳೆಂದು ಹೇಗೆ ಹೇಳುವೆ ?"

"ಅವಳು ಸತ್ಯವಾಗಿದ್ದಾಳೆಂದು ನನ್ನ ಅಂತರಾತ್ಮ ಹೇಳುತ್ತಿದೆ. ಇಲ್ಲದ ಅಪನಂಬಿಕೆ ತಳೆಯಲು ನನಗೆ ಇಷ್ಟವಿಲ್ಲ."

"ಈಗಲೇ ಬಿಡುವುದು ಕಷ್ಟವಾದರೆ ಸ್ವಲ್ಪ ಕಾಲ ಕಳೆದ ಮೇಲೆ ಬಿಟ್ಟು ಬಿಡು. ಅವಳಿಗೆ ನೂರಾರು ರೂಪಾಯಿ ಬೇಕಾದರೆ ಕೊಡೋಣ."

"ನೀನು ಅವಳನ್ನು ಕಾಣೆ ಡಾಕ್ಟರ್. ಅವಳು ದುಡ್ಡಿಗೆ ಆಸೆ ಪಡುವವಳಲ್ಲ."

ಶ್ರೀನಾಥನ ಮಾತಿಗೆ ಶರ್ಮ ಗಹಗಹಿಸಿ ನಕ್ಕ.

"ಕಣ್ಣಿಲ್ಲದವರ ಮಾತು ಬೇರೆ. ಕಣ್ಣಿದ್ದೂ ಹೀಗೆ ಕುರುಡರಾಗಬಾರದು ಶ್ರೀನಾಥ. ನಾಯಿಯ ಬಾಲಕ್ಕೆ ದೆಬ್ಬೆ ಕಟ್ಟಿದರೆ ಅದರ ಡೊಂಕು ನೇರವಾದೀತೇ ?"

"ಶರ್ಮ, ನನ್ನ ಮನಸ್ಸು ನೋಯಿಸುವ ಮಾತಾಡುತ್ತಿರುವೆ."

"ಇದೆಂಥ ನೋವು ಶ್ರೀನಾಥ – ನಾಳೆ ನಿನ್ನ ಆದರ್ಶ ನಾರೀರತ್ನದ ನಿಜಸ್ವರೂಪ ಬಯಲಿಗೆ ಬಂದಾಗ ನಿನಗಾಗುವ ನೋವು ಎಂಥದು ಜ್ಞಾಪಿಸಿಕೋ...."

ಗೆಳೆಯರ ಮಾತಿನಲ್ಲಿ ಸತ್ಯವಿದೆಯೆಂದು ಶ್ರೀನಾಥನಿಗೆ ಭಾಸವಾಗಿತ್ತು. ಆದರೆ ಅವರ ಸೂಚನೆಯನ್ನು ಒಪ್ಪಿಕೊಳ್ಳಲು ಅವನು ಸಿದ್ಧನಾಗಿರಲಿಲ್ಲ. ಮನಸ್ಸು ಒಂದೇ ಸಮನಾಗಿ ಕಮಲಿನನ್ನು ಬಯಸುತ್ತಿತ್ತು. ಗೆಳೆಯರ

ವಾದಕ್ಕೆ ಮನಸ್ಸನ್ನೊಪ್ಪಿಸಲು ಯತ್ನಿಸಿದ. ಕಮಲನ ಗುಣದೋಷಗಳನ್ನು ತಾನೇ ಪೃಥಕ್ಕರಿಸಲಾರಂಭಿಸಿದ

'ಕಮಲ ವಿದ್ಯಾವತಿಯೇ ?'

'ಅಲ್ಲ.'

'ಬುದ್ಧಿವಂತಳೇ ?'

'ಅಲ್ಲ.'

'ನನ್ನ ಸತಿಯೆಂದು ಹೇಳಿಕೊಂಡರೆ ತಾಳಿಕೆಯಾಗುತ್ತದೆಯೇ ?'

'ಖಂಡಿತವಾಗಿಯೂ ಇಲ್ಲ.'

'ಸುಶೀಲಕ್ಕನ ಬಳಿಗೆ ಅವಳನ್ನು ಕರೆದುಕೊಂಡು ಹೋಗಿ – ಇವಳು ನನ್ನ ಸತಿ – ಎಂದು ಹೇಳಲು ಸಾಧ್ಯವೇ ?'

'ಛೆ ! ಎಂದಿಗೂ ಸಾಧ್ಯವಿಲ್ಲ.'

'ಉತ್ತಮ ಕುಲದಲ್ಲಿ ಬಂದವಳೇ ?'

'ಎಲ್ಲಿ ಬಂತು ? ಹೇಳಿ ಕೇಳಿ ವೇಶ್ಯೆಯರ ಹೆಣ್ಣು.'

'ತನ್ನ ಶೀಲ ಕಾಪಾಡಿಕೊಳ್ಳುವಷ್ಟು ಮನೋದಾರ್ಢ್ಯವಿದೆಯೇ ?'

'ಇದೆಯೆಂದು ಧೈರ್ಯವಾಗಿ ಹೇಳಲಾರೆ'

'ಹಾಗಾದರೆ ಏತಕ್ಕೆ ಈ ವ್ಯಾಮೋಹ ? – ಅವಳೇನು ತ್ರಿಭುವನ ...ದರಿಯೇ ?'

'ತ್ರಿಭುವನ ಸುಂದರಿಯಲ್ಲ – ಆದರೆ ಸುಂದರಿಯೆಂಬುದು ಸತ್ಯ.'

'ಅವಳಿಂದ ನಿನಗೇನು ಲಾಭವಿದೆ ಶ್ರೀನಾಥ್.'

'ಅವಳು ಮನಃಪೂರ್ವಕವಾಗಿ ತನ್ನ ದೇಹ ನನಗೆ ಒಪ್ಪಿಸುತ್ತಾಳೆ.'

'ಅಂಥ ಹೆಂಗಸರು ಈ ಲೋಕದಲ್ಲಿ ಕೋಟ್ಯಾಂತರ ಜನರಿದ್ದಾರೆ.'

'ಇರಬಹುದು – ಆದರೆ ನನ್ನ ಭಾಗ್ಯಕ್ಕೆ ಕಮಲ ಒಬ್ಬಳೇ ಇರುವುದು.'

'ನೀನು ತಿಳಿದವನು – ಜ್ಞಾನಿ, ಕೇವಲ ವಿಷಯಸುಖಕ್ಕೆ ನಿನ್ನ ಬಾಳು ಸವೆಸುವೆಯಾ ?'

'ಕಮಲ ವಿಷಯಸುಖದ ಪರಮಾವಧಿಯನ್ನು ನನಗೆ ತೋರಿದ್ದಾಳೆ. ನಾನು ಅವಳ ಜತೆ ಸಂತೋಷಪಟ್ಟಿದ್ದೇನೆ. ಇಲ್ಲವೆಂದು ಹೇಳುವುದು

ಸತ್ಯಕ್ಕೆ ಅಪಚಾರ. ಆದರೆ ಅವಳ ನನ್ನ ಸಂಬಂಧ ಕೇವಲ ಕಾಮವಾಸನೆಯಿಂದ ಕೂಡಿದ್ದಲ್ಲ.'

'ಹಾಗಾದರೆ ಮತ್ತೇನು ?'

'ಅದೇನೆಂದು ಬಿಡಿಸಿ ಹೇಳಲಾರೆ. ಅದು ಶುದ್ಧ ಬಾಂಧವ್ಯವಲ್ಲ – ಆದರೆ ಏನೋ ಒಂದು ಬಗೆಯ ಪ್ರಮತ್ತತೆ. ಅವಳನ್ನು ಕಾಣದೆ ನನ್ನ ಮನಸ್ಸು ಶಾಂತವಾಗುವುದಿಲ್ಲ, ಕಂಡರೆ ಶಾಂತವಾಗುವುದೆಂದೂ ಹೇಳಲಾರೆ – ಈ ಹೆಣ್ಣು ನನ್ನ ವಿಷಯದಲ್ಲಿ ಸತ್ಯವಾಗಿದೆಯೇ ? – ಎಂದು ಮನಸ್ಸು ಸದಾ ಸಂದೇಹಪಡುತ್ತಿರುತ್ತದೆ. ಅವಳನ್ನು ಬಿಟ್ಟು ದೂರವಿದ್ದರೆ ಅವಳೆಲ್ಲಿ ಬೇರೆ ಹವ್ಯಾಸಕ್ಕೆ ಹೋಗುತ್ತಾಳೋ ಎಂದು ನನ್ನ ಎಲ್ಲಾ ವೇಳೆಯನ್ನೂ ಅವಳ ಮನೆಯಲ್ಲಿಯೇ ಕಳೆಯುತ್ತೇನೆ. ಇದರಿಂದ ನನ್ನ ಗೆಳೆಯರಿಗೆ ನಾನು ಅಪಚಾರ ಮಾಡುತ್ತಿರುವೆ – ನನಗೇ ನಾನು ಅಪಚಾರಮಾಡಿಕೊಳ್ಳುತ್ತಿದ್ದೇನೆ – ನನ್ನ ಸಾಹಿತ್ಯ ತಪಸ್ಸಿಗೆ ಇದು ದೊಡ್ಡ ಅಡ್ಡಿ – ಉನ್ನತ ವಿಚಾರಗಳು ತುಂಬ ಬೇಕಾದ ತಲೆಯಲ್ಲಿ ಕಮಲಿನ ಶೀಲಧ್ಯಾನ ತುಂಬಿರುತ್ತದೆ.'

'ಇವೆಲ್ಲ ವಿಷಯಾಸಕ್ತಿಯ ಪ್ರತೀಕಗಳು. ಜ್ಞಾನಖಡ್ಗದಿಂದ ಈ ಮಾಯೆಯನ್ನು ತುಂಡರಿಸಲಾರೆಯಾ ?'

'ಸಾಧ್ಯವಿಲ್ಲ – ನಾನು ದುರ್ಬಲ – ನಾನು ಹೇಡಿ – ನಾನು ಅವಳ ವಿಕ್ರೀತದಾಸ.'

'ಶ್ರೀನಾಥ್ – ಕಣ್ಣುಬಿಟ್ಟು ನೋಡು – ನೀನು ಹೇಡಿಯಲ್ಲ, ದುರ್ಬಲನಲ್ಲ, ಅವಳ ವಿಕ್ರೀತದಾಸನಲ್ಲ – ನೀನೊಂದು ರಸಘಟ್ಟಿ – ನೀನು ಮಹಾ ಶಕ್ತಿಯ ಪ್ರತಿಮೆ – ನಿನ್ನ ಚೇತನದ ಅರಿವು ನಿನಗಾಗಿಲ್ಲ – ಅರಿವು ಮಾಡಿಕೋ ! – ದೌರ್ಬಲ್ಯವನ್ನು ಧೀರನಂತೆ ಹೊಡೆದೋಡಿಸು.'

'ನಿಜ ನಿಜ. ಆದರೆ ಅವಳನ್ನು ಬಿಡಲಾರೆ – ಮರೆಯಲಾರೆ'

ಗೆಳೆಯರ ಮಧ್ಯೆ ಮೌನವಾವರಿಸಿತ್ತು. ಸಿಗರೇಟ್ ಪ್ಯಾಕೆಟ್ ಖಾಲಿಯಾಗುತ್ತ ಬಂದಿತ್ತು.

ನೀಲಕಂಠ ಮನಸ್ಸು ಗಟ್ಟಿಮಾಡಿಕೊಂಡು ಕೇಳಿದ

"ಏನು ನಿನ್ನ ಕೊನೆಯ ನಿರ್ಧಾರ – ಶ್ರೀನಾಥ್."

"ಹೇಳಿದೆನಲ್ಲ. ನಾನು ಅವಳನ್ನು ಬಿಡಲಾರೆ."

ನೀಲಕಂಠ ಎದ್ದುನಿಂತ. ಶರ್ಮ ಅವನನ್ನು ಅನುಸರಿಸಿದ.

ಹೊರಡುವ ಮುನ್ನ ಶರ್ಮ ಕೇಳಿದ

"ನಿನ್ನ ಅಗತ್ಯವಾಗಿ ನೋಡಬೇಕಾದರೆ ಎಲ್ಲಿ ಕಾಣಬೇಕು."

"ಇಲ್ಲೇ....ರೂಮಿನಲ್ಲಿ"

"ರೂಮಿನಲ್ಲಿ ನೀನು ಸಿಕ್ಕುವುದಿಲ್ಲ"

ಶ್ರೀನಾಥ ಒಂದು ಕಾಗದದ ಚೂರಿನ ಮೇಲೆ ಕಬ್ಬನ್ ಪೇಟೆ ಮನೆಯ ವಿಳಾಸ ಗುರುತು ಹಾಕಿಕೊಟ್ಟು

"ಈ ವಿಳಾಸಕ್ಕೆ ಬರೆದರೆ ನಾನೇ ಬರುತ್ತೇನೆ" ಎಂದ.

ಇಬ್ಬರೂ "ಬರುತ್ತೇವೆ" ಎಂದರು. ಶ್ರೀನಾಥ 'ಒಳ್ಳೆಯದು" ಎಂದು ತಲೆಯಲ್ಲಾಡಿಸಿದ.

ಶ್ರೀನಾಥ ಬಾಗಿಲುವರೆಗೆ ಹೋಗಿ ಅವರನ್ನು ಕಳುಹಿಸಿ ಬಂದ. ದುಃಖವುಕ್ಕಿಬಂತು. ಕಣ್ಣಲ್ಲಿ ಕೋಡಿ ಹರಿಯಿತು.

"ನಾನೆಂಥ ಪಾಪಿ. ನೀಲಕಂಠನನ್ನು ನೋಯಿಸಿದೆನಲ್ಲಾ"

ಎಂದು ಮನಸ್ಸಿನಲ್ಲಿ ಮರುಗಿದ.

ನೀಲಕಂಠ, ಶರ್ಮ ಸ್ವಲ್ಪದೂರ ಜತೆಯಲ್ಲಿ ಹೋದರು. ಎದುರಿಗೆ ಬರುತ್ತಿದ್ದ ಗಾಡಿಯೊಂದನ್ನು ನಿಲ್ಲಿಸಿ ನೀಲಕಂಠ

"ಬರುವೆಯಾ ಶರ್ಮ" ಎಂದ.

"ಇಲ್ಲ. ನಾನೂ ಮನೆಗೆ ಹೋಗುತ್ತೇನೆ"

ಎಂದವನು ಹೇಳಿದ. ಡಾಕ್ಟರು ಗಾಡಿಹತ್ತಿ ನೇರವಾಗಿ ಮನೆಗೆ ಬಂದ

ಮನೆಗೆ ಬಂದ ನೀಲಕಂಠ ಹೆಂಡತಿಯನ್ನು ಮಾತಾಡಿಸಲಿಲ್ಲ. ಬಟ್ಟೆ ಗಳಚಿ, ಮನೆಯ ಉಡುಪು ಧರಿಸಿ ಒಂದು ಸಿಗರೇಟ್ ಹಚ್ಚಿಕೊಂಡ. ವೆರಾಂಡದಲ್ಲಿದ್ದ ಆರಾಮಕುರ್ಚಿಯ ಮೇಲೆ ಬಂದು ಮಲಗಿದ.

ಒಲೆಯ ಮೇಲಿದ್ದ ಹಾಲಿನ ಪಾತ್ರೆ ಕೆಳಗಿಳಿಸಿ ಸುಶೀಲಮ್ಮ ವೆರಾಂಡಕ್ಕೆ ಬಂದು ಗಂಡ ಕುಳಿತಿದ್ದ ಆರಾಮಕುರ್ಚಿಯ ಕೈಮೇಲೆ ಕುಳಿತುಕೊಂಡಳು.

ನೀಲಕಂಠನ ಮನಸ್ಸು ಚಿಂತೆಗೆ ನಿವಾಸವಾಗಿತ್ತೆಂಬುದನ್ನು ಅವನ ಮುಖ ಸಾರಿಸಾರಿ ಹೇಳುತ್ತಿತ್ತು. ಕಣ್ಣಲ್ಲಿ ಹನಿಗೂಡಿತ್ತು.

"ಏನಾಯಿತು ? ಏತಕ್ಕೆ ವ್ಯಸನಪಡುತ್ತೀರುವಿರಿ ?"

“ ಏನೂ ಇಲ್ಲ ಸುಶೀ.”

“ ಹೇಳಬಾರದೇ ?”

“ ಏನೆಂದು ಹೇಳಲಿ.”

“ ಆಸ್ಪತ್ರೆಯಲ್ಲೇನಾದರೂ ಹೆಚ್ಚು ಕಡಿಮೆಯಾಯಿತೇ ? ನಿಮ್ಮ ಪೇಷಂಟ್ಸ್ ಯಾರಿಗಾದರೂ....”

“ ಅಂಥದೇನೂ ಆಗಿಲ್ಲ.”

“ ಮತ್ತೆ....”

“ ನಿನ್ನಲ್ಲಿ ಒಂದು ವಿಷಯ ಮರೆಮಾಚಿದೆನಲ್ಲ ಎಂದು ವ್ಯಸನವಾಯಿತು.”

“ ಅದು ಅಷ್ಟು ಮಹತ್ವದ ವಿಷಯವೇ ?”

“ ಹೌದು – ಶ್ರೀನಾಥನಿಗೆ ಸಂಬಂಧಪಟ್ಟುದು.”

“ ಆರೋಗ್ಯವಾಗಿದ್ದಾರಷ್ಟೇ ?”

“ ಆರೋಗ್ಯವಾಗಿದ್ದಾನೆ.”

“ ಏನಾಯಿತು ?”

ನೀಲಕಂಠ ತಡೆದು ತಡೆದು ಅತಿದುಃಖದಿಂದ ಶ್ರೀನಾಥ ಕಮಲ ಇವರ ಕಥೆಯನ್ನು ನಿರೂಪಿಸಿದ. ಸುಶೀಲಮ್ಮನ ಕಣ್ಣುಗಳಲ್ಲಿ ಧಾರೆ ಹರಿಯಿತು. ನಿಟ್ಟುಸಿರ್ಗರೆದು

“ ಒಳ್ಳೆಯ ಜೀವ – ಅನ್ಯಾಯವಾಯಿತು.”

“ ಅವನು ಈಗ ನಮ್ಮೆಲ್ಲರನ್ನೂ ಮರೆತುಬಿಟ್ಟಿದ್ದಾನೆ.”

“ ಅವಳೇನಾದರೂ ಮಾಟ, ಮಂತ್ರ, ಔಷಧಿ ಪ್ರಯೋಗಿಸಿದ್ದಾಳೆಯೋ ?”

“ ಅಂಥದೇನೂ ಇಲ್ಲ.”

“ ಅವಳ ಮನೆ ಎಲ್ಲಿದೆ ಹೇಳಿ. ನಾನು ಹೋಗಿ ಹೇಳಿಬರುತ್ತೇನೆ. ಅವಶ್ಯಬಿದ್ದರೆ ಅವಳ ಕಾಲು ಹಿಡಿದು ಬೇಡಿಕೊಳ್ಳುತ್ತೇನೆ.”

“ ಅದರಿಂದ ಏನೂ ಪ್ರಯೋಜನವಾಗುವುದಿಲ್ಲ ಸುಶೀ. ಶರ್ಮ ಆ ಪ್ರಯತ್ನವನ್ನೂ ಮಾಡಿ ನಿಷ್ಫಲನಾದ.”

“ ಹುಲ್ಲೆ ಹೋಗಿ ಹುಲಿಯ ಕೈಗೆ ಸಿಕ್ಕಿಕೊಂಡ ಹಾಗಾಯಿತು.”

" ಅವಳನ್ನೇಕೆ ಆಕ್ಷೇಪಿಸಬೇಕು. ಶ್ರೀನಾಥನ ತಲೆಕೆಟ್ಟಿರುವಾಗ...."

" ಇದರ ಪರಿಹಾರ "

" ನನಗೆ ದಾರಿ ತೋರುವುದಿಲ್ಲ, ನಾನೇನು ಮಾಡಬೇಕು ಹೇಳು."

" ಏನು ಹೇಳಲಿ. ಏನು ಮಾಡಲು ಸಾಧ್ಯವೋ ಅದನ್ನೇ ಮಾಡಿರುವಿರಿ."

ಇಬ್ಬರ ಮನಸ್ಸೂ ದುಃಖತಪ್ತವಾಯಿತು.

ಶರ್ಮ, ನೀಲಕಂಠ ತಮ್ಮ ಗೆಳೆಯನ ರೂಮಿನ ಕಡೆ ಹೋಗುವುದನ್ನು ಬಿಟ್ಟುಬಿಟ್ಟರು. ಆದರೆ ಇಬ್ಬರ ಮನಸ್ಸಿನಿಂದ ಶ್ರೀನಾಥ – ಅವನ ಪರಿಸ್ಥಿತಿ ಅಳಿಸಿಹೋಗಲಿಲ್ಲ. ಅದಕ್ಕೇನು ಪರಿಹಾರವೆಂದು ಇಬ್ಬರೂ ಯೋಚಿಸುತ್ತಲೇ ಇದ್ದರು.

ಎರಡು ತಿಂಗಳು ಕಳೆದವು. ಶ್ರೀನಾಥನ ಹೊಸ ಕಾದಂಬರಿ ' ಕಲ್ಪವೃಕ್ಷ ' ಹೊರಬಿತ್ತು. ' ಪತಿತಪಾವನ ' ಓದಿ ಅವನನ್ನು ತೆಗಳಿದ್ದವರು ' ಕಲ್ಪವೃಕ್ಷ ' ಓದಿ ಹೊಗಳಿದರು. ಶ್ರೀನಾಥನ ಕಡುವಿರೋಧಿಗೂ ಅವನ ಪ್ರತಿಭೆಯ ಪರಿಚಯವಾಯಿತು.

ಒಂದು ದಿನ ಬೆಳಿಗ್ಗೆ ಶರ್ಮ ತನ್ನ ಕಛೇರಿಯಲ್ಲಿ ಕುಳಿತಿದ್ದ. ಅವನ ಕಕ್ಷಿಗಾರರಾದ ವೆಂಕಟಾಚಲ ಚೆಟ್ಟಿಯಾರರು ತಮ್ಮ ಮಿತ್ರರೊಬ್ಬರನ್ನು ಕರೆದುಕೊಂಡು ಬಂದು ಲಾಯರಿಗೆ ಪರಿಚಯಮಾಡಿಸಿಕೊಟ್ಟರು.

" ಚಿದಂಬರ ಚೆಟ್ಟಿಯಾರರು. ಮದರಾಸಿನಲ್ಲಿ ಪ್ರಸಿದ್ಧ ವರ್ತಕರು."

" ಬೆಂಗಳೂರಿಗೆ ಏನಾದರೂ ಕೆಲಸದ ಮೇಲೆ ಬಂದಿದ್ದಾರೆಯೇ ?"

" ಚಿದಂಬರ ಚೆಟ್ಟಿಯಾರರು ಮದರಾಸಿನಲ್ಲಿ ಒಂದು ದೊಡ್ಡ ' ಸ್ವದೇಶಿ, ಕಲಾ ಪ್ರಶರ್ದನ ' ವ್ಯವಸ್ಥೆಮಾಡುವವರಿದ್ದಾರೆ. ಅದರ ಸಂಬಂಧದಲ್ಲಿ ಇಲ್ಲಿ ಕೆಲವರನ್ನು ಕಂಡು ನೆರವು ಪಡೆಯಲು ಬಂದಿದ್ದಾರೆ "

ಎಂದು ವೆಂಕಟಾಚಲಚೆಟ್ಟಿಯಾರರು ಹೇಳಿದರು.

" ಬಹಳ ಸಂತೋಷ. ನನ್ನಿಂದ ಏನಾಗಬೇಕಾಗಿತ್ತು ? "

" ಮೈಸೂರು ಸರ್ಕಾರದ ನೆರವು ಕೋರಿದ್ದೇನೆ. ಅವರು ತಮ್ಮ ಕೈಗಾರಿಕೆಗಳ ಮಳಿಗೆಗಳನ್ನಿಡಬೇಕೆಂದು ನನ್ನ ಆಸೆ. ನಿನ್ನೆ ಚೀಫ್ ಸೆಕ್ರೆಟರಿಯವರನ್ನೂ, ಡೈರೆಕ್ಟರ್ ಆಫ್ ಇಂಡಸ್ಟ್ರೀಸ್ ಅವರನ್ನೂ ಕಂಡುಬಂದೆ.

ಆಗಲೆಂದು ಹೇಳಿದ್ದಾರೆ. ಕೆಲಸ ಸ್ವಲ್ಪ ಬೇಗ ಆಗುವಂತೆ ನೀವು ಪ್ರಯತ್ನಿಸಿದರೆ ಉಪಕಾರವಾಗುತ್ತದೆ."

"ಆಗಲಿ. ನಾನು ಪ್ರಯತ್ನಮಾಡುತ್ತೇನೆ. ಪ್ರದರ್ಶನಕ್ಕೆ ತುಂಬ ಪ್ರಚಾರ ಕೆಲಸವಾಗಬೇಕು – ಪ್ರದರ್ಶನ ಕೈಪಿಡಿಯೊಂದನ್ನು ಹೊರಡಿಸಬೇಕು."

"ಹೌದು. ವಿಚಾರವಿದೆ. ಸರಿಯಾದ ಜನ ಸಿಕ್ಕಿಲ್ಲ."

"ನಾನು ಜನಕೊಟ್ಟರೆ ನೀವು ಕೈಪಿಡಿ ಹೊರಡಿಸುವಿರಾ ?"

"ಅಗತ್ಯವಾಗಿ."

"ಅವರು ಮದರಾಸಿಗೇ ಬಂದು ಇರಬೇಕಾಗುತ್ತವೆ."

"ಮುದ್ರಣ ಅಲ್ಲಿಯೇ ಆಗಬೇಕಾಗುತ್ತದೆ."

"ನಿಮ್ಮ 'ಪ್ರದರ್ಶನ ಕೈಪಿಡಿ'ಯ ಸಂಪಾದಕರಿಗೆ ನೀವು ಎಷ್ಟು ಸಂಭಾವನೆ ಕೊಡಬಹುದು."

"ನೀವೇ ಗೊತ್ತುಮಾಡಿ."

"ಅವರ ವಾಸ – ಊಟ."

"ಹೊಟೇಲಿನಲ್ಲಿ ವ್ಯವಸ್ಥೆಮಾಡೋಣ."

"ಇದು ಸುಮಾರು ಮೂರು ತಿಂಗಳ ಕೆಲಸವಾಗಬಹುದು."

"ಮುದ್ರಣವೂ ಸೇರಿ."

"ಸಂಪಾದಕರ ಖರ್ಚು ಕಳೆದು ತಿಂಗಳಿಗೆ ೫೦೦ ರೂಪಾಯಿ ಕೊಡಬಹುದಲ್ಲವೇ ?"

"ಸ್ವಲ್ಪ ಹೆಚ್ಚಾಯಿತಲ್ಲವೇ ?"

"ಅವರು ತಮ್ಮ ಕೆಲಸಕಾರ್ಯ, ಇಲ್ಲಿನ ಸಂಪಾದನೆ ಎಲ್ಲಾ ಬಿಟ್ಟು ಬರಬೇಕಾಗುತ್ತದೆ."

"ಆಗಬಹುದು. ನೀವು ಹೇಳಿದಮೇಲೆ ಅಡ್ಡಿಯಿಲ್ಲ. ನನ್ನ ಕೆಲಸ ಇಂದು ಮಾಡುವುದಕ್ಕಾಗುತ್ತದೆಯೇ ?"

"ನಾನು ಇವತ್ತು ಸೆಕ್ರೆಟೇರಿಯಟ್ಟಿಗೆ ಹೋಗಿ ಸಂದರ್ಭತಿಳಿದು, ಎಲ್ಲಿ ಕೀಲಿ ತಿರುಗಿಸಬೇಕೋ ಅಲ್ಲಿ ತಿರುಗಿಸಿ ಬರುತ್ತೇನೆ. ನಾಳೆ ಸಂಜೆ ನಿಮ್ಮನ್ನು — ನಿಮ್ಮ 'ಪ್ರದರ್ಶನ ಕೈಪಿಡಿ' ಸಂಪಾದಕರೊಂದಿಗೆ ಭೆಟ್ಟಿಯಾಗುತ್ತೇನೆ. ಎಲ್ಲಿ ಸಿಕ್ಕುವಿರಿ ?"

"ಮಾಡರ್ನ್ ಹಿಂದೂ ಹೋಟೇಲಿನಲ್ಲಿ ಇಳಿದುಕೊಂಡಿದ್ದೇನೆ. ಹದಿನಾರನೆಯ ರೂಮು."

"ಸಂಜೆ ಆರುಗಂಟೆಗೆ ಬರಬಹುದಷ್ಟೇ?"

"ಬನ್ನಿ – ನಾನು ನಿಮಗಾಗಿ ಕಾಯುತ್ತಿರುತ್ತೇನೆ."

ತನ್ನನ್ನು ಬಂದು ನಾಳೆ ನಾಲ್ಕುಗಂಟೆಗೆ ನೋಡುವಂತೆ ಶ್ರೀನಾಥನಿಗೆ ಕೂಡಲೆ ಶರ್ಮ ಕಬ್ಬನ್‌ಪೇಟೆಯ ವಿಳಾಸಕ್ಕೆ ಒಂದು ಕಾರ್ಡು ಬರೆದ.

ಶರ್ಮ ಸೂಚಿಸಿದ್ದ ವೇಳೆಗೆ ಸರಿಯಾಗಿ ಶ್ರೀನಾಥ ಅವನ ಕಛೇರಿಯ ಬಳಿಗೆ ಬಂದ. ಕೋರ್ಟು ಮುಗಿಸಿಕೊಂಡು ಶರ್ಮ ಕಛೇರಿಗೇ ಬಂದು ಕುಳಿತು ಶ್ರೀನಾಥನ ದಾರಿ ನೋಡುತ್ತಿದ್ದ.

"ನಿನ್ನ ಕಾರ್ಡು ತಲುಪಿತು. ಏನು ವಿಶೇಷ?"

"ಚೆನ್ನಾಗಿದ್ದೀಯಾ?"

"ಹೀಗೇ ತಕ್ಕಮಟ್ಟಿಗೆ."

"'ಕಲ್ಪವೃಕ್ಷ' ತಲುಪಿತು. ಪೋಸ್ಟಿನಲ್ಲಿ ಏಕೆ ಕಳುಹಿಸಬೇಕಾಗಿತ್ತು. ನೀನೇ ಬಂದು ಕೊಟ್ಟಿದ್ದರೆ ಆಗುತ್ತಿರಲಿಲ್ಲವೇ?"

"ನಿಮ್ಮ ಕಣ್ಣಲ್ಲಿ ನಾನು ಮಹಾಪರಾಧಿ. ಏಕೆ ಬಂದು ನಿಮ್ಮನ್ನು ಬೇಸರಗೊಳಿಸಬೇಕೆಂದು ಬರಲಿಲ್ಲ."

"ಹೋಗಲಿ. ಆ ಮಾತು ಆಡಿ ಪ್ರಯೋಜನವಿಲ್ಲ. ನಾನು ಒಂದು ಕೆಲಸಕ್ಕಾಗಿ ನಿನ್ನನ್ನು ಬರಮಾಡಿಕೊಂಡಿದ್ದೇನೆ"

ಎಂದು 'ಸ್ವದೇಶಿ ವಸ್ತುಪ್ರದರ್ಶನ ಕೈಪಿಡಿ'ಯ ವಿಷಯ ಪ್ರಸ್ತಾಪಿಸಿದ.

"ನಾನು ಮದರಾಸಿಗೆ ಮೂರು ತಿಂಗಳು ಹೋಗಬೇಕಾಗುತ್ತದೆ."

"ಹೌದು."

"ಯೋಚನೆಮಾಡಿ ನಾಳೆ ತಿಳಿಸುತ್ತೇನೆ."

"ಯೋಚನೆಮಾಡುವುದಕ್ಕೆ ವ್ಯವಧಾನವಿಲ್ಲ. ಆರುಗಂಟೆಗೆ ಬಂದು ತಿಳಿಸುತ್ತೇನೆಂದು ಹೇಳಿದ್ದೇನೆ. ಆತ ಈ ರಾತ್ರಿಯೇ ಪ್ರಯಾಣ ಬೆಳಸಬಹುದು. ನಿನ್ನ ಎಲ್ಲಾ ಖರ್ಚು ನೋಡಿಕೊಂಡು ತಿಂಗಳಿಗೆ ಐದುನೂರು ರೂಪಾಯಿ ಕೊಡಲು ಒಪ್ಪಿದ್ದಾನೆ."

ಶ್ರೀನಾಥನಿಗೆ ಯೋಚನೆ ಹತ್ತಿತು. ಮೂರು ತಿಂಗಳು ಮದರಾಸಿಗೆ

ಹೋಗುವುದೆಂದರೆ ಕಮಲನನ್ನು ಬಿಟ್ಟಿರಬೇಕು. ಕೈಗೆ ಬಂದ ಅವಕಾಶವನ್ನು ಕಳೆದುಕೊಳ್ಳುವುದು ಜಾಣತನವಲ್ಲ – ಏನುಮಾಡಬೇಕೆಂದು ಅವನು ಯೋಚಿಸುತ್ತ ಕುಳಿತ.

“ ಕುಳ ತುಂಬ ಅನುಕೂಲಸ್ಥನ ಹಾಗೆ ಕಾಣುತ್ತಾನೆ. ಅವನ ಪರಿಚಯ ನಿನಗಾದರೆ ಒಳ್ಳೆಯದು. ಮುಂದೆ ಅವನೇ ನಿನಗೆ ಹತ್ತು ರೀತಿಯಲ್ಲಿ ಸಹಾಯ ಮಾಡಬಹುದು.”

ಶ್ರೀನಾಥನ ಮನಸ್ಸಿಗೆ ಶರ್ಮನ ವಾದವೈಖರಿ ತಟ್ಟಿತು.

“ ಸಾವಿರವೈನೂರು ರೂಪಾಯಿ ಯಾರಿಗುಂಟು – ಯಾರಿಗಿಲ್ಲ. ಈ ಹಣ ಮೊತ್ತವಾಗಿ ಸಿಕ್ಕಿದರೆ ಕಮಲನಿಗೇನಾದರೂ ಒಡವೆ ಮಾಡಿಸಿಕೊಡಬಹುದು. ಮೂರು ತಿಂಗಳು ಬಿಟ್ಟಿರಬೇಕು – ಚಿಂತೆಯಿಲ್ಲ. ಮಧ್ಯೆ ಒಂದೆರಡು ಸಲ ಬಂದು ಹೋದರಾಯಿತು ”

ಎಂದು ಶ್ರೀನಾಥ ಯೋಚಿಸಿಕೊಂಡು ಶರ್ಮನ ಸಲಹೆಗೆ ಒಪ್ಪಿಗೆಯಿತ್ತ. ಶರ್ಮ ಕೂಡಲೆ ಶ್ರೀನಾಥನನ್ನು ‘ ಮಾಡರ್ನ್ ಹಿಂದೂ ಹೋಟೇಲಿ ’ಗೆ ಕರೆದೊಯ್ದು ಚೆಟ್ಟಿಯಾರರ ಪರಿಚಯ ಮಾಡಿಕೊಟ್ಟು ಒಪ್ಪಂದವನ್ನು ಸ್ಥಿರ ಮಾಡಿದ.

“ ನಾನು ಮದರಾಸಿಗೆ ಯಾವಾಗ ಬರಬೇಕು ? ”

“ ಮುಂದಿನ ತಿಂಗಳು ಮೊದಲನೆಯ ತಾರೀಖಿಗೆ ಬಂದರಾಯಿತು. ಮೊದಲೇ ನೀವು ಕಾಗದ ಬರೆದರೆ ನಾನು ಎಲ್ಲ ವ್ಯವಸ್ಥೆಮಾಡಿರುತ್ತೇನೆ— ಸ್ಟೇಷನ್ನಿಗೂ ಬರುತ್ತೇನೆ. ನಿಮ್ಮ ಪ್ರಯಾಣದ ಖರ್ಚಿಗೆ ಹಣ ಕಳಿಸುತ್ತೇನೆ.”

“ ಮುಂಗಡವಾಗಿ ಸ್ವಲ್ಪ ಹಣ ಕಳಿಸಲು ಸಾಧ್ಯವೇ ? ”

“ ಎಷ್ಟು ಬೇಕಾಗಿತ್ತು ? ”

“ ಇನ್ನೂರೈವತ್ತು ರೂಪಾಯಿ.”

“ ಕಳಿಸಿಕೊಡುತ್ತೇನೆ ”

ಶ್ರೀನಾಥ ಮದರಾಸಿಗೆ ಹೊರಡಲೊಪ್ಪಿಕೊಂಡದ್ದು ಶರ್ಮನ ಮನಸ್ಸಿಗೆ ತುಂಬ ನೆಮ್ಮದಿಯನ್ನುಂಟುಮಾಡಿತು. ‘ ಮೂರು ತಿಂಗಳಲ್ಲಿ ಏನಾಗಬಾರದು. ದೈವಕೃಪೆಯಿಂದ ಈ ಹಾಳು ಸಂಬಂಧ ಕಡಿದು ಹೋದರೂ ಹೋಗಬಹುದು ’

ಎಂದು ಭಾವಿಸಿದ. ಶರ್ಮ ಮಾಡಿದ ವ್ಯವಸ್ಥೆ ಕೇಳಿ ನೀಲಕಂಠನೂ ಸಂತೋಷಪಟ್ಟ.

ಶ್ರೀನಾಥ ರಾತ್ರಿ ಮನೆಗೆ ಬಂದು ಕಮಲನಿಗೆ ಈ ವಿಷಯ ತಿಳಿಸಿದಾಗ ಅವಳ ಮುಖ ಸಪ್ಪೆಯಾಯಿತು. ಅವಳ ಕಣ್ಣುಗಳು ಹನಿಗೂಡಿದವು.

"ಮೂರು ತಿಂಗಳು ನಿಮ್ಮನ್ನು ಬಿಟ್ಟು ಹೇಗಿರಲಿ" ಎಂದಳು.

"ಮಧ್ಯೆಮಧ್ಯೆ ನಾನು ಬರುತ್ತಿರುತ್ತೇನೆ. ಮೂರು ತಿಂಗಳು ಕಾಲ ನಿನ್ನ ನೋಡದೆ ಇರುವುದಕ್ಕೆ ನನಗೆ ತಾನೇ ಸಾಧ್ಯವೇ?"

"ಈ ಕೆಲಸವೇ ಬೇಡ ದೊರೆ. ಬರುವುದಕ್ಕಾಗುವುದಿಲ್ಲವೆಂದು ತಿಳಿಸಿ ಬಿಡಿ."

"ಬರುವುದಿಲ್ಲವೆಂದು ತಿಳಿಸುವುದು ದೊಡ್ಡ ವಿಷಯವಲ್ಲ. ಆದರೆ ಹಾಗೆ ಮಾಡುವುದು ಜಾಣತನವಲ್ಲ. ಈಗ ಕೆಲವು ಕಾಲ ವಿಯೋಗವ್ಯಥೆ ಅನುಭವಿಸಬೇಕಾದರೂ ಮುಂದಕ್ಕಾದರೂ ನಮ್ಮ ಬಾಂಧವ್ಯವನ್ನು ಭದ್ರವಾದ ಅಸ್ತಿಭಾರದ ಮೇಲೆ ಇಡುವುದಕ್ಕಾಗಿಯೇ ನಾನು ಒಪ್ಪಬೇಕಾಯಿತು."

"ಹಾಗಂದರೇನು?"

"ನನ್ನ ಜೀವನದಲ್ಲಿ ಹಣ ಯಾವಾಗಲೂ ಸ್ವಾಮ್ಯವಹಿಸಲು ಸಾಧ್ಯವಿಲ್ಲ. ಹಣ ನನಗೆ ಬೇಡವೆಂದಲ್ಲ. ಸರ್ವಶಕ್ತಳಾದ ಹಣದೇವತೆಯ ಅನುಗ್ರಹವಿಲ್ಲದೆ ಜಗತ್ತಿನಲ್ಲಿ ಯಾವ ಕೆಲಸವೂ ಆಗುವುದಿಲ್ಲವೆಂಬುದನ್ನು ಬಲ್ಲೆ. ಒಳ್ಳೆಯದಕ್ಕೂ ಹಣಬೇಕು – ಕೆಟ್ಟದಕ್ಕೂ ಹಣಬೇಕು. ಆದರೆ ಅದಕ್ಕೇ ಆತ್ಮ ಮಾರಿಕೊಂಡು ಹಣ ಸಂಗ್ರಹಕ್ಕಾಗಿ ಜೀವಿತವನ್ನು ಸವೆಸಲು ನಾನು ಸಿದ್ಧನಾಗಿಲ್ಲ."

"ನಾನು ಹಣಕ್ಕಾಗಿ ಯಾವಾಗಲಾದರೂ ನಿಮ್ಮನ್ನು ಪೀಡಿಸಿರುವೆನೇ?"

"ಛೆ! ಛೆ! ನೀವು ಪೀಡಿಸಿರುವೆ ಎಂದು ನಾನು ಹೇಳಲಿಲ್ಲ. ನಿನ್ನ ಆರ್ಥಿಕದೆಸೆಯೂ ಸುಧಾರಿಸಬೇಕೆಂದು ನನ್ನ ಆಸೆ. ಹಣದ ಕೊರತೆಬಿದ್ದರೆ ನಿನ್ನ ತಾಯಿ ನಿನ್ನನ್ನು ಮತ್ತೆ ದುರ್ಮಾರ್ಗಕ್ಕೆ ಎಳೆಯುತ್ತಾಳೆ. ಅಂಥ ಪರಿಸ್ಥಿತಿ ಬರದಂತೆ ನೋಡಿಕೊಳ್ಳಬೇಕೆಂದು ನಾನು ಬಯಸುತ್ತೇನೆ."

"ನನ್ನ ತಾಯಿಯ ತೊಳ್ಳೆ ಪೂರೈಸುವುದಕ್ಕೆ ನೀವು ದೇಹ ತೇದು ತೇದು ಆತ್ಮಹತ್ಯ ಮಾಡಿಕೊಳ್ಳುವಿರಾ?"

"ಇದು ಆತ್ಮಹತ್ಯವಲ್ಲ – ಆತ್ಮೋಲ್ಲಾಸ. ನನ್ನ ದುಡಿಮೆಯಿಂದ ಒಂದು ಒಳ್ಳೆಯ ಜೀವ ಸರಿಯಾದ ಮಾರ್ಗದಲ್ಲಿ ಹೋಗಲು ಸಾಧ್ಯವಾದರೆ ಸಾಕು. ದುಡಿಮೆಗೆ ನಾನು ಅಂಜುವುದಿಲ್ಲ. ದಿನಕ್ಕೆ ಹದಿನಾರು ಗಂಟೆ ದುಡಿಯುವುದಕ್ಕೆ ಸಿದ್ಧನಾಗಿದ್ದೇನೆ. ದೇಹ ಸ್ವಲ್ಪ ದಣಿಯುತ್ತದೆ. ಆದರೆ ಮನಸ್ಸು ಪ್ರಫುಲ್ಲವಾಗಿರುತ್ತದೆ. ಮನಸ್ಸಿನ ಮೇಲೆ ಆಘಾತವಾಗದಿದ್ದ ರಾಯಿತು."

"ಆಘಾತ ನನ್ನಿಂದ ಆಗುವುದಿಲ್ಲವೆಂದು ನಾನು ಪ್ರಮಾಣಮಾಡಿ ಹೇಳುತ್ತೇನೆ."

"ನೀನು ಉದ್ದೇಶಪೂರ್ವಕವಾಗಿ ನನ್ನ ಮನಸ್ಸು ನೋಯಿಸಲೆತ್ನಿಸು ವುದಿಲ್ಲವೆಂದು ನಾನು ಬಲ್ಲೆ. ಆದರೆ ನಿನ್ನ ತಾಯಿಯ ಪ್ರಭಾವ ಏನೇನು ಮಾಡುತ್ತದೆಯೋ ?"

"ಅದನ್ನೂ ನಾನು ಎದುರಿಸುತ್ತೇನೆ."

"ಒಳ್ಳೆಯದು. ದೇವರು ನಿನಗೆ ಶಕ್ತಿ ಕೊಡಲಿ."

ಶ್ರೀನಾಥನ ಪ್ರಯಾಣಕ್ಕಿನ್ನೂ ಹತ್ತು ದಿವಸಗಳಿದ್ದವು. ಹತ್ತು ದಿವಸಗಳೂ ನಿತ್ಯ ಸಿನೀಮಾ ಯಾತ್ರೆಯಾಯಿತು.

ಚಿದಂಬರ ಚೆಟ್ಟಿಯಾರರು ತಮ್ಮ ಮಾತಿನಂತೆ ತಿಂಗಳ ಕೊನೆಗೆ ಪ್ರಯಾಣದ ಖರ್ಚು, ಶ್ರೀನಾಥ ಕೇಳಿದ ಇನ್ನೂರೈವತ್ತು ರೂಪಾಯಿ ಮುಂಗಡ ಹಣ ಕಳಿಸಿಕೊಟ್ಟರು.

ಶ್ರೀನಾಥ ಶರ್ಮನನ್ನು ಕಛೇರಿಯಲ್ಲಿ ಕಂಡು, ನೀಲಕಂಠನನ್ನು ಆಸ್ಪತ್ರೆ ಯಲ್ಲಿ ಕಂಡು ಹೋಗಿಬರುತ್ತೇನೆಂದು ತಿಳಿಸಿದ.

ಚೆಟ್ಟಿಯಾರರು ಕಳಿಸಿದ ಇನ್ನೂರೈವತ್ತು ರೂಪಾಯಿಗಳಲ್ಲಿ ಇನ್ನೂರು ರೂಪಾಯಿ ಕಮಲನ ಕೈಸೇರಿತು. ಸ್ವಂತಖರ್ಚಿಗೆ ಐವತ್ತು ರೂಪಾಯಿ ಶ್ರೀನಾಥ ಉಳಿಸಿಕೊಂಡ.

ರೂಮಿನಿಂದ ತನ್ನ ಸಾಮಾನು ತೆಗೆದುಕೊಂಡು ಸಂಜೆಗೇ ಕಮಲನ ಮನೆಗೆ ಬಂದ. ಬೆಳಿಗ್ಗೆ ಅಲ್ಲಿಂದಲೇ ಸ್ಟೇಷನ್ನಿಗೆ ಹೋಗತಕ್ಕದ್ದೆಂದು ನಿಶ್ಚಯಿಸಿದ್ದ.

ರಾತ್ರಿ ಶ್ರೀನಾಥ, ಕಮಲ ಇಬ್ಬರಿಗೂ ನಿದ್ರೆ ಹತ್ತಲಿಲ್ಲ. ಕಮಲ

ನನ್ನು ಸಂತೈಸುವಷ್ಟರಲ್ಲಿ ಬೆಳಗು ಹರಿದಿತ್ತು. ಕಮಲ ದೈನ್ಯದಿಂದ ಕೇಳಿದಳು

"ನನ್ನನ್ನೂ ಏಕೆ ಕರೆದುಕೊಂಡು ಹೋಗಬಾರದು."

"ನಾನು ಹೋಗುತ್ತಿರುವುದು ಇನ್ನೊಬ್ಬರ ಕೆಲಸದ ಮೇಲೆ. ಅವರು ನನಗಾಗಿ ಏನು ವ್ಯವಸ್ಥೆ ಮಾಡಿದ್ದಾರೋ? ಅವರ ಕೆಲಸದ ಮೇಲೆ ನಾನು ಹೋಗಿಬಿಟ್ಟರೆ ನಿಮ್ಮನ್ನು ನೋಡಿಕೊಳ್ಳುವವರು ಯಾರು? ಮತ್ತೆ ನಾನು ಬರುತ್ತೇನಲ್ಲಾ – ಆಗ ವಿಚಾರಮಾಡುವ. ಸಾಧ್ಯವಾದರೆ ನಿಮ್ಮನ್ನು ಕರೆದು ಕೊಂಡು ಹೋಗುತ್ತೇನೆ."

ಕಮಲನಿಗೆ ಸಮಾಧಾನವಾಗಲಿಲ್ಲ.

ಸ್ನಾನ – ಉಪಾಹಾರ ಮುಗಿಸಿ ಶ್ರೀನಾಥ ಸ್ಟೇಷನ್ನಿಗೆ ಹೋಗಲು ಗಾಡಿ ತಂದ. ಕಮಲ ಬಹು ದುಃಖದಿಂದ ಅವನನ್ನು ಬೀಳ್ಕೊಟ್ಟಳು.

ಟಿಕೆಟ್ ಕೊಂಡು ರೈಲ್ವೆ ಗಾಡಿಯಲ್ಲಿ ಕುಳಿತಮೇಲೂ ಶ್ರೀನಾಥ ಯೋಚಿಸಿದ

"ಈಗಲೂ ಒಂದು ತಂತಿಕೊಟ್ಟು ಬರುವುದಕ್ಕಾಗುವುದಿಲ್ಲವೆಂದು ತಿಳಿಸಿಬಿಡಲೇ?"

ಪ್ರಕ್ಷುಬ್ಧವಾಗಿದ್ದ ಮನಸ್ಸನ್ನು ಹತೋಟಿಗೆ ತಂದುಕೊಂಡು

"ಛೆ! ಇಷ್ಟು ದೌರ್ಬಲ್ಯ ತೋರಿಸಿದರೆ ನಾಳೆ ಕಮಲನೂ ನನ್ನನ್ನು ತಿರಸ್ಕರಿಸುವಂತಾಗುತ್ತದೆ"

ಎಂದುಕೊಂಡ.

ರೈಲು ಮುಂದಡಿಯಿಟ್ಟಿತು. ಶ್ರೀನಾಥನ ದೇಹ ಮಾತ್ರ ಮದರಾಸಿಗೆ ಪ್ರಯಾಣಮಾಡಿತು; ಮನಸ್ಸು ಕಬ್ಬನ್‌ಪೇಟೆಯಲ್ಲಿಯೇ ಉಳಿಯಿತು.

ಕಮಲ ಖಿನ್ನಳಾಗಿದ್ದುದನ್ನು ಕಂಡು ಭಾಗ್ಯಮ್ಮ ಅವಳನ್ನು ಸಂತೈಸ ಲೆತ್ನಿಸಿದಳು.

ಇಬ್ಬರೂ ಮಧ್ಯಾನ್ಹ ಒಂದು ಮ್ಯಾಟಿನಿ ಸಿನೀಮಾ ನೋಡಿಕೊಂಡು, ಸಂಜೆಯಾಟ ಬೇರೆ ಥಿಯೇಟರಿನಲ್ಲಿ ನೋಡಿಕೊಂಡು ಮನೆಗೆ ಬಂದರು. ಜತೆಗೆ ಪಾಚಕ್ಕನೂ ಗಂಟುಬಿದ್ದಿದ್ದಳು.

ಚಿದಂಬರ ಚೆಟ್ಟಿಯಾರರು ರೈಲ್ವೆ ಸ್ಟೇಷನ್ನಿಗೆ ಬಂದು ಶ್ರೀನಾಥನನ್ನು

ಮಿಂಟ್‌ಸ್ಟ್ರೀಟಿನಲ್ಲಿದ್ದ ತಮ್ಮ ಕಛೇರಿಗೆ ಕರೆದೊಯ್ದರು. ಕಛೇರಿಯ ಒಂದು ಭಾಗದಲ್ಲಿದ್ದ ಪ್ರತ್ಯೇಕ ಕೋಣೆಯನ್ನು ಬಿಡುವುಮಾಡಿ ಶ್ರೀನಾಥ ವಾಸಿಸಲು ಅನುಕೂಲಪಡಿಸಿದ್ದರು. ಕೋಣೆಯ ಪಕ್ಕದಲ್ಲಿಯೇ ಸ್ನಾನಗೃಹವೂ ಇತ್ತು.

ಚೆಟ್ಟಿಯಾರರು ಶ್ರೀನಾಥನ ಯೋಗಕ್ಷೇಮ ವಿಚಾರಿಸಿ

"ಊಟ ಈಗಲೇ ಮಾಡುವಿರಾ ?"

"ಅಗತ್ಯವಿಲ್ಲ. ಕಟಪಾಡಿಯಲ್ಲಿ ಊಟಮಾಡಿದ್ದೇನೆ"

ಕಛೇರಿಯ ಕೆಲಸಗಾರ ರತ್ನಂನನ್ನು ಕರೆದು ಶ್ರೀನಾಥನಿಗೆ ಕಾಫಿ, ತಿಂಡಿ ತರಿಸಿಕೊಟ್ಟರು.

ರತ್ನಂ ಪರಿಚಯ ಮಾಡಿಕೊಡುತ್ತಾ

"ಇವನು ನಮ್ಮ ಆಫೀಸ್ ಬಾಯ್ (Office Boy) ನಿಮ್ಮ ಸೇವೆ ಶಿಸ್ರೂಷೆಗೆ ಬಿಡುತ್ತೇನೆ. ಪಕ್ಕದ 'ಮಣಿ ಹೋಟೆಲಿ'ನಲ್ಲಿ ನಿಮ್ಮ ಹೆಸರಿಗೆ ಅಕೌಂಟ್ ತೆಗೆದಿದ್ದೇನೆ. ನಿಮಗೆ ಊಟ – ಕಾಫಿ – ತಿಂಡಿ ಏನು ಬೇಕಾದರೂ ಸಂಕೋಚವಿಲ್ಲದೆ ತರಿಸಿಕೊಳ್ಳಿ."

"ಆಗಬಹುದು. ನನ್ನ ಕೆಲಸದ ವಿಷಯ ಏನೂ ಹೇಳಲಿಲ್ಲವಲ್ಲಾ ?"

"ಅದಕ್ಕೇನು ಅವಸರ. ಇದೇ ಬಂದಿದ್ದೀರಿ. ನಿಮಗೂ ದಣಿವಾಗಿದೆ. ನಾಳೆಯೂ ವಿಶ್ರಾಂತಿ ತೆಗೆದುಕೊಳ್ಳಿ. ಬೇಕಾದರೆ ಒಂದು ಟ್ಯಾಕ್ಸಿ ಮಾಡಿಕೊಂಡು ಮದರಾಸು ನೋಡಿಕೊಂಡು ಬನ್ನಿ – ರತ್ನಂ ಎಲ್ಲಾ ತೋರಿಸುತ್ತಾನೆ — ನಾನು ಬರುತ್ತೇನೆ. ಎಲ್ಲಾ ಸೌಖ್ಯವಾಗಿದೆಯೋ. ಏನಾದರೂ ಬೇಕಾದರೆ ಹೇಳಿ."

"ಏನೂ ಬೇಕಾಗಿಲ್ಲ. ಸೊಗಸಾದ ವ್ಯವಸ್ಥೆಮಾಡಿರುವಿರಿ."

ಚೆಟ್ಟಿಯಾರರು ರತ್ನಂನ ಕರೆದು "ಅಯ್ಯಾವರನ್ನು ಸರಿಯಾಗಿ ನೋಡಿಕೋ" ಎಂದು ಹೇಳಿ ಹೋದರು.

ಶ್ರೀನಾಥ ಸ್ನಾನಮಾಡಿ ಮತ್ತೊಂದು ಕಪ್‌ಕಾಫಿ ತರಿಸಿಕೊಂಡು ಕುಡಿದು ಹಾಸಿಗೆಯ ಮೇಲೆ ಕಾಲುಚಾಚಿದ. ರತ್ನಂ ಬಂದು

"ಬೀಚಿಗೆ ಬೇಕಾದರೆ ಹೋಗಿಬರಬಹುದು" ಎಂದ.

"ಏನೂ ಬೇಡ ರತ್ನಂ – ದಣಿವಾಗಿದೆ. ನಾಳೆ ಹೋಗೋಣ"

ಎಂದು ಶ್ರೀನಾಥ ಹೇಳಿದ.

ಶ್ರೀನಾಥನಿಗೆ ಮಲಗುವ ಮನಸ್ಸಾಗಲಿಲ್ಲ. ಎದ್ದು ಕುಳಿತು ತನ್ನ ಲೆಟರ್ ಪ್ಯಾಡ್ ಮುಂದೆ ಬಿಚ್ಚಿಟ್ಟುಕೊಂಡ. ಕಮಲನಿಗೆ ಪತ್ರ ಬರೆಯ ಬೇಕೆನ್ನಿಸಿತು. ಇದೇ ತನ್ನ ಪ್ರಥಮ ಪ್ರಣಯ ಪತ್ರ. ಹೇಗೆ ಆರಂಭಿಸಲಿ ಎಂದು ದೀರ್ಘವಾಗಿ ಆಲೋಚಿಸಿ ಆರಂಭಿಸಿದ.

"ಪ್ರಿಯೆ ಕಮಲಾ,

ರೈಲಿನಿಂದ ನನ್ನ ರೂಮಿಗೆ ಬಂದು ಸ್ವಲ್ಪ ಹೊತ್ತಾಯಿತು. ಸ್ನಾನ, ಕಾಫಿ ಮುಗಿಸಿ ನಿನಗೆ ಕಾಗದ ಬರೆಯುವುದಕ್ಕೆ ಕುಳಿತಿದ್ದೇನೆ. ರೂಮಿನಲ್ಲಿ ಏಕಾಂಗಿಯಾಗಿದ್ದೇನೆ. ಎಲ್ಲವೂ ಬಿಕೋ ಎನ್ನುತ್ತಿದೆ – ಮನಸ್ಸು ನಿನ್ನ ಧ್ಯಾನದಲ್ಲಿ ಮಗ್ನವಾಗಿದೆ.

ನಿನ್ನ ಬಿಟ್ಟು ಮೂರು ತಿಂಗಳು ಕಳೆಯಬೇಕೆಂಬ ಚಿಂತೆ ಬಂದೊಡನೆಯೇ ಮೈ ಜುಮ್ಮೆನ್ನುತ್ತದೆ. ನಮ್ಮಿಬ್ಬರ ವಿಶ್ವಾಸ ಎಷ್ಟು ಗಾಢವಾಗಿದೆಯೆಂದು ದೇವರು ಪರೀಕ್ಷಿಸುತ್ತಿದ್ದಾನೆಯೇ ಎಂದೆನಿಸುತ್ತದೆ.

ನಿನಗೆ ಬಹಳ ಬರೆಯಬೇಕೆಂದು ಮನಸ್ಸು ತವಕಪಡುತ್ತಿದೆ. ಭಾವನಾವೇಶದಲ್ಲಿ ಮಾತುಗಳೇ ಬಾರದಾಗಿವೆ.

ಎಲ್ಲೆಲ್ಲಿಯೋ ಇದ್ದ ನಮ್ಮನ್ನು ವಿಧಿ ತಂದು ಕೂಡಿಸಿತು. ಈ ಕುಣಿಕೆ ಸಡಿಲವಾಗಬಾರದು. ನನ್ನ ವಿಶ್ವಾಸ, ಗೌರವಕ್ಕೆ ಭಂಗ ತರುವ ಯಾವ ಕೆಲಸವನ್ನೂ ನೀನು ಮಾಡುವುದಿಲ್ಲವೆಂದು ನಂಬಿದ್ದೇನೆ.

ನಿನ್ನ ತಾಯಿಗೆ ನನ್ನ ನಮಸ್ಕಾರ ತಿಳಿಸು.

ನೀನು ಕೂಡಲೆ ನಾಲ್ಕು ಪಂಕ್ತಿಯಾದರೂ ಉತ್ತರ ಬರೆಯಲೇಬೇಕು. ಹೇಗೆ ಬರೆಯಲಿ ಎಂದು ಅನುಮಾನಪಡಬೇಡ.

ಹೃದಯದಲ್ಲಿ ತುಂಬಿರುವ ಭಾವನೆ ವ್ಯಕ್ತಪಡಿಸಬೇಕಾದರೆ ಭಾಷಾ ಪಾಂಡಿತ್ಯ ಬೇಕಿಲ್ಲ.

ನಿನ್ನ ಪ್ರತ್ಯುತ್ತರವನ್ನು ಎಷ್ಟು ಉತ್ಸಾಹ, ಆಸೆಗಳಿಂದ ಎದುರು ನೋಡುತ್ತಿರುವೆನೆಂದು ಹೊಸದಾಗಿ ಹೇಳಬೇಕೇ,

ಇಂತು ಯಾವಾಗಲೂ ನಿನ್ನವನಾದ

ಶ್ರೀನಾಥ"

ಶ್ರೀನಾಥ ತನ್ನ ಪ್ರೇಯಸಿಯ ಧ್ಯಾನದಲ್ಲಿ ಮೈಮರೆತು **ಅವಳಿಗೆ** ಪ್ರಣಯ ಪತ್ರ ಬರೆಯುತ್ತಿದ್ದಾಗ ಕಮಲ ತನಿಶ ಚಿತ್ರ ಒಂದರ**ಲ್ಲಿನ** ಕೃಷ್ಣನ್ – ಮಧುರಂ ಹಾಸ್ಯನೋಡಿ ನಕ್ಕು ನಲಿಯುತ್ತಿದ್ದಳು.

ಮಾರನೆಯ ದಿನ ಶ್ರೀನಾಥ ರತ್ನಂ ಸಹಾಯದಿಂದ ಊರಿನಲ್ಲಿ ತಿರುಗಾ**ಡಿ** ಕೊಂಡು ಬಂದ.

ಸಂಜೆಗೆ ರತ್ನಂ ಶ್ರೀನಾಥನನ್ನು ಬೀಚಿಗೆ ಕರೆದೊಯ್ದ. ಅನಂತ**ವಾಗಿ** ಎದುರಿಗೆ ವ್ಯಾಪಿಸಿದ ಸಮುದ್ರ ಆ ಸಂಜೆ ಗಂಭೀರವಾಗಿತ್ತು. ನೃತ್ಯಭಂಗಿ**ಯಂತೆ** ಅಲೆಗಳು ಮೃದುವಾಗಿ ಚೆಲ್ಲಾಟವಾಡುತ್ತಿದ್ದವು. ಶ್ರೀನಾಥ ಅದರ **ಗಾಢ** ಗಾಂಭೀರ್ಯ, ಸ್ನಿಗ್ಧ ಸೌಂದರ್ಯಕ್ಕೆ ಬೆರಗಾಗಿ ದಿಟ್ಟಿಸಿ **ನೋಡುತ್ತ** ನಿಂತುಬಿಟ್ಟ. ಸಾಗರದ ತರಂಗ ತರಂಗಕ್ಕನುಗುಣವಾಗಿ ಅವನ **ಹೃದಯ** ವೀಣೆ ಮೀಟುತ್ತಿತ್ತು. ಭಾವಗಳು ರಸಗಳು ಉಕ್ಕುಕ್ಕಿಬರುತ್ತಿದ್ದವು.

ಅವನ ಅಂತರ್ವಾಣಿ ಮೊರೆಯಿತು

"ನೋಡು ಶ್ರೀನಾಥ – ವಿಶಾಲ ಗಭೀರ ಸಾಗರವನ್ನು ಕಣ್ಣು**ಬಿಟ್ಟು** ನೋಡು. ಅದರ ನಿಗೂಢ ಗರ್ಭದಲ್ಲಿ ಎಂಥೆಂಥ ರತ್ನಗಳು ಅಡಗಿವೆ ಬಲ್ಲೆ**ಯಾ ?** ಎಂಥೆಂಥ ರಹಸ್ಯಗಳು ಹುದುಗಿವೆ ಬಲ್ಲೆಯಾ ? ಅದನ್ನು ಭೇದಿಸಲು ಹಲವರು ಪ್ರಯತ್ನಿಸಿದ್ದಾರೆ – ಕೆಲವರು ಸಾರ್ಥಕ್ಯವನ್ನು ಪಡೆದಿದ್ದಾರೆ. ಆ ಕೆಲವರ**ಲ್ಲಿ** ನೀನೊಬ್ಬ – ನೀನೂ ಒಬ್ಬನೆಂಬ ಅರಿವು ನಿನಗಿಲ್ಲ."

"ನನಗಿದೆ. ಈ ಶುಷ್ಕದೇಹ ಪಥದಲ್ಲೊಮ್ಮೆ ನುಡಿತಾಯಿ **ನಡೆದಿ** ದ್ದಾಳೆ. ತನ್ನ ಪಾದಧೂಳಿಯನ್ನಲ್ಲಿ ಚೆಲ್ಲಿ ಸ್ಮಶಾನವನ್ನು ಚಿರ ಸುಂದರ ಉಪವನವನ್ನಾಗಿ ಮಾಡಿದ್ದಾಳೆ."

"ನುಡಿಯೊಡತಿ ನಡೆದ ಎಡೆಯನ್ನು ಬೆಲೆವೆಣ್ಣಿಗೆ ಬಿಟ್ಟುಕೊಡುತ್ತಿ**ರುವೆ** ಯಲ್ಲಾ – ಬ್ರಹ್ಮನಿಷ್ಠ ನೀನು – ಭ್ರಷ್ಟನಾದೆಯಲ್ಲಾ !"

"ಇಲ್ಲ ಅದು **ಗೌಣ** – ನನ್ನ ತಪಸ್ಸಿಗೆ ಅದು ಭಂಗ ತರ**ಲಾರದು.** ನನ್ನ ದೇಹ ಕಮಲನಿಗೆ ಮೀಸಲಾದರೇನು – ಮನಸ್ಸು ವಾಗ್ದೇವಿಯ **ಚರಣಕ್ಕೆ** ಅರ್ಪಿತ."

"ಮೂಢ – ಹೀಗೇಕೆ ಆತ್ಮವಂಚನೆ ಮಾಡಿಕೊಳ್ಳುವೆ. **ಸದಾ** ಸರ್ವದಾ ಬೆಲೆವೆಣ್ಣಿನ ಧ್ಯಾನಮಾಡುತ್ತಿರುವ ನಿನಗೆ **ನುಡಿಯೊಡತಿಯ**

ನೆನಪಾದರೂ ಎಲ್ಲಿಂದ ಬರಬೇಕು – ಇದೇ ಪ್ರಣಯ ಪತ್ರ ಬರೆದು ಬಂದಿಲ್ಲವೇ ”

ಶ್ರೀನಾಥ ಮುಖ ಮುಚ್ಚಿದ. ಹೆಚ್ಚು ಕಾಲ ನಿಲ್ಲಲಾಗಲಿಲ್ಲ.

“ ರತ್ನಂ – ನಡೀ – ಮನೆಗೆ ಹೋಗೋಣ ” ಎಂದು ಹೇಳಿದ.

ಅಂಚೆಯಾಳು ಶ್ರೀನಾಥನ ಕಾಗದವನ್ನು ಭಾಗ್ಯಮ್ಮನ ಕೈಯಲ್ಲಿಟ್ಟು ಹೋದ. ಭಾಗ್ಯಮ್ಮ ಮಗಳನ್ನು ಕರೆದು ಕಾಗದ ಕೊಟ್ಟಳು. ಆತುರದಿಂದ ಕಮಲ ಕಾಗದ ಒಡೆದು ಓದಿಕೊಂಡಳು. ಮತ್ತೆ ಮತ್ತೆ ಓದಿದಳು.

“ ಏನು ಬರೆದಿದ್ದಾರೆಯೇ ?” ಎಂದು ತಾಯಿ ಕೇಳಿದಳು.

“ ನಿನಗೆ ನಮಸ್ಕಾರ ಹೇಳಬೇಕೆಂದು ಬರೆದಿದ್ದಾರೆ ”

ಎಂದಳು ಕಮಲ. ಭಾಗ್ಯಮ್ಮನ ಮುಖ ಅರಳಿತು.

ಶ್ರೀನಾಥ ಮದರಾಸಿಗೆ ಪ್ರಯಾಣ ಮಾಡಿದ ದಿನ ಮಧ್ಯಾನ್ಹ ಶರ್ಮ ಮುತ್ತಮ್ಮನ ಮನೆಗೆ ಹೋದ.

ಮುತ್ತಮ್ಮ ಎಂದಿನಂತೆ ಶರ್ಮನಿಗೆ ಸ್ವಾಗತ ಬಯಸಲಿಲ್ಲ. ಕಾರಣ ಕುಶಾಗ್ರಮತಿಯಾದ ಶರ್ಮನಿಗೆ ಹೊಳೆಯದಿರಲಿಲ್ಲ.

“ ಏನು ಮುತ್ತಮ್ಮ. ನನ್ನ ಮೇಲೆ ಬಹಳ ಕೋಪಮಾಡಿಕೊಂಡಿರುವ ಹಾಗಿದೆ.”

“ ಬಡವರ ಕೋಪ ಯಾರಪ್ಪಾ ಕೇಳಬೇಕು.”

“ ನಾನು ಕೇಳುತ್ತೇನೆ – ಕಾರಣವೇನು ಹೇಳು.”

“ ನಿನ್ನ ಸ್ನೇಹಿತ ಇಂಥ ಕೆಲಸಮಾಡಬಹುದೇನಪ್ಪಾ ?”

“ ಏನು ಮಾಡಿದ ?”

“ ನನ್ನ ಮನೆಯಲ್ಲಿ ಗುರುತಾದ ಹುಡುಗಿಯನ್ನು ಹಾರಿಸಿಕೊಂಡು ಹೋಗಿ ಸಂಸಾರ ಹೂಡಬಹುದೇ ? ಇದು ದ್ರೋಹವಲ್ಲವೇ ?”

“ ಮುತ್ತಮ್ಮ – ಅದು ದೊಡ್ಡ ಕಥೆ. ಆ ವಿಷಯದಲ್ಲಿ ನಿನ್ನ ಮನಸ್ಸಿಗೆಷ್ಟು ಬೇಸರವಾಗಿದೆಯೋ ಅದರ ಹತ್ತರಷ್ಟು ಬೇಸರ ನನಗಾಗಿದೆ.”

“ ನಿನಗೇಕಪ್ಪಾ ಬೇಸರವಾಗಬೇಕು. ನನ್ನ ಬಾಯಿಗೆ ತಾನೆ ಮಣ್ಣು ಬಿದ್ದದ್ದು. ಬರೋರೆಲ್ಲಾ ಕಮಲ – ಕಮಲ ಎಂತಾ ಬಡ್ಕೋತಾರೆ – ಅವರಿಗೇನು ಹೇಳಲಿ.”

"ನಿನಗೆ ಒಂದು ಸುದ್ದಿ ಹೇಳೋಣಾಂತ ಬಂದೆ – ಕೇಳುವುದಕ್ಕೆ ಇಷ್ಟವಿಲ್ಲದಿದ್ದರೆ ಬಿಡು."

"ಏನು ಹೇಳಪ್ಪಾ, ಕೇಳುತ್ತೇನೆ."

"ನನ್ನ ಸ್ನೇಹಿತ ಊರಿನಲ್ಲಿಲ್ಲ."

"ಎಲ್ಲಿಗೆ ಹೋದ? ಇವತ್ತೋ ನಾಳೆಯೋ ಬರುತ್ತಾನೆ."

"ಬರುವ ಹಾಗಿಲ್ಲ. ಇನ್ನು ಮೂರು ತಿಂಗಳು ಈ ಕಡೆ ಬರುವ ಹಾಗಿಲ್ಲ."

"ಏನಾಯಿತಪ್ಪಾ ಅವನಿಗೆ."

"ಏನೂ ಆಗಿಲ್ಲ. ಮದರಾಸಿನಲ್ಲಿ ಒಂದು ಕೆಲಸವಾಯಿತು."

"ಅದರಿಂದ ನನಗಾದ ಲಾಭ?"

"ನೀನು ಬೇಕಾದಾಗ ಕಮಲನನ್ನು ಕರೆಸಬಹುದು."

"ನಿನ್ನ ಸ್ನೇಹಿತ ಅವಳಿಗೇನೋ ಮಂಕುಬೂದಿ ಹಾಕಿದ್ದಾನಪ್ಪಾ. ಅವತ್ತೇ ಹೋಗಿ ಕರೆದೆ – ಅವಳು ಬರಲಿಲ್ಲ."

"ಅವತ್ತಿನ ಮಾತು ಬೇರೆ – ಇವತ್ತಿನ ಮಾತು ಬೇರೆ."

"ಇದರಿಂದ ನಿನಗೇನು ಪ್ರಯೋಜನ. ಕಮಲ ನಿನಗೆ ಬೇಕಾಗಿತ್ತೇ?"

"ಛೀ! ಎಂಥ ಮಾತಾಡುತ್ತಿರುವೆ. ನನ್ನ ಉದ್ದೇಶವಿಷ್ಟೇ – ಕಮಲ ಮತ್ತು ನನ್ನ ಸ್ನೇಹಿತನ ಸಂಬಂಧ ಮುಗಿದುಹೋಗಬೇಕು."

"ಅವರ ವಿಶ್ವಾಸಕ್ಕೆ ನೀನೇಕಪ್ಪಾ ಅಡ್ಡಿಯಾಗಬೇಕು."

"ಮುತ್ತಮ್ಮ – ಮನಸ್ಸು ಬಿಚ್ಚಿ ನಿನ್ನಲ್ಲಿ ಹೇಳಿಬಿಡುತ್ತೇನೆ. ಕೆಲಸಕ್ಕೆ ನಿನ್ನ ಸಹಾಯವೂ ನನಗೆ ಬೇಕು. ನನ್ನ ಸ್ನೇಹಿತ – ಶ್ರೀನಾಥ – ಸಾಧಾರಣ ವ್ಯಕ್ತಿಯಲ್ಲ. ಅವನು ದೊಡ್ಡ ಕವಿ. ಈ ಬೀದಿ ಹೆಣ್ಣಿನ ಸಹವಾಸಕ್ಕೆ ಬಿದ್ದು ಹಾಳಾಗಿ ಹೋಗುತ್ತಿದ್ದಾನಲ್ಲಾ ಎಂದು ನಮಗೆಲ್ಲಾ ತುಂಬ ದುಃಖವಾಗಿದೆ. ತಪ್ಪು ನನ್ನದೇ – ನಾನೇ ಅವನನ್ನು ಇಲ್ಲಿಗೆ ಕರೆದುಕೊಂಡು ಬಂದೆ. ಆದರೆ ಈ ಪ್ರಕರಣ ಇಷ್ಟುದೂರ ಬೆಳೆದು ಕಮಲ ಅವನಿಗೆ ಗಂಟು ಬೀಳುತ್ತಾಳೆಂದು ನಾನು ಹೇಗೆ ನಿರೀಕ್ಷಿಸಲಿ. ಶ್ರೀನಾಥ ವಿಚಿತ್ರವ್ಯಕ್ತಿ. ಯಾರನ್ನಾದರೂ ನಂಬಿದರೆ ನಂಬೇಬಿಡುತ್ತಾನೆ; ಯಾರಲ್ಲಿಯಾದರೂ ಭಕ್ತಿ ವಿಶ್ವಾಸವಿಟ್ಟರೆ ಅವರಿಗಾಗಿ ಜೀವ ತೇದುಬಿಡುತ್ತಾನೆ. ನೀನೇ

ಹೇಳು ಮುತ್ತಮ್ಮ – ಕಮಲ ಇಂಥ ಗೌರವ ವಿಶ್ವಾಸಕ್ಕೆ ಅರ್ಹಳೇ ?–ಅವಳು ನಿಜವಾಗಿಯೂ ಶ್ರೀನಾಥನಿಗೆ ಸತ್ಯಳಾಗಿರುತ್ತಾಳೆಯೇ ? ”

“ ಸರಿ ಬಿಡಪ್ಪ – ಅದೊಂದು ಚೆಲ್ಲು ಹೆಣ್ಣು. ಸಿನೀಮಾ ನೋಡೋ ಆಸೆಗೆ ಏನು ಬೇಕಾದರೂ ಮಾಡಿಬಿಡತ್ತೆ.”

“ ಅವರಮ್ಮ.”

“ ಆ ಮುದುಕಿ ಇದಕ್ಕಿಂತ ಚೆಲ್ಲು. ಮಾಂಸದ ಅಡಿಗೆ, ಸಿನೀಮಾ ಎರಡಿದ್ದರಾಯಿತು ಅವಳಿಗೆ.”

“ ಹಾಗಾದರೆ ನಿನ್ನ ಕೆಲಸ ಬಹಳ ಕಷ್ಟಪಟ್ಟೇನಲ್ಲ.”

“ ನೋಡೋಣ – ದೇವರಿದ್ದಾನೆ.”

“ ಈ ಮಾತು ನಿಮ್ಮಿಬ್ಬರಲ್ಲೇ ಇರಲಿ.”

“ ನಾನು ಯಾರಿಗೆ ಹೇಳುವುದಕ್ಕೆ ಹೋಗುತ್ತೇನೆ.

“ ಒಳ್ಳೆಯದು – ಇನ್ನು ನಾನು ಬರುತ್ತೇನೆ.”

“ ಏಕೆ – ಕುಳಿತುಕೋ – ಯಾರಾದರೂ ಬರುತ್ತಾರೆ.”

“ ಏನೂ ಬೇಡ ಇಪತ್ತು ”

ಎಂದು ಮುತ್ತಮ್ಮನ ಕೈಗೆ ಹತ್ತು ರೂಪಾಯಿ ಹಾಕಿದ. ಮುತ್ತಮ್ಮ ಅಂದು ತಾನು ಎದ್ದ ಗಳಿಗೆ ಒಳ್ಳೆಯದು ಎಂದುಕೊಂಡಳು.

ಎರಡು ದಿನಗಳಾನಂತರ ಚೆಟ್ಟಿಯಾರರು ಶ್ರೀನಾಥನನ್ನು ಕಛೇರಿಗೆ ಕರೆದುಕೊಂಡು ಹೋಗಿ ಅವನ ಕೆಲಸದ ಪರಿಚಯ ಮಾಡಿಕೊಟ್ಟರು. ತಾನಿದ್ದಲ್ಲಿಯೇ ಕಛೇರಿಯೂ ಇದ್ದುದು ಶ್ರೀನಾಥನಿಗೆ ತುಂಬ ಅನುಕೂಲ ವಾಯಿತು.

ತಾನು ಮಾಡಬೇಕಾಗಿದ್ದ ಕೆಲಸದ ಒಂದು ಪಟ್ಟಿ ಸಿದ್ಧಗೊಳಿಸಿ ಚೆಟ್ಟಿ ಯಾರರಿಗೆ ತೋರಿಸಿದ. ನೂರಾರು ಕಾಗದಗಳನ್ನು ಬರೆಯಬೇಕಾಗಿತ್ತು— ಪ್ರಕಟನೆಗಳನ್ನು ಅಚ್ಚುಮಾಡಿಸಬೇಕಾಗಿತ್ತು.

ಶ್ರೀನಾಥ ತೋರಿಸಿದ ಕಾರ್ಯಕ್ರಮದ ರೂಪರೇಷೆ ನೋಡಿ ಚೆಟ್ಟಿ ಯಾರರು

“ ಮ್ಯಾನೇಜರ್ ನಂಬಿಯಾರ್ ಇದ್ದಾರೆ. ನೀವು ಇದ್ದೀರಿ. ನೀವಿಬ್ಬರೂ ಯೋಚನೆ ಮಾಡಿ ಹೇಗೆ ಸೂಕ್ತವೋ ಹಾಗೆ ಕಾರ್ಯ ಮುಂದುವರಿಸಿ.”

ಎಂದು ಹೇಳಿದರು.

ಕಾರ್ಯಬಾಹುಳ್ಯದಲ್ಲಿಯೂ ಶ್ರೀನಾಥನ ಮನಸ್ಸೆಲ್ಲಾ ಬಾಗಿಲು ಕಡೆಗೆ ಇತ್ತು. ಅಂಚೆಯಾಳು ಏಕೆ ಬರಲಿಲ್ಲವೆಂದು ರತ್ನಂನ ಮೂರು ನಾಲ್ಕು ಸಲ ಕೇಳಿದ.

ಅಂಚೆಯಾಳು ಬಂದ – ಶ್ರೀನಾಥನಿಗೆ ಕಾಗದವಿರಲಿಲ್ಲ.

ಶ್ರೀನಾಥನ ಮನಸ್ಸು ಅಸ್ತವ್ಯಸ್ತವಾಯಿತು. ಕೂಡಲೆ ಕಮಲನಿಗೆ ಒಂದು ಎಕ್ಸ್‌ಪ್ರೆಸ್ ತಂತೀಕೊಟ್ಟು 'ಕಾಗದ ಬರಿ' ಎಂದು ಸೂಚಿಸಿದ.

ಟೆಲಿಗ್ರಾಫ್ ಆಳು ತಂತೀ ತಂದು ಕೊಟ್ಟಾಗ ಭಾಗ್ಯಮ್ಮ ಮುತ್ತಮ್ಮನ ಜತೆ ಮಾತನಾಡುತ್ತ ಕುಳಿತಿದ್ದಳು. ಕಮಲ ತಂತೀ ವರ್ತಮಾನದ ಕಾಗದ ಒಡೆದು ನೋಡಿ

"ಅಮ್ಮ – ಇಂಗ್ಲಿಷಿನಲ್ಲಿದೆಯಲ್ಲೇ?" ಎಂದಳು.

"ಮನೆಯಮ್ಮನಿಗೆ ತೋರಿಸು. ಯಾರಿಗಾದರೂ ಹೇಳಿ ಓದಿಸುತ್ತಾಳೆ" ಎಂದಳು.

ಕಮಲ ಹೋದ ಮೇಲೆ ಮುತ್ತಮ್ಮ

"ಆಯಪ್ಪನದೇ ಏನೋ ತಂತೀ!"

"ಹೂ! ಇನ್ನು ಯಾರದು?"

"ಆಯಪ್ಪ ಸಿಕ್ಕಿದ ಎಂತಾ ನನ್ನ ಮರೆತುಬಿಡೋವೇ?"

"ನಾನೇ ಯಾವಾಗಲಾದರೂ ಬಂದು ತಿಳಿಸೋಣ ಎಂದಿದ್ದೆ ಮುತ್ತಮ್ಮ. ಬರುವುದಕ್ಕೆ ಪುರಸತ್ತಾಗಲಿಲ್ಲ. ನೀನೇ ಬಂದದ್ದು ಒಳ್ಳೆಯದಾಯಿತು. ನಮ್ಮ ಹುಡುಗೀಗೆ ಸ್ವಲ್ಪವೂ ವಿವೇಕವಿಲ್ಲ – ನಾನು ಏನು ಮಾಡಲಿ ಹೇಳು."

"ಯಾಕಮ್ಮ – ಆಯಪ್ಪ ಎಲ್ಲಾ ಚೆನ್ನಾಗಿ ನೋಡಿಕೊಳ್ಳುತ್ತಿದ್ದಾನಲ್ಲಾ."

"ಏನು ನೋಡಿಕೊಳ್ಳೋದೋ? ಆತ ಯಾವ ಘನ ಶ್ರೀಮಂತ ಹೇಳು. ನಾನು ಕಣ್ಣು ಮುಚ್ಚಿಕೊಳ್ಳೋದರೊಳಗಾಗಿ ಈ ಪೆದ್ದಮುಂಡೇದಕ್ಕೆ ಒಂದು ಮನೆ, ನಾಲ್ಕು ಒಡವೆ, ಹತ್ತು ಕಾಸು ಮಾಡಿಡೋಣಾಂತ ಇದ್ದೀನಿ. ಇದು ಅವನನ್ನು ಗಂಟು ಹಾಕಿಕೊಂಡಿದೆ."

"ನೀವು ಮಾಡಿದ್ದು ನನಗೆ ಅಪಖ್ಯಾತಿ ಬಂತು?"

" ನಿನಗೇನಾಯಿತು ?"

" ಏನೇ ! ಆಯುಷ್ಪನ ಸ್ನೇಹಿತರು ಬಂದು ನನ್ನ ದುರ್ಜನ ಮಾಡುತ್ತಾ ಇದ್ದಾರೆ. ಶ್ರೀನಾಥಪ್ಪ ಅಂಥಾವನು, ಇಂಥಾವನು – ಅವನೇನೋ ಕವಿಯಂತಲ್ಲ – ಅವನನ್ನು ತೊಗೊಂಡು ಹೋಗಿ ಹುಲಿ ಬಾಯಿಗೆ ಹಾಕಿದೆ. ಅವನಿಗೆ ಮದುವೆಮಾಡಬೇಕೂಂತಿದ್ದೆ, ಅದಕ್ಕೂ ಕಲ್ಲು ಹಾಕಿದೆ ಎಂದು ನನ್ನ ಹೆಸರು ಹೇಳಿ ಶಂಖಹೊಡೀತಾ ಇದ್ದಾರೆ."

" ಇದಕ್ಕೇನು ಮಾಡೋದು ಮುತ್ತಮ್ಮ. ನಿನಗೂ ಇಷ್ಟವಿಲ್ಲ— ನನಗಂತೂ ಸ್ವಲ್ಪವೂ ಇಷ್ಟವಿಲ್ಲ. ನಮ್ಮ ಹುಡುಗಿ ನಮ್ಮ ಕೈಯಲ್ಲಿರಬೇಕು."

" ಅದಕ್ಕೆ ಒಂದು ಕೆಲಸಮಾಡು. ಕಮಲನ್ನ ಕೂರ್ಸ್ಕೊಂಡು ಬಾ. ನಾನು ಬುದ್ಧಿಹೇಳುತ್ತೇನೆ. ನಾಲ್ಕು ಕಾಸು ಮಾಡೋದಾರಿ ಹೇಳಿಕೊಡುತ್ತೇನೆ."

" ಹಾಗೇ ಆಗಲಿ."

" ಸಾರು ಏನುಮಾಡಿದ್ದೆಯಮ್ಮ."

" ಸೀಮೆ ಬದನೇಕಾಯಿ ಇತ್ತು – ಅದನ್ನೇ ಹಾಕಿದ್ದೆ."

" ಮಾಂಸ ತರಲಿಲ್ಲವೇ ? "

" ತರೋಹಾಗಿಲ್ಲವಲ್ಲಮ್ಮ. ಆಯುಷ್ಪ ಮಾಂಸ, ಮೊಟ್ಟೆ ಮುಟ್ಟಲ್ಲ, ಸರಿ, ಈ ಮಹಾ ಪತಿವ್ರತೆ ಆಜ್ಞೆ – ಮನೇಲಿ ಮಾಂಸ ಬೇಯಿಸಬಾರದೂಂತ."

" ನೀನೇನು ಮಾಡುತ್ತೀ ? "

" ಹೊರಗೆ ಹೋಗಿ ತಿಂದು ಬರುತ್ತೇನೆ."

" ಯಾವಾಗ ಬರುತ್ತೀ ಹೇಳು – ನಾನು ಸಾರು ಮಾಡಿರುತ್ತೇನೆ. ರಾತ್ರಿಗೆ ಬಾ – ಬೆಳಿಗ್ಗೆ ಬಂದರಾಯಿತು."

" ಅವಳೇನನ್ನುತ್ತಾಳೋ – ಬರಲಿ ತಡೀ. ನೀನೇ ಕೇಳು."

ಮಗಳನ್ನು ಕರೆದುಕೊಂಡು ಬರುವುದಕ್ಕೆ ಭಾಗ್ಯಮ್ಮನೇ ಎದ್ದು ಹೋದಳು.

ಸ್ವಲ್ಪಹೊತ್ತು ಕಳೆದ ಮೇಲೆ ತಾಯಿ ಮಗಳಿಬ್ಬರೂ ಬಂದರು. ಮುತ್ತಮ್ಮ

" ಏನು ಕಮಲಾ, ನಾನು ಬಂದರೆ ನೀನು ಹೊರಟುಹೋಗೋದೇ ? "

"ಇಲ್ಲಮ್ಮ. ಕಾಗದ ಓದಿಸಿಕೊಂಡು ಬರಲು ಹೋದೆ. ಮನೆಯಮ್ಮ ಮಾತಾಡಿಸುತ್ತ ನಿಲ್ಲಿಸಿಕೊಂಡಳು."

"ರಾತ್ರೀಗೆ ಅಮ್ಮನೂ ನೀನೂ ಮನೆಕಡೆ ಬರುತ್ತೀರಾ?"

"ಏಕೆ?"

"ಏನೋ ಅಷ್ಟು ವೈನವಾಗಿ ಅಡಿಗೆಮಾಡಿ ಎಲ್ಲಾರೂ ಜತೇಲಿ ಊಟ ಮಾಡೋಣಾಂತ ಆಸೆಯಾಗಿದೆ."

ಕಮಲ ಉತ್ತರಕೊಡುವುದಕ್ಕೆ ಅನುಮಾನಿಸಿದಳು. ಭಾಗ್ಯಮ್ಮ

"ಬರ್ತೀನೀಂತ ಹೇಳು. ಅವಳು ಅಷ್ಟುದೂರದಿಂದ ಬಂದು ಪ್ರೀತಿಯಿಂದ ಕರೆದರೆ ಗುನಗುಮಾಡೋದು ಯಾವ ದೊಡ್ಡಸ್ತನ."

"ಬರ್ತೀನಮ್ಮ"

ಎಂದು ಕಮಲ ಹೇಳಿದಳು.

ಮುತ್ತಮ್ಮ ತಾನು ಬಂದ ಕೆಲಸ ಆಯಿತೆಂದು ತೃಪ್ತಿಪಟ್ಟುಕೊಂಡು ಮನೆಗೆ ಹೊರಟ ಮೇಲೆ ಕಮಲ

"ತಂತೀ ಜೇರೆ ಮಾಡಿದ್ದಾರೆ. ಒಂದು ಕಾಗದ ಬರೆಯಬೇಡವೇ?"

"ಬರಿ. ಅದಕ್ಕೆ ನನ್ನೇನು ಕೇಳುತ್ತೀ."

"ಏನು ಬರೆಯಲಿ."

"ಚೆನ್ನಾಗಿದೆ ಕಣೇ – ನೀನೇನು ಬರೆಯಬೇಕೆಂದು ನಾನು ಹೇಳಲೇ?"

ಕಮಲ ಪಕ್ಕದ ಮನೆಗೆ ಹೋಗಿ ಕಾಗದ, ಮಸಿಯ ಕುಡಿಕೆ, ಲೇಖನಿ ತಂದು ತಾಯಿಯ ಮುಂದೆ ಕುಳಿತಳು.

"ಹೇಳು – ಏನೆಂದು ಆರಂಭಿಸಬೇಕು."

"ಮೇಲೆ ಶ್ರೀ ಹಾಕು – ಈ ಕಡೆ 'ಕ್ಷೇಮ' ಎಂದು ಬರಿ."

"ಆಯಿತು – ಮುಂದೆ."

"'ದೇವರಸಮಾನರಾದ ಮ॥ ರಾ॥ ಶ್ರೀ॥ ಶ್ರೀನಾಥರಾಯರ ಪಾದಪದ್ಮಂಗಳಿಗೆ, ಬಾಲಕಿ ಮಾಡುವ ಸಾಷ್ಟಾಂಗ ನಮಸ್ಕಾರಗಳು. ಇಲ್ಲಿ ಎಲ್ಲರೂ ಕ್ಷೇಮ. ನಿಮ್ಮ ಕ್ಷೇಮಕ್ಕೆ ಆಗಿಂದಾಗ್ಗೆ ಬರೆಯುತ್ತಿರಬೇಕು.

ನಿಮ್ಮ ಕಾಗದ, ತಂತೀ ಬಂದು ತಲುಪಿತು. ಕೂಡಲೆ ಬರೆಯ

ಚೋಕೆಂದಿದ್ದೆ. ಮೈಯಲ್ಲಿ ಚೆನ್ನಾಗಿಲ್ಲದುದರಿಂದ ನಿಧಾನವಾಯಿತು. ಕೋಪಿಸಿ ಕೊಳ್ಳಬಾರದು.

ನೀವು ಇಲ್ಲಿಂದ ಹೋದ ಮೇಲೆ ನನಗೆ ಬಹಳ ಬೇಸರವಾಗಿದೆ. ನಮ್ಮನ್ನೂ ಮದರಾಸಿಗೇ ಕರೆದುಕೊಂಡು ಹೋಗಿದ್ದರೆ ಚೆನ್ನಾಗಿತ್ತು. ನಿಮ್ಮ ಆರೋಗ್ಯ ಚೆನ್ನಾಗಿ ನೋಡಿಕೊಳ್ಳಿ. ಯಾವಾಗ ಇಲ್ಲಿಗೆ ಬರುತ್ತೀರೆಂದು ಕೂಡಲೆ ತಿಳಿಸಿ.

ನನ್ನ ವಿಷಯದಲ್ಲಿ ಅನುಮಾನ ಇಟ್ಟುಕೊಳ್ಳಬೇಡಿ. ನಾನು ಎಲ್ಲಿದ್ದರೂ ನಿಮ್ಮವಳೇ. ಸದಾ ನಿಮ್ಮ ಯೋಚನೆಯೇ ನನಗೆ.

ಮದರಾಸಿನಲ್ಲಿ ಒಳ್ಳೆಯ ನಮೂನೆ ಸೀರೆಗಳು ಸಿಕ್ಕಿದರೆ ಬರುವಾಗ ತೆಗೆದುಕೊಂಡು ಬನ್ನಿ.

ಅಮ್ಮ ನಿಮಗೆ ಆಶೀರ್ವಾದ ತಿಳಿಸೆಂದು ಹೇಳಿದ್ದಾಳೆ.

ಇಂತೀ ನಮಸ್ಕಾರಗಳು ' ಕಮಲ '"

ತಾನು ಬರೆದ ಕಾಗದವನ್ನು ಒಂದೆರಡು ಸಲ ಓದಿಕೊಂಡು

" ಅಮ್ಮ – ಸೀರೆಯ ವಿಷಯ ಬಿಟ್ಟಿದ್ದರೆ ಚೆನ್ನಾಗಿತ್ತಲ್ಲವೇ ?"

" ಇರಲಿ ಸುಮ್ಮನಿರು. ಬರುವಾಗ ತರಲಿ. ನಿನಗೇನು ನಷ್ಟವಾದದ್ದು."

ಶ್ರೀನಾಥ ಕಳುಹಿಸಿದ ವಿಳಾಸ ಬರೆದ ಲಕೋಟೆಯೊಳಗೆ ಕಾಗದ ಹಾಕಿ ಸಮೀಪದಲ್ಲಿದ್ದ ಅಂಚೆಯಾಲಯಕ್ಕೆ ಕಾಗದ ಹಾಕಿ ಬರಲು ತಾನೇ ಹೋದಳು.

ಮುತ್ತಮ್ಮ ಪೇಟೆ ವ್ಯಾಪಾರ ಮಾಡಿಕೊಂಡು, ರಾತ್ರಿ ಔತಣಕ್ಕೆ ಬೇಕಾದ ತರಕಾರಿ, ಮಾಂಸ, ಮೊಟ್ಟೆ ಕೊಂಡುಕೊಂಡು ಮನೆ ತಲುಪುವ ಹೊತ್ತಿಗೆ ನಾಲ್ಕುಗಂಟೆಯಾಗಿತ್ತು.

ತಾನು ತಂದಿದ್ದ ಸಾಮಾನುಗಳನ್ನು ತೊಟ್ಟಿಯಲ್ಲಿ ಸುರಿದು ' ಉಸ್ಸಪ್ಪಾ ' ಎಂದು ಕುಳಿತುಕೊಂಡಳು. ಈ ಮೊದಲೇ ಬಂದಿದ್ದ ವೆಂಕಟ್ಟ, ನಾಗು ಮುತ್ತಮ್ಮನ ಎದುರು ಕುಳಿತರು.

ಹೇಳಿ ಕಳುಹಿಸಿದ ಹಾಗೆ ರಾಮರಾಜಪ್ಪ ಇಳಿದುಬಿಟ್ಟ. ಸಾಮಾನಿನ ರಾಶಿ ನೋಡಿ

" ಇದೇನು ಮುತ್ತಮ್ಮ – ಭಾರೀ ಔತಣ "

ಎಂದ. ಮುತ್ತಮ್ಮ ಕಣ್ಸನ್ನೆಮಾಡಿ ವೆಂಕಟಿ, ನಾಗುವನ್ನು ಹೊರಗೆ ಕಳುಹಿಸಿ

"ನಿನಗೊಂದು ಸಂತೋಷದ ಸುದ್ದಿ ಹೇಳ್ತೀನಿ. ನನಗೇನು ಕೊಡ್ತೀ ?"

"ನೀನು ಕೇಳಿದ್ದು."

"ರಾತ್ರೀಗೆ ಸೊಗಸಾಗಿ ಅಡಿಗೆ ಮಾಡ್ತೀನಿ – ಇಲ್ಲೇ ಊಟಕ್ಕೆ ಬಂದು ಬಿಡು"

"ಅದೇನು ಭಾರಿ ಸಂತೋಷದ ಸುದ್ದಿಯೋ ?"

"ಕೇಳಪ್ಪಾ, ಅವಸರಪಡಬೇಡ. ಕಮಲ ಬರುತ್ತಾಳೆ."

"ಅವಳನ್ನ ಯಾರೋ........"

"ಅದೆಲ್ಲಾ ಮುಗಿಸಬೇಕೂಂತಲೇ...."

"ಸರಿ ಹಾಗಾದರೆ. ಔತಣ ಇನ್ನೂ ಜೋರಾಗಿಯೇ ಮಾಡು. ನಾನು ಇಬ್ಬರು ಸ್ನೇಹಿತರನ್ನು ಕರೆದುಕೊಂಡು ಬರುತ್ತೇನೆ. ವೆಂಕಟಿ, ನಾಗು ಇಬ್ಬರನ್ನೂ ಇಲ್ಲೇ ಇಟ್ಕೊಕೋ."

"ತಂದಿರೋ ಸಾಮಾನು ಸಾಲದಲ್ಲಪ್ಪಾ."

"ನಾಗರಾಜನನ್ನು ಕರೆ – ಏನು ಬೇಕೋ ತರಿಸು"

ಎಂದು ಇಪ್ಪತ್ತು ರೂಪಾಯಿ ತೆಗೆದು ಅವಳ ಮುಂದೆ ಹಾಕಿದ.

"ನೀನು ಇಲ್ಲೇ ಇರುತ್ತೀಯೋ – ಹೊರಗೆ ಹೋಗಿ ಬರುತ್ತೀಯೋ."

"ಇಲ್ಲೇ ಕುಳಿತುಕೊಂಡು ಏನು ಮಾಡಲಿ ? ಹೊರಗೆ ಹೋಗಿ ಸ್ನೇಹಿತರನ್ನೂ ಕರೆದುಕೊಂಡು ಎಂಟುಗಂಟೆಗೆ ಬರುತ್ತೇನೆ. ಔಷಧ ತರಲೋ ?"

"ಕಣೀ ಕೇಳು. ಇವತ್ತು ಎಂಥಾದ್ದು ತರುತ್ತೀ ನೋಡುತ್ತೇನೆ"

ಎಂದಳು.

ವೆಂಕಟಿ, ನಾಗು, ಇಬ್ಬರೂ ಕೆಲಸಕ್ಕೆ ಅಣಿಯಾಗಬೇಕಾಯಿತು. ನಾಗರಾಜ ಹೆಚ್ಚು ಸಾಮಾನು ತರಲು ಪೇಟೆಯಕಡೆ ಹೊರಟ.

ಅಡಿಗೆ ಒಳ್ಳೆ ಹುರುಪಿನಿಂದ ಸಾಗಿತು.

ಅಚ್ಚಮ್ಮ ಹಾಸಿಗೆ ಬಿಟ್ಟೆದ್ದು ಬಂದು

"ನಾನು ಏನಾದರೂ ಮಾಡಿಕೊಡಲೇನ್ರೀ ?" ಎಂದಳು.

"ಏನೂ ಬೇಡ – ಹೋಗಿ ಮಲಗಿಕೋ. ಮೈಯಲ್ಲಿ ಹೇಗಿದೆ."

"ಸ್ವಲ್ಪ ಹೊಟ್ಟೆ ನೋಯುತ್ತಿದೆ"

"ಇವತ್ತು ರಾತ್ರೀದು ಕಳೆದು ಹೋಗಲಿ – ನಾಳೆ ಆಸ್ಪತ್ರೆಗೆ ಹೋಗಿ ಬರೋಣ."

ಅಚ್ಚಮ್ಮ ಹೋಗಿ ಮಲಗಿಕೊಂಡ ಮೇಲೆ ವೆಂಕಟ

"ನೀವು ಇದಕ್ಕೂ ಭಾರಿ ಔತಣ ಮಾಡಿಸಬೇಕಾಗತ್ತೇ."

"ಏಕೆ ?"

"ಮಗ ಹುಟ್ಟಿದ್ದಕ್ಕೆ."

"ಗಂಡು ಹುಟ್ಟಿದರೆ ನಾನು ಔತಣ ಮಾಡಿಸುತ್ತೇನೆ, ಹೆಣ್ಣು ಹುಟ್ಟಿದರೆ ನೀನು ಮಾಡಿಸು."

"ಆಗಬಹುದು. ಅದಕ್ಕೇನಂತೆ"

ಎಂದಳು.

ಸಂಜೆಯಾಯಿತು. ಬೀದಿಯ ದೀಪಗಳು ಹಚ್ಚಲ್ಪಟ್ಟವು. ಭಾಗ್ಯಮ್ಮ ಮಗಳನ್ನು ಕರೆದು

"ತಲೆಬಾಚಿಕೊಂಡು ಸೀರೆ ಉಟ್ಟುಕೊಳ್ಳಮ್ಮ" ಎಂದಳು.

"ಎಲ್ಲೀಗೆ ಹೋಗುವುದು ?"

"ಮುತ್ತಮ್ಮ ಕರೆದಿರುವುದು ಮರೆತುಬಿಟ್ಟೆಯಾ ?"

"ಹೋಗಲೇ ಬೇಕೇ ?"

"ಬರುತ್ತೇವೆಂದು ಹೇಳಿದ ಮೇಲೆ ಹೋಗದಿದ್ದರಾಗುತ್ತದೆಯೇ. ಅವಳು ಅಡಿಗೆ ಮಾಡಿಕೊಂಡು ಕಾಯುತ್ತಿರುತ್ತಾಳೆ."

ಕಮಲ ತಲೆಬಾಚಿಕೊಂಡು ಮುಖ ತೊಳೆದುಕೊಳ್ಳುವಷ್ಟರಲ್ಲಿ ಭಾಗ್ಯಮ್ಮ ಎರಡು ಕುಚ್ಚು ಹೂವು ತಂದಳು. ಮಗಳಿಗೂ ಮುಡಿಸಿ ತಾನೂ ಮುಡಿದು ಕೊಂಡಳು.

ಇಬ್ಬರೂ ಗಾಡಿ ಮಾಡಿಕೊಂಡು ಹೊರಟು ಎಂಟುಗಂಟೆಯ ಒಳಗೆ ಮುತ್ತಮ್ಮನ ಮನೆ ಸೇರಿದರು.

ಮುತ್ತಮ್ಮ ಅದೇ ಅಡಿಗೆ ಮುಗಿಸಿ ಹೊರಬರುತ್ತಿದ್ದಳು. ಭಾಗ್ಯಮ್ಮ, ಕಮಲನನ್ನು ಆದರದಿಂದ ಸ್ವಾಗತಿಸಿದಳು.

ಭಾಗ್ಯಮ್ಮ ಅಡಿಗೆ ಮನೆ ಇಣುಕಿಹಾಕಿ ನೋಡಿ

"ಎಷ್ಟೊಂದು ಮಾಡಿಬಿಟ್ಟಿರುವೆ ಮುತ್ತಮ್ಮ. ಇನ್ನು ಯಾರಾದರೂ ಬರುತ್ತಾರೋ ?"

"ಯಾರೂ ಇಲ್ಲ ರಾಮರಾಜಪ್ಪ....ಯಾರೋ ಅವನ ಸ್ನೇಹಿತರಂತೆ."

ಕಮಲ ಅಚ್ಚಮ್ಮನ ಯೋಗಕ್ಷೇಮ ವಿಚಾರಿಸುತ್ತ ಅವಳ ರೂಮಿನಲ್ಲಿ ಹೋಗಿ ಕುಳಿತಳು. ವೆಂಕಟಿ, ನಾಗು ಇಬ್ಬರೂ ಅಲ್ಲಿಗೇ ಹೋಗಿ ಕುಳಿತರು.

ಭಾಗ್ಯಮ್ಮ ಮುತ್ತಮ್ಮನನ್ನು ಕೇಳಿದಳು

"ನಾವು ಯಾವಾಗ ಮನೆಗೆ ಹೋಗುವುದು ?"

"ಬೆಳಿಗ್ಗೆ."

"ರಾಮರಾಜೂಗೆ ಏನು ಹೇಳಿದ್ದೀ ?"

"ಏನೂ ಹೇಳಿಲ್ಲ."

"ಐವತ್ತು ರೂಪಾಯಿ ಕೊಡಿಸಿದರೆ ಕಮಲನ್ನ ಇರೂಂತ ಹೇಳುತ್ತೀನೆ."

"ಕೊಡಿಸ್ತೀನಿ ಸುಮ್ಮನಿರು. ಯಾವ ದೊಡ್ಡ ವಿಷಯ."

"ನೀನು ಪಾಲಿಗೆ ಬರುತ್ತೀಯೇನೋ ?"

"ಇಲ್ಲ ಮಹಾರಾಯ್ತಿ – ಇವತ್ತು ಪಾಲುಕೊಡಬೇಡ. ಸರಿಯೋ ಇನ್ನಾದರೂ ಸಮಾಧಾನವಾಗಿರು."

ನಾಗರಾಜ ತೊಟ್ಟಿಯಲ್ಲಿದ್ದ ಸಾಮಾನುಗಳನ್ನು ಒಂದು ಮೂಲೆಯಲ್ಲಿ ಅಡಗಿಸಿ ಎಲೆ ಹಾಕಿದ.

ರಾಮರಾಜಪ್ಪನ ಧ್ವನಿಯಾಯಿತು. ನಾಗರಾಜ ಬಾಗಿಲಿಗೆ ಹೋಗಿ ಅವನು ಕೊಟ್ಟ ಎರಡು ಕೈಚೀಲಗಳನ್ನು ತಂದು ಒಳಗಿಟ್ಟ.

ರಾಮರಾಜಪ್ಪ, ಅವನ ಗೆಳೆಯರು ಬಂದು ತೊಟ್ಟಿಯಲ್ಲಿ ಕುಳಿತರು.

ರಾಮರಾಜಪ್ಪ ಮೆಲ್ಲನೆ ಮುತ್ತಮ್ಮನನ್ನು

"ಕಮಲ ಬಂದಿದ್ದಾಳೋ ?"

"ಬಂದಿದ್ದಾಳಪ್ಪಾ ಬಂದಿದ್ದಾಳೆ. ನೀನೇ ಅವರಮ್ಮನನ್ನು ಕರೆದು ಅವಳ ಕೈಗೆ ಐವತ್ತು ರೂಪಾಯಿ ಹಾಕಿಬಿಡು."

"ಈಗಲೇ."

"ನನ್ನ ಮಾತು ಕೇಳಪ್ಪಾ. ನಿನಗೆ ಸುಳು ಸೂಕ್ಷ್ಮ ಒಂದೂ ಗೊತ್ತಾಗಲ್ಲ."

ಎಮ್ಮೆಗೆ ಹುಲ್ಲು ಹಾಕುವುದಕ್ಕೆ ಹೊರಗೆ ಹೋಗಿದ್ದ ನಾಗರಾಜ ಅಲ್ಲಿಂದಲೇ ಮುತ್ತಮ್ಮನನ್ನು ಕೂಗಿದ.

"ಏನೋ ?" ಎಂದಳು.

"ಮುತ್ತಾ – ಗುಜ್ಜಪ್ಪ ಯಾಕೋ ಈ ಕಡೆ ಮೂರುನಾಲ್ಕು ಸಲ ಓಡಿಯಾಡಿದ. ರಾಮರಾಜಪ್ಪ ಬಂದದ್ದು ನೋಡಿದನೋ ಏನೋ?"

"ನೋಡಿಕೊಳ್ಳಲಿ ಬಿಡು. ನಮ್ಮನೆ ಒಳಕ್ಕೆ ಬರುವುದಕ್ಕೆ ಅವನಿಗೆಷ್ಟು ಧೈರ್ಯ. ನೀನು ತಲೆಬಾಗಿಲು ಹಾಕಿಕೊಂಡು ಒಳಕ್ಕೆ ಬಂದುಬಿಡು."

ನಾಗರಾಜ ಒಳಕ್ಕೆ ಬಂದಮೇಲೆ ರಾಮರಾಜಪ್ಪ

"ತೊಗೊಂಡು ಬಾರಯ್ಯ." ಎಂದ.

ನಾಗರಾಜ ಮೆಲ್ಲನೆ

"ಗಟ್ಟಿಯಾಗಿ ಮಾತನಾಡಬೇಡಪ್ಪ. ಇಲ್ಲಿ ನೆರೆಹೊರೆ ಚೆನ್ನಾಗಿಲ್ಲ."

ಎಂದು ರಾಮರಾಜಪ್ಪ ತಂದಿದ್ದ ಶೀಷೆಗಳನ್ನೂ, ತಿಂಡಿ ಪೊಟ್ಟಣಗಳನ್ನೂ ತಂದು ಮುಂದಿಟ್ಟ.

ರಾಮರಾಜಪ್ಪ ಶೀಷೆಗಳ ಕಾರ್ಕ್ ತೆಗೆದು ಗ್ಲಾಸುಗಳಿಗೆ ಬಗ್ಗಿಸಿದ್ದ, ನಾಗರಾಜ ಸೋಡಾ ಶೀಷೆಗಳನ್ನು ತೆಗೆದು, ಸ್ವಲ್ಪ ಸ್ವಲ್ಪ ಸೋಡಾ ಬೆರಸಿದ.

ಮುತ್ತಮ್ಮ ಒಂದು ಗ್ಲಾಸು ತೆಗೆದುಕೊಂಡು ಹೋಗಿ ಮೊದಲು ಅಚ್ಚಮ್ಮನಿಗೆ ಕೊಟ್ಟಳು. ಉಳಿದವರಿಗೆಲ್ಲಾ ನಾಗರಾಜ ಗ್ಲಾಸುಗಳನ್ನು ಕೊಟ್ಟ. ಕಮಲ 'ಒಲ್ಲೆ' ಎಂದಳು. ಮುತ್ತಮ್ಮ ಅವಳನ್ನು ಉಪಚರಿಸುತ್ತ

"ತೊಗೋ ಇರಲಿ. ಜಂಬ ಮಾಡಬೇಡ."

ಎಂದಳು.

ರಾಮರಾಜಪ್ಪ ತನ್ನ ಇಬ್ಬರು ಗೆಳೆಯರ ಪರಿಚಯ ಮಾಡಿಕೊಟ್ಟು

"ಇವರು ವೀರಣ್ಣ, ಇವರು ಸೋಮಸುಂದರಂ – ಇಬ್ಬರೂ ನನ್ನ ಜತೆ ಕಂಟ್ರ್ಯಾಕ್ಟು ಮಾಡುತ್ತಿದ್ದಾರೆ."

ಅಲ್ಲಲ್ಲಿ ಹರಡಿದಂತೆ ಕುಳಿತಿದ್ದವರನ್ನೆಲ್ಲಾ ನೋಡಿ ರಾಮರಾಜಪ್ಪ

"ಇಲ್ಲೇ ಬನ್ನಿ – ತಿಂಡಿ ತೊಗೊಳ್ಳಿ – ಎಲ್ಲಾ ಸ್ನೇಹಿತರೇ ಇಲಿರುವವರು. ಸಂಕೋಚವೇಕೆ"

ಎಂದು ಹೇಳಿದ. ನಾಗರಾಜ ತಿಂಡಿಯ ಪೊಟ್ಟಣವೊಂದನ್ನು ಹೆಂಗಸರಿದ್ದೆಡೆಗೆ ಸಾಗಿಸಿದ.

ಮುತ್ತಮ್ಮ, ಭಾಗ್ಯಮ್ಮ, ರಾಮುರಾಜಪ್ಪ, ಅವನ ಗೆಳೆಯರು ಎರಡನೆಯ ಗ್ಲಾಸು ತೆಗೆದುಕೊಂಡರು. ನಾಗರಾಜ ಕೈಹಾಕಿದ. ಮುತ್ತಮ್ಮ ಅವನಿಗೆ

"ನೀನು ಬೇಕಾದರೆ ಆಮೇಲೆ ತೊಗೋ ನಾಗರಾಜ. ನಮಗೆಲ್ಲಾ ಬಡಿಸಬೇಕಾಗುತ್ತದೆ" ಎಂದಳು.

"ಇದೊಂದೇ ಮುತ್ತಾ. ಉಳಿದದ್ದು ಆಮೇಲೆ ಆಗಲಿ"

ಎಂದು ಗ್ಲಾಸ್ ಮುಗಿಸೇಬಿಟ್ಟ.

ಮುತ್ತಮ್ಮ ಮೂರನೆಯ ಗ್ಲಾಸು ಹಿಡಿದು

"ಇದು ಯಾವದಪ್ಪಾ. ಬಹಳ ಜೋರಾಗಿದೆ."

"ವೈಟ್ ಹಾರ್ಸ್ ಮುತ್ತಮ್ಮ. ಆರ್ಮಿ ಮೇಜರನ್ನ ಹಿಡಿದು ನಿನಗೋಸ್ಕರ ಸಂಪಾದಿಸಿಕೊಂಡು ಬಂದೆ."

ಕಮಲ ಸುಮ್ಮನೆ ಕುಳಿತಿದ್ದುದನ್ನು ಕಂಡು ರಾಮುರಾಜಪ್ಪ

"ಯಾಕೆ? ಒಂದೇ ಗ್ಲಾಸು ಸಾಕಾಯಿತೇನು?" ಎಂದು ಕೇಳಿದ.

"ನನಗೆ ಸಾಕು – ಹೆಚ್ಚು ಅಭ್ಯಾಸವಿಲ್ಲ."

"ಇರಲಿ – ಇದೊಂದು ತೊಗೋ – ಏನು ಆಗಲ್ಲ"

ಎಂದ. ಕಮಲ ಎರಡನೆಯ ಗ್ಲಾಸು ಪೂರೈಸಿದಳು. ವೆಂಕಟಿ, ನಾಗು ಮಾತನಾಡದೆ ತುಂಬುತಿದ್ದ ಗ್ಲಾಸುಗಳಿಗೆ ಕೈಹಾಕುತ್ತಿದ್ದರು.

ಮೂರು ಗ್ಲಾಸು ಮುಗಿಸಿ, ಭಾಗ್ಯಮ್ಮ ನಾಲ್ಕನೆಯ ಗ್ಲಾಸಿಗೆ ಕೈಹಾಕಿದಳು. ಅವಳ ಮುಖ ಅಲುಗಾಡಿರಲಿಲ್ಲ. ಕಮಲ ತಾಯಿಗೆ ಮೆಲ್ಲನೆ

"ಸಾಕು ಮಾಡೇ ಅಮ್ಮ." ಎಂದಳು.

"ದೇವರು ಕೊಟ್ಟಾಗ ಬೇಡವೆನ್ನಬಾರದು ಕಣೇ ಹುಚ್ಚಿ. ನೀನು ಇನ್ನೊಂದು ತೊಗೋ ಚೆನ್ನಾಗಿದೆ"

ರಾಮುರಾಜಪ್ಪನಿಗೆ ಅಷ್ಟೇ ಬೇಕಾಗಿತ್ತು. ಒಂದು ಗ್ಲಾಸು ಹಿಡಿದು ಎದ್ದು ಹೋಗಿ ಕಮಲನ ಮುಂದೆ ಕುಳಿತು

"ತೋಗೋ ನನ್ನ ಬಂಗಾರಾ – ಅಮೃತ ಇದ್ದ ಹಾಗಿದೆ"

ಎಂದು ಅವಳ ಗಲ್ಲ ಹಿಡಿದು ಗ್ಲಾಸನ್ನು ಬಾಯಿಗೆ ನೀಡಿದ. 'ಒಲ್ಲೆ' ಎಂದು ಕಮಲ ಮುಖ ತಿರುಗಿಸಿದಳು.

" ತೊಗೋಳಮ್ಮ – ಏನು ಬಡಿವಾರ ಮಾಡ್ತೀ" ಎಂದಳು ಮುತ್ತಮ್ಮ.

" ತಾಯಿ ದೇವರ ಸಮಾನ. ಅವಳ ಮಾತು ತೆಗೆದು ಹಾಕಬಾರದು, ತೊಗೋ ಬಂಗಾರಾ "

ಎಂದು ರಾಮರಾಜಪ್ಪ ಉಪಚರಿಸಿದ. ಕಮಲ ಗ್ಲಾಸು ಮುಗಿಸಿದಳು.

ಪಾನ ಸಮಾರಂಭ ಮುಗಿಯುವ ಹೊತ್ತಿಗೆ ರಾತ್ರಿ ಹನ್ನೊಂದು ಗಂಟೆ ಆಯಿತು. ಯಾರು ಯಾರು ಎಲ್ಲಿ ಎಲ್ಲಿ ಕುಳಿತಿದ್ದರು ಅವರಿಗೆ ಅಲ್ಲಲ್ಲಿಯೇ ಎಲೆಹಾಕಿ ನಾಗರಾಜ ಬಡಿಸಿದ.

ಮಾಡಿದ್ದ ತಿಂಡಿ ತಿನಿಸು ಒಬ್ಬರ ಎಲೆಯಿಂದ ಇನ್ನೊಬ್ಬರ ಎಲೆಗೆ ಧಾರಾಳವಾಗಿ ಓಡಿಯಾಡಿದವು.

ಇನ್ನೂ ಒಂದು ಶೀಷೆ ಉಳಿದಿತ್ತು. ಮುತ್ತಮ್ಮ ಊಟಮುಗಿಸಿ ಬೇಗ ಎದ್ದು ಆ ಶೀಷೆ ಬಚ್ಚಿಟ್ಟಳು. ಒಂದು ಶೀಷೆಯಲ್ಲಿ ಉಳಿದಿದ್ದ ಸ್ವಲ್ಪ ಮದ್ಯ ವನ್ನು ನಾಗರಾಜ ಅಡಿಗೆಯ ಮನೆಗೆ ತೆಗೆದುಕೊಂಡು ಹೋಗಿ ಬಸಿದುಕೊಂಡ.

ವೆಂಕಟಮ್ಮ, ನಾಗು ತೂರಾಡಿಕೊಂಡು ಗೋಮಯದ ಕೆಲಸ ಮುಗಿಸಿ ದರು. ಎಲಡಿಕೆಯ ತಾಟು ಎಲ್ಲರ ಮುಂದೆ ಓಡಿಯಾಡಿತು.

ಮುತ್ತಮ್ಮ ಮನೆಯಲ್ಲಿದ್ದ ಬಟ್ಟೆಗಳನ್ನೆಲ್ಲಾ ಸಂಗ್ರಹಿಸಿ ಎಲ್ಲರಿಗೂ ಹಾಸಿಗೆ, ಹೊದಿಕೆ ಹೊಂದಿಸಿದಳು.

ನಾಗರಾಜ ಅಡಿಗೆಯ ಮನೆಯಲ್ಲಿ ಹಾಸಿಗೆ ಹಾಸಿ ಪವಡಿಸಿದ. ಮುತ್ತಮ್ಮ, ಭಾಗ್ಯಮ್ಮ ಅಚ್ಚಮ್ಮನ ರೂಮಿನಲ್ಲಿ ಮಲಗಿದರು. ವೀರಣ್ಣ ವೆಂಕಟಿಯೊಂದಿಗೆ ಒಂದು ರೂಮು ಸೇರಿದ. ಸೋಮಸುಂದರಂ ನಾಗಿ ತೊಟ್ಟಿಯಲ್ಲಿ ಅನುಕೂಲಮಾಡಿಕೊಳ್ಳಬೇಕಾಯಿತು. ಕಮಲನ ಜತೆ ರಾಮ ರಾಜಪ್ಪ ಬೇರೊಂದು ರೂಮಿಗೆ ತೆರಳಿದ.

ಬೆಳಗಾಯಿತು. ಮುತ್ತಮ್ಮ ಮೊದಲೆದ್ದು ನಾಗರಾಜನನ್ನೆಬ್ಬಿಸಿದಳು. ರಾಮರಾಜಪ್ಪ ಎದ್ದ ಕೂಡಲೆ ಅವನಿಂದ ಹಣ ತೆಗೆದುಕೊಂಡು ನಾಗರಾಜ ಎಲ್ಲರಿಗೂ ದೋಸೆ, ಉದ್ದಿನ ವಡೆ, ಕೇಸರೀಭಾತ್, ಕಾಫಿ ತಂದು ಕೊಟ್ಟ.

ಉಪಾಹಾರ ನಡೆಯುತ್ತಿದ್ದಾಗ ನಾಗರಾಜ ಮುತ್ತಮ್ಮನನ್ನು ಗುಟ್ಟಾಗಿ ಕರೆದು

" ಗುಜ್ಜಪ್ಪ ಮನೆಯ ಮುಂದೆ ನಿಂತುಕೊಂಡು ನನ್ನೇ ದುರದುರನೆ ನೋಡುತ್ತಿದ್ದ ಮುತ್ತಾ " ಎಂದ.

" ಅವನಿಗೇನು ಹೆದರುತ್ತೀಯೋ. ನೋಡಿದರೆ ನೋಡಲಿ "

ಎಂದಳು.

ಅತಿಥಿಗಳಿಗೆ ಮುತ್ತಮ್ಮ ಸೂಚನೆಯಿತ್ತಳು.

" ಎಲ್ಲರೂ ಒಟ್ಟಿಗೆ ಹೋಗಬೇಡಿ. ಇಬ್ಬಿಬ್ಬರಾಗಿ ಹೋಗಿ."

ವೆಂಕಟಮ್ಮ, ನಾಗು ಮೊದಲು ಹೊರಟರು. ಅವರು ಹೊರಟ ಸ್ವಲ್ಪ ಹೊತ್ತಿನ ಮೇಲೆ ವೀರಣ್ಣ, ಸೋಮಸುಂದರಂ ಹೊರಟರು. ಅವರು ಹೊರಟ ಸ್ವಲ್ಪ ಹೊತ್ತು ಕಳೆದಾನಂತರ ರಾಮರಾಜಪ್ಪ ಒಬ್ಬನೇ ಹೊರಡಲನುವಾಗಿ ಕಮಲನನ್ನು ಕರೆದು

" ತಿರುಗಿ ಯಾವಾಗ ಬರುತ್ತೀ " ಎಂದು ಕೇಳಿದ.

" ಹೇಳಿ ಕಳಿಸಿದಾಗ ಬರುತ್ತೇನೆ "

" ನಿಮ್ಮ ಮನೆಗೆ ಬರಬಹುದೇ ?"

" ಛೆ ! ಛೆ ! ನಮ್ಮ ಯಜಮಾನರು ಇದ್ದಾರೆ."

ಅರ್ಥಗರ್ಭಿತವಾಗಿ ರಾಮರಾಜಪ್ಪ ಮುಗುಳ್ನಗೆ ನಕ್ಕು ' ಸರಿಸರಿ ' ಎಂದ.

ವರ್ತನೆ ಹಾಲು ತೆಗೆದುಕೊಂಡು ನಾಗರಾಜ ರಾಮರಾಜಪ್ಪನ ಜತೆ ಹೊರಟ.

ದಾರಿಯಲ್ಲಿ ನಾಗರಾಜ ರಾಮರಾಜಪ್ಪನಿಗೆ

" ನಂಗೇನೂ ಇಲ್ವೇನಪ್ಪಾ ?" ಎಂದು ಕೇಳಿದ.

" ಏನು ಬೇಕಾಗಿತ್ತೋ ನಿನಗೆ "

" ಪರ್ಟಿಲ್ಲ – ಕೋಟಿಲ್ಲ "

ರಾಮರಾಜಪ್ಪ ಅವನ ಕೈಗೆ ಐದುರೂಪಾಯಿ ಹಾಕಿ ಮನೆಯ ಮಾರ್ಗ ಹಿಡಿದ.

ಕೊನೆಯದಾಗಿ ಉಳಿದಿದ್ದವರು ಭಾಗ್ಯಮ್ಮ, ಕಮಲ. ಅವರೂ ಹೊರಟು ನಿಂತರು. ಮುತ್ತಮ್ಮ ಕಮಲಸಿಗೆ

"ಹೇಳಿ ಕಳಿಸಿದರೆ ಬರುತ್ತೀಯೋ" ಎಂದಳು.

"ಬರುತ್ತೇನೆ."

"ನಾಗರಾಜನನ್ನು ಕಳಿಸುತ್ತೇನೆ."

"ಆಗಲಿ."

ಎಂದಳು.

ಮನೆಗೆ ಬಂದ ಮೇಲೆ ತಾಯಿಯೊಂದಿಗೂ ಮಾತನಾಡದೆ ಕಮಲ ಹೋಗಿ ಮಲಗಿಬಿಟ್ಟಳು. ದೇಹ ತುಂಬ ದಣಿದಿತ್ತು. ತಲೆ ಸಿಡಿದು ಹೋಗುವಂತೆ ನೋಯುತ್ತಿತ್ತು. ಕಣ್ಣುಗಳು ಕೆಂಪಗಾಗಿದ್ದವು. ಅವಳ ಮನಸ್ಸು ಅಲ್ಲೋಲ ಕಲ್ಲೋಲವಾಗಿತ್ತು. ಹಿಂದಿನ ದಿನದ ಘಟನೆಗಳನ್ನು ಜ್ಞಾಪಿಸಿಕೊಂಡಳು–ಕಣ್ಣಲ್ಲಿ ನೀರು ಬಂತು–ಮಂಚದ ಎದುರಿಗಿದ್ದ ಶ್ರೀನಾಥನ ಭಾವಚಿತ್ರ ನೋಡಲಾರದೆ ಮುಖ ಮುಚ್ಚಿಕೊಂಡಳು.

ಅಂಚೆಯಾಳು ಕೂಗಿದ ಧ್ವನಿ ಕೇಳಿಬಂತು. ಎದ್ದು ಹೋಗಿ ಅವಸಿತ್ತ 'ಎಕ್ಸ್‌ಪ್ರೆಸ್ ಡಿಲಿವರಿ' ಕಾಗದ ತಂದು ಒಡೆದಳು. ಒಕ್ಕಣೆ ಓದಿದಳು.

'ಹೃದಯೇಶ್ವರಿ.... '

ಕಮಲಸಿಗೆ ದುಃಖ ತಡೆಯಲಾಗಲಿಲ್ಲ. ಮುಂದೆ ಕಾಗದ ಓದದೆ ಅದನ್ನು ದಿಂಬಿನ ಕೆಳಗೆ ಸರಿಸಿದಳು. ಹೃದಯ ಭೇದಿಸುವಂತೆ ದುಃಖ ಉಕ್ಕಿ ಬಂತು.

ಅಚ್ಚಮ್ಮನಿಗೆ ಹಿಂದಿನ ದಿನವೇ ಕಾಣಿಸಿಕೊಂಡ ಹೊಟ್ಟೆಯ ನೋವು ಪ್ರಬಲವಾಯಿತು. ಅವಳು ಹಾಹಾಕಾರ ಮಾಡಲಾರಂಭಿಸಿದಳು. ನಾಗರಾಜನನ್ನು ಅಡಿಗೆ ಕೆಲಸಕ್ಕೆ ನಿಲ್ಲಿಸಿ ಮುತ್ತಮ್ಮ ಅವಳ ಆರೈಕೆಮಾಡಲಾರಂಭಿಸಿದಳು.

ನಾಗರಾಜ ಅಡಿಗೆ ಪೂರೈಸಿದ ಮೇಲೆ ಅವನನ್ನು ಕಳುಹಿಸಿಕೊಟ್ಟು ವೆಂಕಟಮ್ಮನನ್ನು ಸಹಾಯಕ್ಕೆ ಕರೆಸಿಕೊಂಡಳು.

ಸಂಜೆಯವರೆಗೆ ಅಚ್ಚಮ್ಮ ಒಂದೇ ಸಮನಾಗಿ ಪ್ರಸವವೇದನೆ ಅನುಭವಿಸಬೇಕಾಯಿತು.

"ಆಸ್ಪತ್ರೆಗೆ ಕಳಿಸಿದರೆ ಒಳ್ಳೆಯದಲ್ಲವೇ ಮುತ್ತಾ"

ಎಂದು ನಾಗರಾಜ ಕೇಳಿದ.

"ಏನೂ ಪರವಾಯಿಲ್ಲ. ನಾನು ನೋಡಿಕೊಳ್ಳುತ್ತೇನೆ"

ಎಂದು ಮುತ್ತಮ್ಮ ಧೈರ್ಯ ಹೇಳಿದಳು.

ಐದು ಗಂಟೆಯ ಸುಮಾರಿಗೆ ಅಚ್ಚಮ್ಮನಿಗೆ ಪ್ರಸವವಾಯಿತು. ಹೆಣ್ಣು ಮಗು. ಮುತ್ತಮ್ಮನ ಸಂತೋಷಕ್ಕೆ ಪಾರವೇ ಇಲ್ಲ.

ಮುತ್ತಮ್ಮ ಬಾಣಂತಿಗೆ ಸ್ವಲ್ಪ ಬಿಸಿಕಾಫಿ ತಂದು ಕುಡಿಸಿದಳು. ಮಗುವನ್ನು ತೊಳೆದು ಮಲಗಿಸಿಯಾಯಿತು.

ಅಚ್ಚಮ್ಮ ಮಗುವನ್ನು ನೋಡಿರಲಿಲ್ಲ.

"ನಿನ್ನ ಮಗು ನೋಡುವುದಿಲ್ಲವೇ?'

ಎಂದು ಮುತ್ತಮ್ಮ ಕೇಳಿದಳು.

"ಕಣ್ಣು, ಮೂಗು ನೇರವಾಗಿದೆಯೇ?"

"ನೀನೇ ನೋಡು ಹೇಗಿದ್ದಾಳೆಯೋ"

ಎಂದು ಮಗುವನ್ನು ಅಚ್ಚಮ್ಮನ ಪಕ್ಕದಲ್ಲಿ ಮಲಗಿಸಿದಳು. ಅಚ್ಚಮ್ಮ ಎವೆಯಿಕ್ಕದೆ ಮಗುವನ್ನು ದಿಟ್ಟಿಸಿ ನೋಡಿದಳು.

"ಹೌದು – ಅದೇ ಕಣ್ಣು, ಅದೇ ಮೂಗು – ಅವರೇ – ಅವರೇ....!"

ಎಂದುಕೊಂಡಳು. ಕಣ್ಣಲ್ಲಿ ನೀರುಕ್ಕಿಬಂತು.

"ಇನ್ನೂ ಯೋಚನೆ ಬಿಡುವುದಿಲ್ಲವಲ್ಲ. ನಾನೆಲ್ಲಾ ನೋಡಿಕೊಳ್ಳುತ್ತೇನೆ ಸುಮ್ಮನಿರು. ಈಗ ನಿನಗೇನು ಕಡಿಮೆಯಾಗಿರೋದು. ಲಕ್ಷ್ಮಿ ಬೇರೆ ಹುಟ್ಟಿದ್ದಾಳೆ...."

"ನನಗೆ ಇದೊಂದು ಕಡಿಮೆಯಾಗಿದ್ದುದು."

"ಹುಚ್ಚೀ – ಹಾಗೇಕನ್ನುತ್ತೀ. ದೇವರು ಕಣ್ಣುಬಿಟ್ಟು ನೋಡುವ ಕಾಲ ಬಂದಿದೆ. ನಿನ್ನ ಮಗಳು ನಿನಗೆ ಒಳ್ಳೆಯದು ಮಾಡುವುದಕ್ಕೇ ಬಂದಿದ್ದಾಳೆ."

"ಹಾಗೇ ಆಗಲಿ – ನಿಮ್ಮ ಬಾಯಿಹರಕೆ."

ವೆಂಕಟಮ್ಮ ಹೊಲೆಮನೆಯ ಕೆಲಸ ನೋಡಿಕೊಂಡಳು.

ಬಾಣಂತನಕ್ಕೆ ಯಾವ ಕೊರತೆಯೂ ಆಗದಂತೆ ಮುತ್ತಮ್ಮ ನೋಡಿಕೊಂಡಳು.

ಮುತ್ತಮ್ಮ ಮಗುವನ್ನೆತ್ತಿಕೊಂಡು
"ಏನು ಹೆಸರಿಡುತ್ತೀಯಮ್ಮ" ಎಂದು ಕೇಳಿದಳು.
"ನಿಮಗೇನು ಸಂತೋಷವೋ ಅದನ್ನು ಇಡಿ."
"ಲಕ್ಷ್ಮೀ ಎಂತಾ ಹೇಳಿದಿರಿ – ಅದನ್ನೇ ಇಡಿ."
ಎಂದು ವೆಂಕಟಮ್ಮ ಸಲಹೆಯಿತ್ತಳು.

"ನೀವು ಯಾರು ಏನು ಬೇಕಾದರೂ ಕರೆದುಕೊಳ್ಳಿ. ಪುಟ್ಟಪುಟ್ಟದಾಗಿ ಗೊಂಬೆ ಇದ್ದ ಹಾಗಿದೆ. ನಾನು 'ಪುಟ್ಟ' ಎಂದೇ ಕರೆಯುತ್ತೇನೆ."

ಎಂದು ಮುತ್ತಮ್ಮ ತನ್ನ ನಿರ್ಧಾರ ಸೂಚಿಸಿದಳು.

ಮುತ್ತಮ್ಮ ತನ್ನ ಪಕ್ಕದಲ್ಲಿ ಮಲಗಿಸಿದ ಮಗುವನ್ನು ನೋಡುತ್ತ ಅಚ್ಚಮ್ಮನ ಅಂತಃಕರಣ ಉಕ್ಕಿಬಂತು. ಇನ್ನೂ ಸ್ಪಷ್ಟರೂಪು ಪಡೆಯದಿದ್ದ ತನ್ನ ಮಗುವಿನ ಮುಖವನ್ನು ಮೃದುವಾಗಿ ನೇವರಿಸಿ

"ಪಾಪ ಕಾಣದ ಪಾಪದ ಕಂದ"

ಎಂದುಕೊಂಡಳು.

ನಾಗರಾಜನ ಸಂಭ್ರಮವೇ ಸಂಭ್ರಮ. ಬೆಳಿಗ್ಗೆ ಎದ್ದವನೇ ವರ್ತನೆ ಮನೆಗೆ ಹಾಲುಕೊಟ್ಟು ಮುತ್ತಮ್ಮನ ಪರಿಚಯಸ್ಥರ ಮನೆಗೆ ಹೋಗಿ ಅಚ್ಚಮ್ಮ 'ಪುತ್ರೀರತ್ನ'ವನ್ನು ಹೆತ್ತ ಸುದ್ದಿ ಮುಟ್ಟಿಸಿ ಬಂದ.

ಮಧ್ಯಾಹ್ನ ನಾಗು ಬಂದಳು. ಅವಳು ಬಂದ ಸ್ವಲ್ಪ ಹೊತ್ತಿಗೆ ರಾಮರಾಜಪ್ಪ ಬಂದ. ನಾಗು ಮಗುವಿಗೆ ಒಂದು ಬೆಳ್ಳಿಯ ಒಳಲೆ ಓದಿಸಿದಳು. ರಾಮರಾಜಪ್ಪ ಮಗುವಿನ ಕೈಯಲ್ಲಿ ಇಪ್ಪತ್ತು ರೂಪಾಯಿ ಇಟ್ಟ.

ಸಂಜೆಗೆ ಭಾಗ್ಯಮ್ಮ, ಕಮಲ ಬಂದರು. ಮಗುವಿಗೊಂದು ಬೆಳ್ಳಿ ರಂಗಾಣಿ, ಕೈಗೆ ಹತ್ತು ರೂಪಾಯಿ ಓದಿಸಿದರು.

ಕಮಲ ಮಗುವನ್ನೆತ್ತಿ ಕೂತುಕೊಂಡಳು. ಪ್ರೇಮ ಉಕ್ಕಿಬಂದು ಮಗುವನ್ನು ಅಪ್ಪಿ ಮುದ್ದಾಡಿದಳು. ಅವಳ ಮನಸ್ಸು ಖಿನ್ನವಾಯಿತು. ತನಗೊಂದು ಮಗುವಾಗಬೇಕೆಂದು ಕಮಲ ಬಹಳ ದಿವಸಗಳಿಂದ ಬಯಸುತ್ತಿದ್ದಳು.

"ಬೇಡವೆಂದವರಿಗೆ ದೇವರು ಕೊಡುತ್ತಾನೆ. ಬೇಕೆಂದು ಹಾತೊರೆಯುವ ನನಗೆ ಇಲ್ಲವೆನ್ನುತ್ತಾನೆ"

ಎಂದುಕೊಂಡಳು.

ಮಗುವಿನ ಬಗ್ಗೆ ಹೆಚ್ಚು ಉತ್ಸಾಹ ವ್ಯಕ್ತಪಡಿಸದಿದ್ದ ಅಚ್ಚಮ್ಮನ ಮುಂದೆ ಅದನ್ನು ಹಿಡಿದು

"ನೋಡಿರಿ ಹೇಗಿದ್ದಾಳೆ ನಿಮ್ಮ ಮಗಳು" ಎಂದಳು.

"ಬಲು ಚೆನ್ನಾಗಿದ್ದಾಳೆ."

"ಮಗ ಆಗಲಿಲ್ಲವೆಂದು ನಿಮಗೆ ಬೇಸರವೇನೋ ?"

"ಯಾವ ಅಕರಾಸ್ತೆಗಾಗಿ ನಾನು ಮಗನನ್ನು ಬಯಸಬೇಕಮ್ಮ. ಈ ಮಕ್ಕಳನ್ನು ಹೆತ್ತು ನಾನು ಅವರನ್ನು ಯಾವ ಪಾಡಿಗೆ ಈಡುಮಾಡಬೇಕೋ?"

"ನಿಮಗೆ ಬೇಡವಾದರೆ ಹೇಳಿ – ನಾನು ತೆಗೆದುಕೊಂಡು ಹೋಗುತ್ತೇನೆ."

ಈ ಮಾತು ಕೇಳಿಸಿಕೊಂಡ ಮುತ್ತಮ್ಮ, ಅಚ್ಚಮ್ಮನ ಬಾಯಲ್ಲಿ ಉತ್ತರ ಬರುವುದರೊಳಗಾಗಿ ಒಳಗೆ ಬಂದು

"ಹೂ ! ಯಾರು ನನ್ನ ಪುಟ್ಟೀನ ಕರೆದುಕೊಂಡು ಹೋಗೋರು. ನಾನು ಯಾಕೆ ಕೊಟ್ಟೇನು" ಎಂದಳು.

"ನೀವು ತಾಯಿಯಾಗೂ ಪುಟ್ಟೀನ ಕೊಡುವ ಹಾಗಿಲ್ಲ."

"ಅದು ಬೇರೆ ವಿಷಯ. ನಮ್ಮ ನಮ್ಮ ಮಾತು. ನಿನಗೇಕೆ ಕಮಲ" ಎಂದು ಮುತ್ತಮ್ಮ ಮಾತು ಹಾರಿಸಿದಳು.

ನಾಗರಾಜ ಮಗುವಿಗೆ ಬೆಚ್ಚನೆಯ ಉಣ್ಣೆಬಟ್ಟೆಗಳನ್ನು ತಂದಿತ್ತ.

ಅಚ್ಚಮ್ಮನ ಬಾಣಂತನ ಸಾಂಗವಾಗಿ ಮುಂದುವರಿಯಿತು. ಮುತ್ತಮ್ಮನೇ ಖಾರಕೊಟ್ಟು, ದಿನ ಬಿಟ್ಟು ದಿನ ಬಾಣಂತಿಗೆ ನೀರು ಹಾಕಿ ಉಪಚರಿಸಿದಳು.

ಅಚ್ಚಮ್ಮನಿಗೆ ಬಹಳ ಸಂಕೋಚವಾಗುತ್ತಿತ್ತು. ಒಂದೆರಡು ಬಾರಿ ತನ್ನಲ್ಲಿದ್ದ ಹಣ ಮುತ್ತಮ್ಮನಿಗೆ ಕೊಡಲು ಹೋದಳು. ಮುತ್ತಮ್ಮ ಅದನ್ನು ಕೈಯಿಂದಲೂ ಮುಟ್ಟಲಿಲ್ಲ.

"ನಿಮಗೆಷ್ಟು ಕಷ್ಟ – ನನ್ನಿಂದ ಎಷ್ಟು ಖರ್ಚು."

"ಆದರೆ ಆಗಲಿ ಬಿಡು – ಯಾಕೆ ಯೋಚನೆ ಮಾಡುತ್ತೀ. ನಾನೂ ನಿನ್ನ ಋಣ ತಿಂದಿದ್ದೀನಿ. ಈಗ ತೀರಿಸಿದರೇನು ನಷ್ಟ."

"ನಾನೆದ್ದು ಕೆಲಸಕಾರ್ಯ ನೋಡಿಕೊಳ್ಳುವುದು ಯಾವಾಗ ಮುತ್ತಮ್ಮ ನವರೇ."

"ಐದು ತಿಂಗಳು ತುಂಬುವವರೆಗೆ ನಿಶ್ಚಿಂತಳಾಗಿರು. ಮುಂದೆ ಇದ್ದೇ ಇದೆ."

"ಐದು ತಿಂಗಳು ನಾನು ಆರೈಕೆ ಮಾಡಿಕೊಳ್ಳಬೇಕೇ ?"

"ನೋಡು ಅಚ್ಚಮ್ಮ. ಹೆಂಗಸಿನ ದೇಹ ಬಹಳ ನಾಜೂಕು. ಅವರು ತಮ್ಮ ಆರೋಗ್ಯ ಎಷ್ಟು ನೋಡಿಕೊಂಡರೂ ಸಾಲದು. ನಿನ್ನ ನನ್ನ ಹಾಗಿರುವವರು ಆದರ ಹತ್ತರಷ್ಟು ಆರೈಕೆ ಮಾಡಿಕೊಳ್ಳಬೇಕು. ನಾಳೆ ಹೆಚ್ಚು ಕಡಿಮೆಯಾದರೆ ನಿನಗೆ ಯಾರು ಮಾಡುತ್ತಾರೆ ಹೇಳು."

ಮುತ್ತಮ್ಮನ ಆದರ ಅಚ್ಚಮ್ಮನನ್ನು ಅರೆಮೂಕಳನ್ನಾಗಿ ಮಾಡಿತು. ತನ್ನ ದೈವ ಕೆಟ್ಟುದಾಗಿದ್ದರೂ ಮುತ್ತಮ್ಮನ ಮನೆ ತೋರಿಸಿತಲ್ಲಾ ಎಂದು ಸಮಾಧಾನಪಟ್ಟುಕೊಂಡಳು.

ನಾಗರಾಜನ ಸ್ನೇಹಿತರ, ಪರಿಚಯಸ್ಥರ ವ್ಯೂಹವೂ ವಿಸ್ತರಿಸುತ್ತ ಬಂತು. ಅವನ ವೃತ್ತಿ ಬಂಧುಗಳಾದ ರಾಮು, ಗಣೇಶ, ಧರ್ಮ ಇವರ ಸ್ನೇಹವಾದ ಮೇಲೆ ಅವನ ಸಂಪಾದನೆಯೂ ಕುದುರುತ್ತ ಬಂತು. ಬೆಳಿಗ್ಗೆ ಸಂಜೆ ಕ್ರಮವಾಗಿ ಮಾರ್ಕೆಟ್‌ಮುಂದೆ ಒಂದೊಂದು ಗಂಟೆ ಕಾಲ ಹಾಜರಿ ಹಾಕುತ್ತಿದ್ದ. ಯಾರಾದರೂ ಸಿಕ್ಕಿದರೆ ಅವರನ್ನು ವೆಂಕಟಮ್ಮನ ಮನೆಗೋ ನಾಗಿ ಮನೆಗೋ ಕರೆದುಕೊಂಡು ಹೋಗಿ ಎರಡು ಮೂರು ರೂಪಾಯಿ ಸಂಪಾದನೆ ಮಾಡಿಕೊಳ್ಳುತ್ತಿದ್ದ.

ಬೇಸರವಾದಾಗ ನಾಗರಾಜ ಭಾಗ್ಯಮ್ಮನ ಮನೆಗೆ ಹೋಗಿ ಕುಳಿತು ಹರಟೆಕೊಚ್ಚುತ್ತಿದ್ದ. ಅಲ್ಲಿ ಅವನಿಗೆ ಪಾಪಕ್ಕನ ಪರಿಚಯವೂ ಆಯಿತು. ತನ್ನ ಹೊರಗಿನ ಸಂಪಾದನೆಯ ವಿಷಯ ಮುತ್ತಮ್ಮನ ಕಿವಿಗೆ ಬೀಳದಂತೆ ಎಚ್ಚರನಾಗಿದ್ದ.

ಶ್ರೀನಾಥ ಮದರಾಸಿಗೆ ಹೋಗಿ ಒಂದು ತಿಂಗಳಾಗುತ್ತ ಬಂತು. ಕಮಲನಿಗೆ ಪ್ರತಿನಿತ್ಯ ಪತ್ರ ಬರೆಯುವುದು ಅವನ ದಿನಚರಿಯಾಯಿತು. ತಿಂಗಳ ಮೊದಲನೆಯ ತಾರೀಖು ಕಮಲನ ಹೆಸರಿಗೆ ನೂರು ರೂಪಾಯಿ ಮನಿಯಾರ್ಡರು ಮಾಡಿದ. ಣಣ ಕೈಸೇರಿದ ದಿನ ಕಮಲ ಬಹಳ ವಿಶ್ವಾಸ ಪೂರ್ವಕವಾದ ಪತ್ರ ಬರೆದು

“ನೀವು ಹೋಗಿ ಒಂದು ತಿಂಗಳಾಯಿತು. ಮಧ್ಯೆಮಧ್ಯೆ ಬಂದು ಹೋಗುತ್ತೇನೆಂದು ಹೇಳಿದ್ದಿರಿ. ಇಷ್ಟುಬೇಗ ನನ್ನ ಮರೆತುಬಿಟ್ಟಿರಾ? ನಿಮ್ಮನ್ನು ಬಿಟ್ಟು ನಾನು ಕಾಲ ತಳ್ಳುವುದು ಬಹಳ ಕಷ್ಟವಾಗಿದೆ. ಒಂದೊಂದು ಕ್ಷಣವೂ ಒಂದೊಂದು ಯುಗದಂತೆ ಕಾಣುತ್ತಿದೆ. ಮಧ್ಯೆ ಸ್ವಲ್ಪ ಬಿಡುವು ಮಾಡಿಕೊಂಡು ಒಂದು ದಿನ ಮಟ್ಟಿಗಾದರೂ ಬಂದು ಹೋಗಿ”

ಎಂದು ಪ್ರಾರ್ಥಿಸಿದ್ದಳು.

ಮದರಾಸು ಬಿಡುವುದು ಶ್ರೀನಾಥನಿಗೆ ಸಾಧ್ಯವಾಗಲಿಲ್ಲ. ‘ಪ್ರದರ್ಶನ ಕೈಪಿಡಿ’ಯ ಕೆಲಸ ಭರದಲ್ಲಿ ಸಾಗಿತ್ತು. ಸಂಪಾದಕೀಯ ಕೆಲಸವಲ್ಲದೆ ಮುದ್ರಣದ ಕೆಲಸವನ್ನೂ ಅವನೇ ನೋಡಿಕೊಳ್ಳಬೇಕಾಗಿತ್ತು. ಚೆಟ್ಟಿಯಾರರು ಎಲ್ಲ ವಿಷಯಗಳಿಗೂ ಅವನ ಸಲಹೆ ಕೇಳುತ್ತಿದ್ದರು.

ಚೆಟ್ಟಿಯಾರರ ಕೆಲಸಗಳನ್ನೆಲ್ಲಾ ಮಾಡಿಕೊಟ್ಟಮೇಲೆ ಉಳಿಯುತ್ತಿದ್ದ ವೇಳೆಯನ್ನು ಶ್ರೀನಾಥ ದುರ್ವ್ಯಯ ಮಾಡುತ್ತಿರಲಿಲ್ಲ. ಮದರಾಸು ಬಿಡುವುದರೊಳಗಾಗಿ ಎರಡು ಹೊಸ ಕಾದಂಬರಿಗಳನ್ನು ಮುಗಿಸಿ ಹಸ್ತಪ್ರತಿಯನ್ನು ತೆಗೆದುಕೊಂಡು ಹೋಗಬೇಕೆಂದು ನಿಶ್ಚಯಮಾಡಿದ್ದ. ಹಗಲಿರುಳೂ ಅವನಿಗದೇ ಕೆಲಸವಾಯಿತು. ನಿದ್ರಾಹಾರಗಳನ್ನೂ ನಿರ್ಲಕ್ಷಿಸತೊಡಗಿದ.

ಒಂದೂವರೆ ತಿಂಗಳು ಕಳೆಯಿತು. ಕೈಪಿಡಿ ಕೆಲಸ ಒಂದು ಘಟ್ಟಕ್ಕೆ ಬಂದಿತ್ತು. ಒಂದು ಕಾದಂಬರಿ ಮುಗಿಸಿದ್ದ. ಮಧ್ಯಾಹ್ನ ಕಛೇರಿಗೆ ಬಂದ ಚೆಟ್ಟಿಯಾರರಿಗೆ ವಿನಯಪೂರ್ವಕವಾಗಿ

“ಕೈಪಿಡಿ ನೂರುಪುಟ ಅಚ್ಚಾಗಿದೆ. ನಾಳೆ ನಾಡಿದ್ದು ಮುದ್ರಣಾಲಯಕ್ಕೆ ರಜ. ನಾಡಿದ್ದು ಹೇಗೂ ಭಾನುವಾರ.”

ಎಂದು ಹೇಳಿದ. ಈ ಒಕ್ಕಣೆ ಏತಕ್ಕೆ ಶ್ರೀನಾಥ ಹಾಕುತ್ತಿದ್ದಾನೆಂದು ಚೆಟ್ಟಿಯಾರರಿಗೆ ಕೂಡಲೆ ಅರ್ಥವಾಗಲಿಲ್ಲ.

“ಹೌದು. ಏನು ಮಾಡಬೇಕೆಂದು ಹೇಳುತ್ತಿರುವಿರಿ.”

“ನೀವು ಅಪ್ಪಣೆಕೊಟ್ಟರೆ ಒಂದೆರಡು ದಿವಸ ಊರಿಗೆ ಹೋಗಿಬರುತ್ತೇನೆ ಇವತ್ತು ರಾತ್ರಿ ಹೊರಟು ನಾಳೆ ನಾಡಿದ್ದು ಅಲ್ಲಿದ್ದು ಆಚೆಯ ನಾಡಿ ರಾತ್ರಿ ಹೊರಟು ಬರುತ್ತೇನೆ.”

“ಇಲ್ಲಿಯ ಕೆಲಸ?”

"ಎಲ್ಲಾ ಮುಗಿಸಿದ್ದೇನೆ. ಪ್ರೆಸ್ಸಿಗೆ ಮ್ಯಾಟರೂ ಕೊಟ್ಟಿದ್ದಾಗಿದೆ. ಚಿಲ್ಲರೆ ಕೆಲಸವನ್ನೆಲ್ಲಾ ಸಂಜೆಯೊಳಗಾಗಿ ಮುಗಿಸುತ್ತೇನೆ."

"ಊರಿಗೆ ಹೋದಮೇಲೆ ಒಂದೆರಡು ದಿವಸ ತಡವಾಗೇ ಆಗುತ್ತದೆ."

"ಖಂಡಿತವಾಗಿ ಆಗುವುದಿಲ್ಲ. ಸೋಮವಾರ ಬೆಳಿಗ್ಗೆ ಎಲ್ಲಿದ್ದರೂ ನಾನು ಮದರಾಸು ತಲಪುತ್ತೇನೆ."

"ಹೋಗಿ ಬನ್ನಿ. ಆದರೆ ಸೋಮವಾರ ಒರುವುದನ್ನು ಮರೆಯಬೇಡಿ. ನೀವು ಭಾನುವಾರ ರಾತ್ರಿಯೇ ಬೆಂಗಳೂರಿನಿಂದ ಹೊರಡಬೇಕಾಗುತ್ತದೆ."

"ಹೌದು."

"ಖರ್ಚಿಗೆ ಹಣ ಬೇಕಾಗಿತ್ತೇ?"

"ಬೇಕಾಗಿತ್ತು. ಸ್ವಲ್ಪ ಹೆಚ್ಚಾಗಿ ಬೇಕಾಗಿತ್ತು."

"ಎಷ್ಟು ?"

"ಐದುನೂರು ರೂಪಾಯಿ ಕೊಡಲು ಸಾಧ್ಯವೇ?"

"ಮುನ್ನೂರು ತೆಗೆದುಕೊಳ್ಳಿ."

"ಸಾಲುವುದಿಲ್ಲವಲ್ಲ."

"ನಾಲ್ಕುನೂರು ತೆಗೆದುಕೊಳ್ಳಿ – ಮ್ಯಾನೇಜರಿಗೆ ಹೇಳಿ ಹೋಗುತ್ತೇನೆ. ನೀವು ಹಣ ಅವರಿಂದ ಪಡೆಯಬಹುದು"

"ತುಂಬ ಉಪಕಾರವಾಯಿತು"

ಶ್ರೀನಾಥ ಕಛೇರಿಯ ಕೆಲಸ ಮುಗಿಸಿಕೊಂಡು ಪೇಟೆಯ ಕಡೆ ರತ್ನಂ ಜತೆ ಹೋದ. ರತ್ನಂ ಸಹಾಯದಿಂದ ನಾಲ್ಕಾರು ಅಂಗಡಿ ನೋಡಿ ಹೊಸ ಮಾದರಿಯ ಎರಡು ಕಂಚಿ ಸೀರೆಗಳು, ಅವುಗಳಿಗೊಪ್ಪುವ ಕುಪ್ಪಸದ ಕಣ ಗಳನ್ನು ಕೊಂಡು, ದಾರಿಯಲ್ಲಿ ಒಂದು ಬುಟ್ಟಿತುಂಬ ಹಣ್ಣು ಕೊಂಡುಕೊಂಡ. ಬೆಂಗಳೂರಿನ ತನ್ನ ಊಟದ ಹೋಟೆಲ್ ಯಜಮಾನನಿಗೆ ತಾನು ಬೆಳಿಗ್ಗೆ ಬರುವುದಾಗಿಯೂ, ರೂಮು ಬಾಗಿಲು ತೆಗೆಸಿ ಶುಚಿ ಮಾಡಿಸಿರಬೇಕೆಂದು ತಾರು ಮಾಡಿದ. 'ಕಮಲನಿಗೆ ತಾರುಮಾಡಿ ನಾನು ಬರುವ ವಿಷಯ ತಿಳಿಸಲೇ' ಎಂದು ಯೋಚಿಸಿದ.

'ಬೇಡ – ಅವಳಿಗೆ ನಾನು ಬರುವ ವಿಷಯ ತಿಳಿಸುವುದು ಬೇಡ. ಅವಳಿಗೆ ಆಶ್ಚರ್ಯವಾಗಬೇಕು'

ಎಂದು ನಿರ್ಧರಿಸಿದ.

ಊಟ ಮುಗಿಸಿ ಹೊರಡಲು ಸಿದ್ಧನಾಗುವ ವೇಳೆಗೆ ಪ್ರೆಸ್ಸಿನಿಂದ ನಲವತ್ತೆಂಟು ಪುಟಗಳಷ್ಟು ಪ್ರೂಫ್ ಬಂದಿತು. ಪ್ರೂಫ್ ತಂದ ಹುಡುಗ "ಇದನ್ನು ಈಗಲೇ ನೋಡಿಕೊಡಬೇಕಂತೆ. ನಾಳೆ ನಾಡಿದ್ದು ರಜಾ. ಇವತ್ತು ರಾತ್ರಿಯೇ ಇದನ್ನು ಪ್ರಿಂಟ್ ಮಾಡುತ್ತಾರಂತೆ."

ಎಂದು ಹೇಳಿದ. ಶ್ರೀನಾಥನ ಮನಸ್ಸು ಕದಡಿಹೋಯಿತು. ಆಶಾ ಭಂಗವಾದುದಕ್ಕೆ ತುಂಬ ಬೇಸರವಾಯಿತು. ಪ್ರೂಫು ನೋಡಿಕೊಟ್ಟು ರೈಲು ಹತ್ತುವುದು ದುಸ್ಸಾಧ್ಯವಾಗಿತ್ತು. ವಿಧಿಯಿಲ್ಲದೆ ಪ್ರಯಾಣ ನಿಲ್ಲಿಸಿ ಪ್ರೂಫಿಗೆ ಕೈ ಹಚ್ಚಿದ.

ಪ್ರೂಫ್ ನೋಡಿ ಮುಗಿಸುವ ವೇಳೆಗೆ ರಾತ್ರಿ ಹತ್ತು ಗಂಟೆಯಾಗಿತ್ತು. ಈ ವೇಳೆಗೆ ರೈಲು ಮದರಾಸಿಗೆ ದೂರದಲ್ಲಿ ಅಂಬತ್ತೂರಿನಲ್ಲೋ ಆವಡಿಯಲ್ಲೋ ಇದ್ದಿತು.

ರಾತ್ರಿ ಹಾಗೂ ಹೀಗೂ ಕಳೆದ. ಗಂಟೆಗೊಮ್ಮೆ ಎದ್ದು ಗಡಿಯಾರ ನೋಡುತ್ತಿದ್ದ. ಬೆಳಗಾಯಿತು. ಮುಖತೊಳೆದುಕೊಂಡು ರೈಲ್ವೆ ಸ್ಟೇಷನ್ನಿಗೆ ಒಂದು ಟ್ಯಾಕ್ಸಿ ಮಾಡಿಕೊಂಡು ಹೊರಟ.

ಅಂತೂ ಆದಿನ ಬೆಳಿಗ್ಗೆ, ಮಧ್ಯಾಹ್ನವನ್ನು ಶ್ರೀನಾಥ ರೈಲಿನಲ್ಲಿ ಕಳೆಯ ಬೇಕಾಗಿತ್ತು. ರೈಲು ಬೆಂಗಳೂರು ಮುಟ್ಟುವುದು ಸಂಜೆ ಏಳು ಗಂಟೆಗೆ. ಮನಸ್ಸಿನಲ್ಲಿ ಮುಂಡಿಗೆ ಮಾಡಿಕೊಂಡ. ನೇರವಾಗಿ ಕಮಲನ ಮನೆಗೇ ಹೋಗುವುದು – ಅಲ್ಲಿಯೇ ನೀರು ಕಾಯಿಸಿ ಸ್ನಾನ ಮಾಡುವುದು – ಊಟ ಮುಗಿಸಿ ರಾತ್ರಿ ಅಲ್ಲಿಯೇ ಕಳೆದು ಬೆಳಿಗ್ಗೆ ರೂಮಿನ ಕಡೆ ಹೋಗುವುದೆಂದು.

ರೈಲು ವೇಗವಾಗಿಯೇ ಹೋಗುತ್ತಿತ್ತು. ಆದರೆ ಅದರ ವೇಗ ಶ್ರೀನಾಥನ ಮನಸ್ಸಿನ ವೇಗ ಮುಟ್ಟುತ್ತಿರಲಿಲ್ಲ.

ಬೆಂಗಳೂರು ಸ್ಟೇಷನ್ನಿನ ದೀಪಗಳನ್ನು ದೂರದಲ್ಲಿ ಕಂಡಾಗ ಶ್ರೀನಾಥನ ಮನಸ್ಸು ಹೊಡೆದುಕೊಳ್ಳತೊಡಗಿತು. ಸಾಮಾನುಗಳನ್ನು ತೆಗೆದು ಬಾಗಿಲು ಬಳಿಯಲ್ಲಿಟ್ಟುಕೊಂಡು, ರೈಲು ನಿಂತೊಡನೆಯೇ ಹೊರಗೆ ಧುಮುಕಿದ.

ಕೂಲಿಯವರ ಕೈಯಿಂದ ಪಾರಾಗಿ ಹೊರಗೆ ಬಂದು ಒಂದು ಗಾಡಿ ಗೊತ್ತುಮಾಡಿಕೊಂಡು ನೇರವಾಗಿ ಕಬ್ಬನ್‌ಪೇಟೆಗೆ ಹೊಡೆಸಿದ. ಗಾಡಿ

ಬಂದು ಟ್ರೆಲಿಸ್ ಕೆಲಸ ಮಾಡಿದ್ದ ಬಾಗಿಲುಮುಂದೆ ನಿಂತಿತು. ಒಳಗೆ ದೀಪ ಕಾಣಲಿಲ್ಲ. ಶ್ರೀನಾಥ ಗಾಡಿಯಿಂದಿಳಿದು ಅತ್ತಕಡೆಯ ಬಾಗಿಲು ನೋಡಿದ. ಬೀಗ ಹಾಕಿತ್ತು. ಅವನ ಮನಸ್ಸು ಕುಸಿದು ಹೋಯಿತು. ಸ್ವಲ್ಪ ಕೋಪವೂ ಬಂತು.

"ಸಿನೀಮಾಗೆ ಹೋಗಿರಬಹುದು. ನಾನು ಬರುವ ವಿಷಯ ತಿಳಿಸಿದ್ದರೆ ಚೆನ್ನಾಗಿತ್ತು"

ಎಂದುಕೊಂಡ. ಸಿನೀಮಾ ಮುಗಿಯುವುದು ಒಂಭತ್ತು ಗಂಟೆಗೆ. ಅಲ್ಲಿಯವರೆಗೆ ಸಾಮಾನುಗಳನ್ನು ಕಮಲನ ಮನೆಯ ಬಾಗಿಲಲ್ಲಿಟ್ಟುಕೊಂಡು ಕುಳಿತಿರುವುದು ನಗೆಗೇಡು. ಗಾಡಿಯಲ್ಲಿ ಬಂದು ಕುಳಿತು ಶಂಕರಪುರಕ್ಕೆ ಹೊರಡಿಸಿದ.

ನಾರಣಪ್ಪನ ಹೊಟೇಲ್ ಮುಂದೆ ಗಾಡಿ ನಿಲ್ಲಿಸಿ ಒಳಕ್ಕೆ ಹೋದ ಶ್ರೀನಾಥನನ್ನು ಕಂಡು ನಾರಣಪ್ಪನಿಗೆ ಆನಂದವಾಯಿತು.

"ಯಾವಾಗ ಬಂದಿರಿ ಸ್ವಾಮಿ."

"ಇದೇ ಬರುತ್ತಾ ಇದ್ದೇನೆ ನಾರಣಪ್ಪನವರೇ – ನನ್ನ ತಾರು ಬಂತೇ?"

"ಬಂತು. ರೂಮು ಕ್ಲೀನು ಮಾಡಿಸಿದ್ದೇನೆ. ಬೀಗದ ಕೈ ನೀವು ತೆಗೆದುಕೊಂಡು ಹೋಗಿದ್ದಿರಿ – ನಾನು ಬೀಗ ಒಡೆದು ಬೇರೆ ಬೀಗ ಹಾಕಿದ್ದೇನೆ."

ಎಂದು ಬೀಗದಕೈ ಕೊಟ್ಟು

"ಊಟ ಕಳಿಸಿಕೊಡಲೇ?"

"ಮೊದಲು ಸ್ವಲ್ಪ ಬಿಸಿಕಾಫಿ ಕಳಿಸಿಕೊಡಿ – ಸ್ನಾನಮಾಡಬೇಕಾಗಿದೆಯಲ್ಲಾ."

"ಬಿಸಿನೀರು ಒಂದು ಬಕೆಟ್ ಕಳಿಸಿಕೊಡುತ್ತೇನೆ."

"ನೀರಿನ ಜತೆ ಊಟವನ್ನೂ ಕಳಿಸಿಬಿಡಿ."

"ಆಯ್ತು."

ರೂಮು ಬಾಗಿಲು ತೆಗೆದುಕೊಂಡು ಶ್ರೀನಾಥ ಒಳಕ್ಕೆ ಬಂದ. ನಾರಣಪ್ಪ ರೂಮನ್ನು ಸ್ವಚ್ಛಮಾಡಿಸಿದ್ದ. ಶ್ರೀನಾಥನ ಕಾಗದಗಳನ್ನೆಲ್ಲಾ ಮೇಜಿನ ಮೇಲೆ ಜೋಡಿಸಿಟ್ಟಿದ್ದ. ಶ್ರೀನಾಥ ಅವುಗಳ ವಿಳಾಸವನ್ನೊಮ್ಮೆ ನೋಡಿ ಕಾಗದಗಳನ್ನು ಮೇಜಿನ ಮೇಲೇ ಒಗೆದ.

ಕಾಫಿ – ಅದರ ಜತೆ ಸ್ನಾನಕ್ಕೆ ನೀರು ಬಂತು. ಶ್ರೀನಾಥ ಕಾಫಿ ಕುಡಿದು, ಸ್ನಾನಮುಗಿಸಿ ಶುಚಿಯಾದ ಬಟ್ಟೆ ಧರಿಸುವ ವೇಳೆಗೆ ಊಟವೂ ಬಂತು.

ಊಟ ಮುಗಿಸಿದವನೇ ರೂಮು ಬಾಗಿಲು ಬೀಗ ಹಾಕಿಕೊಂಡು ಗಾಡಿ ಮಾಡಿಕೊಂಡು ಸೀರೆಯ ಗಂಟನ್ನು ಕೈಯಲ್ಲಿ ಹಿಡಿದು ಹೊರಟ. ಗಂಟೆ ಒಂಭತ್ತಾಗಿತ್ತು. ಕಮಲನ ಮನೆಯ ಬಾಗಿಲಿಗೆ ಬರುವ ವೇಳೆಗೆ ಒಂಭತ್ತೂ ಕಾಲಾಗಿತ್ತು. ಮನೆಗೆ ಯಥಾಪ್ರಕಾರ ಬೀಗ ಮುದ್ರೆಯಾಗಿತ್ತು. ಶ್ರೀನಾಥನ ಮನಸ್ಸು ಧಸಕ್ಕೆಂದಿತು.

"ಯಾವದಾದರೂ ಊರಿಗೆ ಹೋಗಿರಬಹುದೇ ?"

ಎಂದು ಯೋಚಿಸಿದ. ಮರುಕ್ಷಣವೇ

"ಊರಿಗೆ ಹೋಗುವುದಿದ್ದರೆ ಕಮಲ ಬರೆದು ತಿಳಿಸುತ್ತಿದ್ದಳು. ಪ್ರಾಯಶಃ ಒಂದು ಪಿಕ್ಚರ್ ನೋಡಿಕೊಂಡು ಇನ್ನೊಂದು ಪಿಕ್ಚರಿಗೆ ಹೋಗಿದ್ದಾರೆ"

ಎಂದು ತರ್ಕಿಸಿಕೊಂಡ. ಎರಡನೆಯ ಪಿಕ್ಚರ್ ಮುಗಿಯಬೇಕೆಂದರೆ ರಾತ್ರಿ ಹನ್ನೊಂದುವರೆಗಂಟೆ. ಅಲ್ಲಿಯವರೆಗೆ ತಾನೇನು ಮಾಡಬೇಕೆಂದು ವಿಚಾರಮಾಡಿ ಸಮೀಪದಲ್ಲಿದ್ದ 'ಶಾರದಾ' ಥಿಯೇಟರಿಗೆ ಹೋಗಿ ಹೊತ್ತು ತಳ್ಳುವುದೇ ಹಿತವೆಂದು ನಿರ್ಧರಿಸಿದ.

ಶಾರದಾ ಥಿಯೇಟರಿನಲ್ಲಿ ಚಿತ್ರ ಯಾವದೆಂದೂ ನೋಡುವುದಕ್ಕೆ ಶ್ರೀನಾಥ ಪ್ರಯತ್ನಿಸಲಿಲ್ಲ. ಅವನ ಕಣ್ಣುಗಳು ಗಡಿಯಾರದ ಮೇಲೆ ನೆಟ್ಟಿದ್ದವು.

ಅಂತೂ ಇಂತೂ ಹನ್ನೊಂದುವರೆಯಾಯಿತು. ಚಿತ್ರ ಮುಗಿಯಿತು. ಶ್ರೀನಾಥ ಎದ್ದವನೇ ನೇರವಾಗಿ ಕಮಲನ ಮನೆಗೆ ಬಂದ. ಮನೆಗೆ ಬೀಗ ಇರಲಿಲ್ಲ. ಮನಸ್ಸು ಉದ್ವೇಗಗೊಂಡಿತು.

ಬಾಗಿಲು ಒಡೆದ. ಒಳಗಿನಿಂದ ಮಾರುತ್ತರವಿಲ್ಲ. ಟ್ರೆಲ್ಲಿಸ್ ಕೆಲಸ ಮಾಡಿದ್ದ ಬಾಗಿಲು ಕಡೆ ಹೋಗಿ ಬಡಿದ. ಎಂಟು ಹತ್ತು ಸಲ ಬಡಿದ ಮೇಲೆ ಒಳಗಿನಿಂದ ಭಾಗ್ಯಮ್ಮನ ಧ್ವನಿ ಕೇಳಿಸಿತು

"ಯಾರು ? ಯಾರಪ್ಪಾ."

"ನಾನಮ್ಮ... ಬಾಗಿಲು ತೆಗೆ."

"ನಾನು ಎಂದರೆ ಯಾರು ? ಹೆಸರು ಹೇಳಿ."

"ಶ್ರೀನಾಥ....ಶ್ರೀನಾಥ."

ತೊಟ್ಟಿ ದೀಪ ಹೊತ್ತಿಸಿ ಭಾಗ್ಯಮ್ಮ ಬಾಗಿಲು ತೆಗೆದಳು. ಶ್ರೀನಾಥ ತೊಟ್ಟಿಯಲ್ಲಿದ್ದ ಕುರ್ಚಿಯ ಮೇಲೆ ಕುಳಿತು ಕೈಯಲ್ಲಿದ್ದ ಗಂಟನ್ನು ಮೇಜಿನ ಮೇಲಿಟ್ಟ.

"ಯಾವಾಗ ಬಂದಿರಪ್ಪಾ ?" ಎಂದು ಕೇಳಿದಳು.

"ಏಳರ ಗಾಡಿಗೆ ಬಂದೆ."

"ನಾವು ಮನೆಯಲ್ಲಿರಲಿಲ್ಲ."

"ಹೌದು. ನಾನು ನೇರವಾಗಿ ಇಲ್ಲಿಗೇ ಬಂದೆ. ಮನೆ ಬೀಗಹಾಕಿತ್ತು."

"ಸಿನೀಮಾಕ್ಕೆ ಹೋಗಿದ್ದೆವು."

"ಬರುವುದಕ್ಕೆ ಯಾಕೆ ಅಷ್ಟು ಹೊತ್ತು. ನಾನು ಒಂಭತ್ತೂಕಾಲು ಗಂಟೆಗೆ ಮತ್ತೆ ಬಂದೆ."

"ಸಿನೀಮಾ ಬಿಡೋದೇ ಹೊತ್ತಾಯ್ತು. ನಡೆದುಕೊಂಡು ಮನೆಗೆ ಹೋಗೋಣ ಎಂದು ಅಮ್ಮಯ್ಯ ಹೇಳಿದಳು."

ಎಂದು ಕಮಲನನ್ನು ಎಬ್ಬಿಸುವುದಕ್ಕೆ ಒಳಗೆ ಹೋದಳು. ತಾಯಿ ಮಗಳಿಬ್ಬರೂ ಏನೋ ಪಿಸಿಪಿಸಿ ಮಾತನಾಡಿಕೊಂಡರು. ಕಮಲ ಎದ್ದು ಬಚ್ಚಲಮನೆಗೆ ಹೋಗಿ ಮುಖ ತೊಳೆದುಕೊಂಡು, ಬೇರೆ ಕುಂಕುಮವಿಟ್ಟು ಕೊಂಡು ಬಂದು

"ಬರುವವರು ಒಂದು ಕಾಗದ ಬರೆಯಬಾರದಾಗಿತ್ತೇ ?" ಎಂದಳು.

"ನಿಂತಿದ್ದಂತೆ ಹೊರಟುಬಿಟ್ಟೆ. ನೀವು ಊರಿನಲ್ಲಿಲ್ಲವೇನೋ ಎಂದು ಅನುಮಾನವಾಯಿತು."

"ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ದಿರಿ ?"

"ನೀವು ಒಂದು ಪಿಕ್ಚರ್ ನೋಡಿಕೊಂಡು ಇನ್ನೊಂದಕ್ಕೆ ಹೋಗಿರ ಬಹುದೆಂದು ನಾನು 'ಶಾರದಾ' ಥಿಯೇಟರಿನಲ್ಲಿ ಇಷ್ಟು ಹೊತ್ತು ಕಳೆದು ಬಂದೆ."

"ತುಂಬ ಶ್ರಮವಾಯಿತು."

'ಶ್ರಮ ಪರಿಹಾರವಾಯಿತು' ಎನ್ನುವಂತೆ ಶ್ರೀನಾಥ ಮುಗುಳ್ನಗೆ ನಕ್ಕ. ಕಮಲ ಮೇಜಿನ ಮೇಲಿದ್ದ ಗಂಟು ನೋಡಿ

"ಏನದು ?" ಎಂದಳು.

"ಕೈಗೆ ತೆಗೆದುಕೊಂಡು ನೋಡು."

ಕಮಲ ಗಂಟು ಕೈಗೆ ತೆಗೆದುಕೊಂಡು ಬಿಚ್ಚಿ ನೋಡಿ ಸಂತೋಷದಿಂದ

"ಅಮ್ಮ – ಇಲ್ಲಿ ನೋಡೇ – ಸೀರೆ" ಎಂದಳು.

ತಾಯಿ ಮಗಳಿಬ್ಬರೂ ಸೀರೆ, ಕಣಗಳನ್ನು ಪರೀಕ್ಷಿಸಿ ತಮ್ಮ ಆನಂದ ವ್ಯಕ್ತಪಡಿಸಿದರು.

"ಊಟ ಆಯಿತೇ ?" ಎಂದು ಕಮಲ ಕೇಳಿದಳು.

"ಆಯಿತು. ರೂಮಿಗೆ ಹೋಗಿ ಬಂದೆ"

ಎಂದು ಹೇಳಿದ.

"ಆರೋಗ್ಯವಾಗಿದ್ದೀರೇನಪ್ಪ"

ಎಂದು ಭಾಗ್ಯಮ್ಮ ಕೇಳಿದಳು.

"ಇದ್ದೀನಮ್ಮ"

ಎಂದು ಉತ್ತರಿಸುತ್ತಾ ರೂಮು ಪ್ರವೇಶಿಸಿದ. ಸ್ವಲ್ಪ ಹೊತ್ತು ಕಳೆದ ಮೇಲೆ ಕಮಲ ಬಾಯಿತುಂಬ ತಾಂಬೂಲ ಹಾಕಿಕೊಂಡು, ಕೈಯಲ್ಲೊಂದು ಬೀಡ ಹಿಡಿದು ಒಳಕ್ಕೆ ಬಂದಳು.

ಬಂದವಳೇ ಬೀಡವನ್ನು ಶ್ರೀನಾಥನ ಬಾಯಿಗೆ ತುರುಕಿ

"ನನ್ನ ನೀವು ಮರೆತಿಲ್ಲ"

"ಹೇಗೆ ಮರೆತೇನು ?"

ಕಮಲಳನ್ನು ಪಕ್ಕದಲ್ಲಿ ಕೂಡಿಸಿಕೊಂಡು ಎವೆಯಿಕ್ಕದೆ ಅವಳನ್ನೇ ನೋಡಿದ. ಹೇಗಿದ್ದಳೋ ಹಾಗೇ ಇದ್ದಳು – ಏನೂ ವ್ಯತ್ಯಾಸವಾಗಿರಲಿಲ್ಲ.

ಕಮಲಳ ಮುಖದ ಬಳಿ ಶ್ರೀನಾಥ ಮುಖವಿಟ್ಟಾಗ ಅವನ ಮೂಗಿಗೆ ಏನೋ ವಾಸನೆ ಬಡಿಯಿತು.

"ಇದೇನು ಕಮಲ ವಾಸನೆ ?" ಎಂದು ಕೇಳಿದ.

"ಏನೂ ಇಲ್ಲವಲ್ಲ"

"ನಿನ್ನ ಬಾಯಲ್ಲಿ ಏನೋ ವಾಸನೆ ಬರುತ್ತಿದೆ."

"ಮೂರು ನಾಲ್ಕು ದಿವಸದಿಂದ ಸೀತವಾಗಿ ನೆಗಡಿಯಾಗಿತ್ತು. ಅಮ್ಮ ಔಷಧ ತಂದುಕೊಟ್ಟಳು – ಅದರ ವಾಸನೆ ಇರಬೇಕು."

"ಬ್ರ್ಯಾಂದಿ ವಾಸನೆ ಇದ್ದ ಹಾಗಿದೆಯಲ್ಲಾ."

"ಹೌದು. ನನಗೂ ಹಾಗೇ ಅನ್ನಿಸಿತು. ಹಾಳು ಔಷಧದಲ್ಲಿ ಡಾಕ್ಟರು ಬ್ರ್ಯಾಂದಿ ಬೆರಸಿದ್ದನೋ ಏನೋ?"

"ಬ್ರ್ಯಾಂದಿ ಬೆರತ ಔಷಧ ಕುಡಿದಿರುವೆಯೋ, ಬರೀ ಬ್ರ್ಯಾಂದಿ ಯನ್ನೇ ಕುಡಿದಿರುವೆಯೋ ನಿಜ ಹೇಳಬಾರದೇ?"

"ನನ್ನ ಮಾತಿನಲ್ಲಿ ಅನುಮಾನವೇ? ನಾನು ಬ್ರ್ಯಾಂದಿ ಮುಟ್ಟು ತ್ತೇನೆಯೇ?"

"ಪ್ರಮಾಣವಾಗಿ...."

"ಪ್ರಮಾಣವಾಗಿ....ಇದೇಕೆ ಅನುಮಾನಪಡುವಿರಿ?"

"ಇಲ್ಲ....ಚಿನ್ನಾ....ತಪ್ಪಾಯಿತು....ಕ್ಷಮಿಸು"

ಎಂದು ಅವಳನ್ನು ಉದ್ವೇಗದಿಂದ ಅಪ್ಪಿ ಚುಂಬಿಸಿದ.

ಬೆಳಿಗ್ಗೆ ಕಾಫಿ, ಉಪಾಹಾರ ಸ್ವೀಕರಿಸುವಾಗ ಶ್ರೀನಾಥ

"ನಿನಗೋಸ್ಕರ ಮದರಾಸಿನಿಂದ ಸ್ವಲ್ಪ ಹಣ್ಣು ತಂದಿದ್ದೆ."

"ಬುಟ್ಟಿ ಎಲ್ಲಿ?"

"ರೂಮಿನಲ್ಲಿದೆ. ಬುಟ್ಟಿ ಹಿಡಿದುಕೊಂಡು ರಾತ್ರಿ ಎಲ್ಲಿ ಓಡಾಡಲಿ ಹೇಳು."

"ನಿಮಗೆ ತುಂಬ ತೊಂದರೆಯಾಯಿತು."

"ಸಿನೀಮಾ ಸ್ವಲ್ಪ ಕಡಿಮೆ ಮಾಡುವುದು ಒಳ್ಳೆಯದಲ್ಲವೇ?"

"ಅಮ್ಮ ನನ್ನ ಮಾತು ಕೇಳಬೇಕಲ್ಲ."

ಶ್ರೀನಾಥ ಜೇಬಿನಿಂದ ಪರ್ಸ್ ತೆಗೆದು ಎಣಿಸಿ ಕಮಲನ ಕೈಗೆ ನೂರೈ ವತ್ತು ರೂಪಾಯಿಗಳನ್ನಿತ್ತು

"ನಾನು ಮೂವತ್ತು ಇಟ್ಟುಕೊಂಡಿದ್ದೇನೆ ಇವತ್ತು ನಾಳೆಯ ಖರ್ಚಿಗೆ. ಈ ಹಣ ನಿನ್ನಲ್ಲಿರಲಿ. ನಾನು ಹೋಗುವಾಗ ರೈಲು ಖರ್ಚಿಗೆ ಇಪ್ಪತ್ತೈದು ರೂಪಾಯಿ ಕೊಡುವೆಯಂತೆ."

"ಇದೇನು ಆಗಲೇ ಹೋಗುವ ಮಾತಾಡುತ್ತಿರುವಿರಿ."

"ನಾನು ಭಾನುವಾರ ರಾತ್ರಿ ಹೊರಡಲೇ ಬೇಕು. ಸೋಮವಾರ ಬೆಳಗ್ಗೆ ಕೆಲಸದ ಮೇಲೆ ಹಾಜರಾಗಬೇಕು."

"ಒಂದು ವಾರವಾದರೂ ನಿಲ್ಲಲು ಸಾಧ್ಯವಿಲ್ಲವೇ ?"

"ವಾರ ನಿಂತರೆ ಚೆಟ್ಟಿಯಾರರು ನನಗೆ ನೇಣು ಹಾಕಿಬಿಡುತ್ತಾರೆ."

"ಈಗ ಹೋದರೆ ಮತ್ತೆ ಬರುವುದು...."

"ಇನ್ನು ಒಂದೂವರೆ ತಿಂಗಳಿಗೆ ನನ್ನ ಕೆಲಸ ಮುಗಿದೇ ಹೋಗುತ್ತದೆ. ಮಧ್ಯೆ ಸಾಧ್ಯವಾದರೆ ಹೀಗೇ ಬಂದು ಹೋಗುತ್ತೇನೆ."

"ಇನ್ನುಮೇಲೆ ಬೇರೆ ಊರಿನಲ್ಲಿ ಕೆಲಸ ಮಾಡುವುದಕ್ಕೆ ಒಪ್ಪಿಕೊಳ್ಳ ಬೇಡಿ."

"ಇಲ್ಲ – ನನ್ನ ರಾಣಿ. ಈಗ ರೂಮಿನ ತನಕ ಹೋಗಿ ಬರುತ್ತೇನೆ. ಒಂದು ಬಂಡಿ ಕಾಗದಗಳು ಬಂದು ಬಿದ್ದಿವೆ. ನೋಡಿಕೊಂಡು, ಹಣ್ಣಿನಬುಟ್ಟಿ ತೆಗೆದುಕೊಂಡು ಬಂದುಬಿಡುತ್ತೇನೆ."

"ಎಷ್ಟು ಹೊತ್ತಿಗೆ ಬರುವಿರಿ."

"ಹನ್ನೆರಡರೊಳಗೇ ಬರುತ್ತೇನೆ. ನನ್ನ ಊಟಕ್ಕೆ ಕಾಯಬೇಡಿ."

"ಏಕೆ"

"ಏಕೆಂದರೆ ! ನಾನು ಊಟಮಾಡಿ ಬರುತ್ತೇನೆ."

"ಇಲ್ಲೀಗೇ ಬಂದು ಊಟಮಾಡಿದರಾಗದೇ ?"

"ನಿತ್ಯ ಏಕೆ ?"

ಕಮಲನ ಕಣ್ಣುಗಳಲ್ಲಿ ನೀರು ತುಂಬಿತು.

"ಹೋಗಿ – ಏನೇನೋ ಹೊಸಮಾತು ಆಡುವಿರಿ. ಇಲ್ಲಿ ಇರುವುದೂ ನಿಮ್ಮ ಅನ್ನವೇ ಅಲ್ಲವೇ ?"

"ಹಾಗೆ ನಾನು ಭಾವಿಸಿ ಅಹಂಕಾರಪಡುತ್ತಿಲ್ಲ. ಎಲ್ಲಿ ಇರುವುದೂ ದೇವರ ಅನ್ನ. ಕೊಡುವುದಕ್ಕೆ ನಾನು ಯಾರು ?"

"ಬರುವಿರಷ್ಟೇ !"

"ಬರುತ್ತೇನೆ. ತಡವಾದರೆ ಕಾಯಬೇಡಿ"

ಎಂದು ಹೇಳಿದ.

ಕಮಲನ ಮುಗ್ಧ ಸ್ವಭಾವ, ಅಕೃತ್ರಿಮ ಪ್ರೇಮ ಅವನ ಹೃದಯವನ್ನು ಸೂರೆಗೊಂಡಿತು.

'ಅವಳ ಮೇಲೆ ಯಾರು ಏನು ಹೇಳಿದರೇನು? ಎಲ್ಲಾ ಅಸೂಯೆಯ ಮಾತು. ಕಮಲ ಅಪರೂಪವ್ಯಕ್ತಿ – ಕೆಸರಿನ ಕಮಲ'

ಎಂದು ಭಾವಿಸಿಕೊಂಡ.

ದಾರಿಯಲ್ಲಿ ನಡೆದು ಹೋಗುತ್ತಾ ಒಂದಿನ ರಾತ್ರಿಯ ಮಾತುಕತೆ ನೆನಪಿಗೆ ಬಂದಿತು. ಮನಸ್ಸು ವ್ಯಾಕುಲಗೊಂಡಿತು.

'ಕಮಲ ನನಗೆ ಸುಳ್ಳು ಹೇಳಿದಳೇ. ಬ್ರ್ಯಾಂದಿ ಕುಡಿದಿದ್ದು ಔಷಧ ವೆಂದು ಮರೆಮಾಚಿದಳೇ?'

ಎಂದು ಪ್ರಶ್ನಿಸಿಕೊಂಡ. ಮರುಕ್ಷಣವೇ ತಾನೇ

'ಛೆ! ಸುಳ್ಳು ಏತಕ್ಕಾಗಿ ಅವಳು ಹೇಳಬೇಕು. ಔಷಧಿಯಲ್ಲಿ ಡಾಕ್ಟರುಗಳು ಬ್ರ್ಯಾಂದಿ ಸೇರಿಸಿಕೊಡುವುದೇನೂ ಹೊಸದಲ್ಲ. ಅವಳ ಬಗ್ಗೆ ಇಲ್ಲದ ಸಲ್ಲದ ಅನುಮಾನ ನಾನೇಕೆ ತಳೆಯಬೇಕು"

ಎಂದು ಸಮಾಧಾನಮಾಡಿಕೊಂಡ.

ಬಸ್ಸಿನಲ್ಲಿ ಹೋಗುವುದಕ್ಕೆಂದು ಮಾರ್ಕೆಟ್ ಬಳಿ ಬಂದು ಬಸ್ ಕಾಯುತ್ತ ನಿಂತ. ಯಾರೋ ಮಾತನಾಡಿಸಿದ ಹಾಗಾಯಿತು. ಶ್ರೀನಾಥ ಮಾತನಾಡಿಸಿದವನ ಕಡೆ ತಿರುಗಿ

"ಏನೋ ನಾಗರಾಜ, ಇಲ್ಲಿದ್ದೀ." ಎಂದು ಕೇಳಿದ.

"ಹೀಗೆ ಮಾರ್ಕೆಟ್ಟಿಗೆ ಬಂದಿದ್ದೆ. ನಿಮ್ಮನ್ನು ನೋಡಿ ಮಾತನಾಡಿಸುವ ಎಂದು ಬಂದೆ ಎಲ್ಲಪ್ಪಾ ಕಾಣಲಿಲ್ಲ – ಇಷ್ಟು ದಿನ ಎಲ್ಲಿಗೆ ಹೋಗಿದ್ದಿರಿ?"

"ಊರಿನಲ್ಲಿರಲಿಲ್ಲ ನಾಗರಾಜ."

"ಯಾವ ಊರಿಗೆ ಹೋಗಿದ್ದಿರಿ?"

"ಮದರಾಸಿಗೆ."

ಬಸ್ಸೂ ಬರಲಿಲ್ಲ ನಾಗರಾಜನೂ ಬಿಟ್ಟು ಕದಲುವ ಹಾಗೆ ಕಾಣ ಲಿಲ್ಲ. ಶ್ರೀನಾಥ ನಡೆದೇ ರೂಮಿನ ಕಡೆ ಹೊರಟ. ನಾಗರಾಜ ಅವನನ್ನು ಹಿಂಬಾಲಿಸಿದ.

"ಇನ್ನೇನು ವಿಶೇಷ ನಾಗರಾಜ. ಮನೆಯಲ್ಲಿ ಎಲ್ಲರೂ ಕ್ಷೇಮವೋ?"

"ಹೊ ! ಇದ್ದೀವಿ. ನೀವು ನಮ್ಮನ್ನು ದೂರಮಾಡಿದಿರಿ"

"ಮುತ್ತಮ್ಮನಿಗೆ ನನ್ನ ಮೇಲೆ ತುಂಬ ಕೋಪವಿರಬಹುದು."

"ಮೊದಲು ಇತ್ತು. ಈಗೇನೂ ಇಲ್ಲ. ಮನೆಯ ಕಡೆ ಬನ್ನಿ"

"ಆಗಲಿ – ನಾನು ಪುನಃ ಮದರಾಸಿಗೆ ಹೋಗಬೇಕಾಗಿದೆ. ಹಿಂದಿರುಗಿದ ಮೇಲೆ ಬರುತ್ತೇನೆ."

ನಾಗರಾಜ ಯೋಚನೆಮಾಡುತ್ತಾ

"ಏನು ಮಾಡಿಕೊಂಡು ಬಿಟ್ಟಿರಪ್ಪಾ !" ಎಂದ.

"ಏಕೆ ನಾಗರಾಜ."

"ಹಕ್ಕಿಯ ಹಾಗಿದ್ದ ನೀವು, ಪಂಜರದೊಳಗೆ ಹೋಗಿ ಸೇರಿಕೊಂಡು ಬಿಟ್ಟಿರಲ್ಲಾ."

"ದಿನಕ್ಕೊಂದೊಂದು ಸಂಸಾರ ಮಾಡುವ ಜಾಯಮಾನ ನನ್ನದಲ್ಲ ನಾಗರಾಜ. ನಾನು ಬಯಸುವುದು ಶೃಂಗಾರವನ್ನೇ ಹೊರತು – ಬರಿ ಕಾಮ ವನ್ನಲ್ಲ."

"ನಿಮ್ಮನ್ನು ಅರ್ಥಮಾಡಿಕೊಳ್ಳುವವರು ಎಷ್ಟು ಜನ ಇದ್ದಾರಪ್ಪಾ ಈ ಲೋಕದಲ್ಲಿ."

"ನನ್ನ ಪುಸ್ತಕ ಯಾವದಾದರೂ ಓದಿರುವೆಯಾ ?"

"ಎಲ್ಲಾ ಓದಿದ್ದೇನೆ. ನನಗೊಂದು ಪುಸ್ತಕ ಕೊಡಪ್ಪಾ."

"ಆಗಲಿ. ಅದಕ್ಕೇನು ?"

ಇಬ್ಬರೂ ಮಾತನಾಡಿಕೊಂಡು ರೂಮು ಸಮೀಪಿಸಿದರು. ನಾಗ ರಾಜ ಹೋಗುವ ಚಿಹ್ನೆಯನ್ನೇ ತೋರಿಸಲಿಲ್ಲ.

ಶ್ರೀನಾಥ ರೂಮಿನ ಬೀಗ ತೆಗೆದು

"ಒಳಕ್ಕೆ ಬಾ"

ಎಂದ. ನಾಗರಾಜ ಒಳಹೊಕ್ಕು ನೆಲದಮೇಲೆ ಹಾಸಿದ್ದ ಜಮಖಾ ನದ ಮೇಲೆ ಕುಳಿತ.

"ಕಾಫಿ ಆಯಿತೇನೋ ?" ಎಂದು ಶ್ರೀನಾಥ ಕೇಳಿದ.

"ಎಲ್ಲಿ ಬಂತಪ್ಪ."

"ನೀನೇ ಹೋಗಿ – ಈ ಮೂಲೆಯಲ್ಲಿರೋ ಹೊಟೇಲಿನಲ್ಲಿ ಏನು

ಬೇಕೋ ತಿಂದು, ನನಗೆ ಕಾಫಿ ತೆಗೆಸಿಕೊಂಡು ಬಾ. ಹಾಗೇ ಎರಡುಪ್ಯಾಕ್ ಪ್ಲೇಯರ್ಸ್ ಸಿಗರೇಟ್ ತೆಗೆದುಕೊಂಡು ಬಾ."

"ದುಡ್ಡು !"

"ದುಡ್ಡೇನು ಬೇಡ. ನನ್ನ ಹೆಸರು ಹೇಳು"

ಎಂದು ಒಂದು ಚೀಟಿಯಲ್ಲಿ ಗುರುತು ಹಾಕಿಕೊಟ್ಟ.

ಶ್ರೀನಾಥನಿಗೆ ಕೈತುಂಬ ಕೆಲಸವಿತ್ತು. ಈ ಹೊತ್ತಿನಲ್ಲಿ ನಾಗರಾಜ ಒಕ್ಕರಿಸಿದನಲ್ಲಾ ಎಂದು ಯೋಚಿಸುತ್ತಿದ್ದ. ತನ್ನ ಟಪಾಲು ಒಡೆದು ನೋಡಲಾರಂಭಿಸಿದ.

ಸ್ವಲ್ಪ ಹೊತ್ತಿನಲ್ಲಿ ಸಿಗರೇಟ್ ಪ್ಯಾಕೆಟ್‌ಗಳನ್ನು ಕೈಯಲ್ಲಿ ಹಿಡಿದು ಕಾಫಿ ತೆಗೆಸಿಕೊಂಡು ನಾಗರಾಜ ಬಂದ.

ಕಾಫಿ ಮುಗಿಸಿ ಮಾಣಿಯನ್ನು ಕಳುಹಿಸಿ ನಾಗರಾಜನಿಗೆ ಒಂದು ಪ್ಯಾಕೆಟ್ ಕೊಟ್ಟು ಶ್ರೀನಾಥ ಸಿಗರೇಟ್ ಹಚ್ಚಿ ಕುಳಿತ.

"ಈಗೇನು ಬರೆಯುತ್ತಿರುವಿರಿ ?"

"ಇನ್ನೊಂದು ಕಾದಂಬರಿ ಮುಗಿಸಿದ್ದೇನೆ."

"ನಿಮ್ಮ ಪುಸ್ತಕಗಳೆಲ್ಲಾ ನನಗೆ ಬೇಕು."

ಕೈಗೆ ಸಿಕ್ಕಿದ ಪುಸ್ತಕಗಳನ್ನು ಜೋಡಿಸಿ ಶ್ರೀನಾಥ ನಾಗರಾಜನಿಗಿತ್ತ.

ನಾಗರಾಜ ಅವುಗಳ ಪುಟ ತಿರುವಿಹಾಕುತ್ತಾ

"ಬಹಳ ಚೆನ್ನಾಗಿ ಬರೆಯುತ್ತೀರಿ. ಹೀಗೆ ಬರಯುವವರನ್ನು ನಾನು ನೋಡಿಯೇ ಇಲ್ಲ."

"ನೀನು ಇಷ್ಟು ಓದುತ್ತೀಯೆಂದು ನನಗೆ ಗೊತ್ತಿರಲಿಲ್ಲ ನಾಗರಾಜ."

"ಮಧ್ಯಾಹ್ನ ಮನೆಗೆ ಬನ್ನಿ. ಹೊಸ ಹುಡುಗಿ ಬಂದಿದೆ. ಅವಳ ಮುಂದೆ ಕಮಲ ಒಂದು ಕಾಡುಕಲ್ಲಿನ ಹಾಗೆ ಕಾಣುತ್ತದೆ."

"ನನಗೇನೂ ಬೇಕಾಗಿಲ್ಲ ನಾಗರಾಜ. ಇನ್ನು ಮೇಲೆ ಅಂಥ ಪ್ರಸ್ತಾಪ ನನ್ನ ಹತ್ತಿರ ಮಾಡಬೇಡ."

"ಕಮಲ ಯಾವ ಘನ ಗರತೀಂತ ನಂಬಿಕೊಂಡಿದ್ದೀರಿ."

ನಾಗರಾಜನ ಮಾತು ಶ್ರೀನಾಥನ ಹೃದಯಕ್ಕೆ ಶಲ್ಯ ನೆಟ್ಟಂತಾಯಿತು. ಮನಸ್ಸಿಗಾದ ಉದ್ವೇಗವನ್ನು ತಡೆದುಕೊಂಡು

"ಹಾಗೆಂದರೇನು ನಾಗರಾಜ. ಅವಳು ನನ್ನ ವಿಷಯದಲ್ಲಿ ಯಾವ ಅಪಚಾರವನ್ನೂ ಮಾಡಿಲ್ಲ."

"ನಿಮಗಿಂತಲೂ ನಾವು ಮೊದಲು ಅವಳನ್ನು ಕಂಡದ್ದು."

"ಇರಬಹುದು. ನಿಮಗೆ ಅವಳು ಹತ್ತಿರ ಜತೆಯ ಹನ್ನೊಂದನೆಯ ಹೆಣ್ಣು – ನನಗೆ ಹಾಗಲ್ಲವಲ್ಲಾ."

"ಇದೇ ನೀವು ಮಾಡಿಕೊಳ್ಳುತ್ತಿರುವ ಆತ್ಮವಂಚನೆ."

"ಆತ್ಮವಂಚನೆ. ಜಗತ್ತಿನಲ್ಲಿ ಯಾರನ್ನೂ ನಂಬಬಾರದೇ ?"

"ಕಮಲನ ರಕ್ತವೇ ಕೆಟ್ಟ ರಕ್ತ. ಅದರಲ್ಲಿ ಧರ್ಮ, ನೀತಿ, ಸ್ಥಿರಚಿತ್ತ ಹುಡುಕಿದರೆ ತಪ್ಪು ಯಾರದು ?"

"ಅವಳು ವಂಚಕಳೇ – ಸತ್ಯ ಹೇಳು ನಾಗರಾಜ. ನಿಮ್ಮ ಮನೆಗೆ ಪುನಃ ಬಂದಿದ್ದಳೇ ?"

"ಇಲ್ಲ. ಅದಕ್ಕಲ್ಲ ನಾನು ಹೇಳಿದ್ದು- ಲೋಕಾಭಿರಾಮವಾಗಿ ಹೇಳಿದೆ ಅಷ್ಟೇ. ನಾಳೆ ನೀವು ಪಶ್ಚಾತ್ತಾಪ ಪಡಬಾರದು ಎಂದು ಮುನ್ನೆಚ್ಚರಿಕೆ ಕೊಟ್ಟೆ."

"ಈ ಮಾತು ದಿಟವೇ ?"

"ನಿಮ್ಮಲ್ಲಿ ಸುಳ್ಳು ಏಕೆ ಹೇಳಲಿ."

ಶ್ರೀನಾಥ ಮರುಮಾತಾಡದೆ ಕಿಸೆಯಿಂದ ಐದುರೂಪಾಯಿ ತೆಗೆದು ನಾಗರಾಜನ ಕೈಯಲ್ಲಿಟ್ಟು

"ನೀನು ಹೋಗು ನಾಗರಾಜ. ನನಗೆ ತುಂಬ ಕೆಲಸವಿದೆ"

ಎಂದು ಹೇಳಿದ.

ನಾಗರಾಜ ಅನುಮಾನಿಸುತ್ತ ಅಲ್ಲಿಂದ ಕಾಲು ತೆಗೆದ.

ಶ್ರೀನಾಥನಿಗೆ ಕೆಲಸ ಬೇಡವಾಯಿತು. ಪತ್ರಗಳ ರಾಶಿಯನ್ನು ಮೇಜಿನ ಮೇಲೆ ಒಗೆದು ವಿಚಾರಮಾಡುತ್ತ ಮಲಗಿಬಿಟ್ಟ. ಅವನ ತಲೆಯಲ್ಲಿ ಒಂದೇ ಪ್ರಶ್ನೆ 'ಕಮಲ ವಂಚಕಳೇ ?' ಮಲಗುವುದೂ ಸಾಧ್ಯವಾಗಲಿಲ್ಲ. ಎದ್ದು ಬಟ್ಟೆ ಹಾಕಿಕೊಂಡು ಹೊರಗೆ ಹೊರಟುಬಿಟ್ಟ.

ಮನಸ್ಸಿನ ಸುತ್ತಾಡಿ, ದೇಹಕ್ಕೆ ದಣಿವು ಮಾಡಿಕೊಂಡು ರೂಮಿಗೆ

ಬಂದು ಮಲಗಿಬಿಡಲು ನಿಶ್ಚಯಿಸಿದ. ನಾಗರಾಜ ತಲೆಯಲ್ಲಿ ಹಾಕಿದ್ದ ಕೀಟವನ್ನು ಹೊರಗೆ ಹಾಕಲು ಪ್ರಯತ್ನಿಸಿದ.

ಆದರೆ ಅದೇ ಮಾತು – 'ನಾಳೆ ನೀವು ಪಶ್ಚಾತ್ತಾಪ ಪಡಬಾರದು – ಮುನ್ನೆಚ್ಚರಿಕೆ ಕೊಟ್ಟೆ' – ಈ ಮಾತು ಪದೇ ಪದೇ ಬಂದು ಶ್ರೀನಾಥನ ಮನಸ್ಸನ್ನಪ್ಪಳಿಸುತ್ತಿತ್ತು.

ಒಂದರಮೇಲೊಂದು ಸಿಗರೇಟ್ ಮುಗಿಯುತ್ತ ಬಂತು ಕದಡಿ ಹೋಗಿದ್ದ ಮನಸ್ಸು ತಿಳಿಯಾಗಲೊಲ್ಲದು.

'ಕಮಲನೂ ವಂಚಕಳೇ! ಅವಳೂ ನನ್ನ ನಂಬಿಕೆಗೆ ದ್ರೋಹ ಬಗೆಯುವಳೇ!'

'ಕಮಲನ ರಕ್ತವೇ ಕೆಟ್ಟರಕ್ತ. ಅದರಲ್ಲಿ ಧರ್ಮ, ನೀತಿ, ಸ್ಥಿರಚಿತ್ತ ಹುಡುಕಿದರೆ ತಪ್ಪು ಯಾರದು?'

ಮರ್ಮವನ್ನರಿಯುವ ನಾಗರಾಜನ ಮಾತು.

'ಬಯಸಿ ಬಯಸಿ ಮದರಾಸಿನಿಂದ ಓಡಿಬಂದುದು ಇದಕ್ಕಾಗಿಯೇ? ಈ ಮಾತುಗಳನ್ನು ಕೇಳುವುದಕ್ಕಾಗಿಯೇ? ಕನಸಿನ ಕನ್ನಡಿಯನ್ನು ಒಡೆದು ಚೂರು ಚೂರು ಮಾಡುವುದಕ್ಕಾಗಿಯೇ?'

ತಟ್ಟನೆ ಶ್ರೀನಾಥನ ಮನಸ್ಸಿಗೆ ಬೆಳಕು ಮೂಡಿದಂತಾಯಿತು ಕ್ಷಣಕಾಲ ಮನಸ್ಸು ಸ್ಥಿರವಾಯಿತು. ಗಣಿತಜ್ಞನಂತೆ ಸಾವಕಾಶವಾಗಿ ತನ್ನ – ಕಮಲನ ಪರಿಚಯದ ಮೊದಲು ದಿನದಿಂದ ಅಂದಿನವರೆಗಾದ ಘಟನಾವಳಿಗಳನ್ನು ಕುರಿತು ಆಲೋಚಿಸಿದ

'ಕಮಲ ಮುತ್ತಮ್ಮನ ಮನೆಗೆ ಹೋಗುತ್ತಿಲ್ಲ. ಅವಳು ಹೋಗದ ಹಾಗೆ ಮಾಡಿದನೆಂದು ನನ್ನ ಮೇಲೆ ಮುತ್ತಮ್ಮನಿಗೂ, ನಾಗರಾಜನಿಗೂ ಕೋಪ. ಏನಾದರೂ ಮಾಡಿ – ಎಷ್ಟು ಸುಳ್ಳು ಬೇಕಾದರೂ ಹೇಳಿ ನಮ್ಮ ಸಂಬಂಧಕ್ಕೆ ತುಂಡು ಹಾಕಿದರೆ ಮುಂದೆ ತಮ್ಮ ಕೆಲಸ ಸಾಧಿಸಿಕೊಳ್ಳಬಹುದು – ಎಂದಿನಂತೆ ಕಮಲನ ರೂಪ ಯೌವ್ವನ ಮಾರಿ ಹೊಟ್ಟೆ ತುಂಬಿಕೊಳ್ಳಬಹುದು.'

ಈ ವಾದಸರಣಿ ಶ್ರೀನಾಥನ ಮನಸ್ಸನ್ನು ತುಸು ಹಗುರಗೊಳಿಸಿತು.

ಎದ್ದವನೇ ಬೇಗಬೇಗ ರೂಮಿಗೆ ಬಂದು, ಹಣ್ಣಿನ ಬುಟ್ಟಿ ತೆಗೆದುಕೊಂಡು ಕಮಲನ ಮನೆಗೆ ಹೋದ.

ಹೇಳಿದ ಹೊತ್ತಿಗಿಂತಲೂ ಮುಂಚೆ ಬಂದ ಶ್ರೀನಾಥನನ್ನು ನೋಡಿ ಕಮಲ ಆಶ್ಚರ್ಯಪಟ್ಟುಗೊಂಡಳು. ಅವಳ ಮುಖದಲ್ಲಿ ಹರ್ಷ ತೇಲಿತು.

" ಒಂದು ಒಂದೂವರೆ ಗಂಟೆಯಾಗುತ್ತದೆಂದಿರಿ."

" ಹೇಳಿದ್ದೆ. ರೂಮಿನಲ್ಲಿ ನಿಲ್ಲಲು ಮನಸ್ಸಾಗಲಿಲ್ಲ—ಅಡಿಗೆಯಾಯಿತೇ ?"

" ಆದಹಾಗೇ. ಅಮ್ಮ ಮಾಡುತ್ತಿದ್ದಾಳೆ. ಕಾಫಿ ಮಾಡಿಕೊಡಲೇ ?"

" ಬೇಡ ಈಗ ತಾನೇ ಕುಡಿದು ಬಂದೆ – ದಾರಿಯಲ್ಲಿ ನಾಗರಾಜ ಸಿಕ್ಕಿದ್ದ – ರೂಮಿನವರೆಗೆ ಬಂದಿದ್ದಿದ್ದ."

ಕಮಲನ ಮುಖ ವಿವರ್ಣವಾಯಿತು. ಹಣೆಯ ಮೇಲೆ ಸಣ್ಣಗೆ ಬೆವರು ಹನಿಗಳು ಕಾಣಿಸಿಕೊಂಡವು.

" ಇಲ್ಲಿಗೆ ಯಾವಾಗಲಾದರೂ ಬಂದಿದ್ದನೇ " ಎಂದು ಶ್ರೀನಾಥ ಕೇಳಿದ.

" ಒಂದು ಸಲವೋ ಎರಡು ಸಲವೊ ಬಂದಿದ್ದ. ಮುತ್ತಮ್ಮನೂ ಬಂದಿದ್ದಳು."

" ಮನೆಗೆ ಬಾರೆಂದು ಕರೆದರೇ ?

" ಕರೆದರು. ನಾನು ಹೋಗಲಿಲ್ಲ."

ಶ್ರೀನಾಥ ಮಾತು ಬೆಳಸಲಿಲ್ಲ.

" ನಾಗರಾಜ ಏನು ಹೇಳಿದ."

" ಹೋಗಲಿ. ಅವನಮಾತು ಕಟ್ಟಿಕೊಂಡೇನು ?"

" ಇಲ್ಲ – ನೀವು ಹೇಳಲೇಬೇಕು."

" ನಾನಿರುವುದು ಒಂದು ದಿವಸ. ಇದೇ ಪಂಚಾಯಿತಿಯಾಗಬೇಕೇ ?"

" ನನ್ನ ವಿಚಾರ ಅನುಮಾನ ಇಟ್ಟುಕೊಂಡು ನೀವು ಊರಿಗೆ ಹೋದರೆ ನಿಮಗೆ ಸಮಾಧಾನವಾಗಿರುತ್ತದೆಯೇ........ನನಗೆ ಸಮಾಧಾನವಾಗಿರುತ್ತದೆಯೇ ?"

" ಅವನು ವಿಷಬೀಜ ಬಿತ್ತಬೇಕಾದುದು ಸಹಜವಾಗಿಯೇ ಇದೆ ?"

" ಹೇಗೆ ?"

"ನನ್ನ ಅಪ್ಪಣೆಯಿಲ್ಲದೆ ನೀನು ಮುತ್ತಮ್ಮನ ಮನೆಗೆ ಹೋಗದಂತೆ ಮಾಡಿರುವುದು."

"ನೀವು ಹೇಳಿದ್ದು ನ್ಯಾಯವೆಂದು ತೋರಿದುದರಿಂದಲೇ ನಾನು ಹೋಗದೆ ಇರುವುದು."

"ಇದನ್ನು ಮನಃಪೂರ್ವಕವಾಗಿ ಹೇಳುತ್ತಿರುವೆಯಾ ?"

"ಯಾವ ದೇವರ ಮೇಲೆ ಆಣೆಮಾಡಿ ಹೇಳಲಿ. ನೀವು ನನಗೆ ಯಾವದಕ್ಕೆ ಕಡಿಮೆಮಾಡಿರುವಿರಿ ?"

"ನಾನೇನು ಮಹಾ ಮಾಡಿರುವುದು ?"

ಕಮಲ ಶ್ರೀನಾಥನ ಹತ್ತಿರ ಸರಿದು ಅವನ ಮುಂಗುರುಳು ನೇವರಿಸುತ್ತ, ಕೆನ್ನೆಗೆ ಕೆನ್ನೆಯಿಟ್ಟು

"ಇನ್ನೂ ನಿಮಗೆ ಅನುಮಾನ ಹೋಗಿಲ್ಲವೇ ? ಮೃಷ್ಟಾನ್ನ ಉಂಡ ಮೇಲೂ ನಾನು ಎಂಜಲು ಕೂಳಿಗೆ ಆಸೆಪಡುವೆನೇ ?"

ಅವಳ ಕಳಕಳಿಯ ಮಾತು ಕೇಳಿ ಶ್ರೀನಾಥನಿಗೆ ಹಿಡಿಸಲಾರದಷ್ಟು ದುಃಖವಾಯಿತು.

'ಕಮಲನ ವಿಷಯ ನಾನೆಷ್ಟು ತಪ್ಪು ತಿಳಿದುಕೊಂಡಿದ್ದೆ. ನಾನೆಂಥ ಪಾಪಿ'

ಎಂದು ತನ್ನನ್ನೇ ಹಳಿದುಕೊಂಡ.

ಕಮಲ ಶ್ರೀನಾಥನ ಗಲ್ಲ ಹಿಡಿದು

"ಇನ್ನೂ ಅನುಮಾನ ಬಿಡುವುದಿಲ್ಲವೇ ?" ಎಂದು ಕೇಳಿದಳು.

"ಅನುಮಾನವಿರುವುದಿಲ್ಲ. ಏನಾದರೂ ಇಂಥ ಪ್ರಸಂಗ ಒದಗಿ ಅನುಮಾನ – ಸಂಶಯ ತಂದೊಡ್ಡುತ್ತದೆ."

"ನಾನು ಪಾಪಿ ಮೊರೆ. ನೀವು ಸಂಶಯಪಡುವುದು ನ್ಯಾಯವಾಗಿಯೇ ಇದೆ" –"

ಶ್ರೀನಾಥ ಕಮಲನನ್ನು ನೇವರಿಸಿ ಸಮಾಧಾನ ಹೇಳಿದ.

"ಹೋಗಲಿ ಬಿಡು. ಯಾವ ದೊಡ್ಡ ಮಾತು. ನಾನು ಸಂಜೆಗೆ ಹೊರಡಬೇಕಾಗಿದೆ. ಇರುವ ಸ್ವಲ್ಪ ಕಾಲ ಈ ಕಾಷ್ಠಾವ್ಯಸನ ಹಚ್ಚಿಕೊಂಡು ಹೊತ್ತುಗಳೆಯುವುದೇಕೆ ?"

" ಸಾಯಂಕಾಲ ಹೊರಡಬೇಕಾಗಿದೆ ! "

" ಹೌದು. ಸೋಮವಾರ ಬೆಳಿಗ್ಗೆ ಕೆಲಸದ ಮೇಲೆ ಹಾಜರಾಗುತ್ತೀನೆಂದು ಮಾತು ಕೊಟ್ಟು ಬಂದಿದ್ದೇನೆ."

" ಸಾಧ್ಯವಿಲ್ಲ. ನಾನು ಬಿಡುವುದಿಲ್ಲ. ನಿನ್ನೆಯೂ ಏನೋ ಪಂಚಾಯಿತಿ ಆಗಿ ಹೋಯಿತು. ಎರಡು ದಿವಸವಾದರೂ ನೀವಿದ್ದು ಹೋಗಬೇಕು."

" ಹೀಗೆ ಮಾಡೋಣ – ಒಂದು ದಿವಸ ರಜಕ್ಕೆ ಬರೆದುಬಿಡುತ್ತೇನೆ. ನಾಳೆ ರಾತ್ರಿ ಹೊರಡುತ್ತೇನೆ. ಇವತ್ತು ಸಾಯಂಕಾಲ ಎಲ್ಲೀಗೆ ಹೋಗೋಣ "

" ಸಿನೀಮಾ ಗಿನೀಮಾ ಬೇಡ. ಅಮ್ಮ ಬೇಕಾದರೆ ಹೋಗಿ ಬರಲಿ. ನನ್ನನ್ನು ಕರೆದುಕೊಂಡು ಹೋಗಿ ನಿಮ್ಮ ರೂಮು ತೋರಿಸುವುದಿಲ್ಲವೇ ?"

" ಆಗಬಹುದು. ಸಂಜೆ ಅತ್ತ ಕಡೆಗೆ ಹೋಗಿ ಬರೋಣ "

ಎಂದು ಹೇಳಿದ. ಕಮಲನ ಮನಸ್ಸಿಗೆ ಸ್ವಲ್ಪ ಶಾಂತಿಯಾಯಿತು.

ಊಟ ಮುಗಿಸಿದವಳೇ ಭಾಗ್ಯಮ್ಮ ಮನೆಯಲ್ಲಿ ನಿಲ್ಲದೆ ಹೊರಟು ನಿಂತಳು.

" ಎಷ್ಟು ಹೊತ್ತಿಗೆ ಬರುತ್ತೀ ?"

ಎಂದು ಕಮಲ ಕೇಳಿದಳು.

" ಒಂಭತ್ತು – ಹತ್ತು ಗಂಟೆಗೆ "

" ಬೀಗದಕೈ ತೆಗೆದುಕೊಂಡು ಹೋಗು. ನಾವು ಬರುವುದು ಎಷ್ಟು ಹೊತ್ತಾಗುತ್ತದೆಯೋ."

ಎಂದು ಹೇಳಿದಳು.

ಭಾಗ್ಯಮ್ಮ ಮನೆಯಲ್ಲಿಲ್ಲದಿದ್ದುದು ಶ್ರೀನಾಥನಿಗೆ ನೆಮ್ಮದಿಯನ್ನುಂಟು ಮಾಡಿತು.

ಸಂಜೆಗೆ ಕಮಲನನ್ನು ರೂಮಿಗೆ ಕರೆದುಕೊಂಡು ಹೋಗುವ ಬಗ್ಗೆ ಶ್ರೀನಾಥನಿಗೆ ಯೋಚನೆ ಹತ್ತಿತು. ' ಮನೆಯವರು ಬೇರೆ ತಿಳಿದುಕೊಂಡರೆ ಏನು ಮಾಡುವುದು ? ಈಕೆ ಯಾರು ಎಂದು ಕೇಳಿದರೆ ಏನು ಹೇಳುವುದು ? —ರೂಮಿಗೆ ಹೋಗುವುದು ಬೇಡ ಎಂದು ಕಮಲನಿಗೆ ಹೇಳಲು ಸಾಧ್ಯವಿರಲಿಲ್ಲ. ಅವಳು ಅದನ್ನೇ ಮನಸ್ಸಿಗೆ ಹಚ್ಚಿಕೊಂಡು ಕೊರಗುವಳು.'

ಯೋಚನೆಮಾಡಿ ಪ್ರಯೋಜನವಿಲ್ಲವೆಂದು ಶ್ರೀನಾಥ ನಿರ್ಧರಿಸಿದ.

'ನನ್ನ ಕಮಲನ ಸಂಬಂಧ ಈಗಾಗಲೇ ಅರ್ಧ ಬೆಂಗಳೂರಿಗೆ ವಿದಿತವಾಗಿದೆ. ಉಳಿದವರು ತಿಳಿದರೇನಂತೆ! ಅವಳ ಇಷ್ಟು ಸಣ್ಣ ಆಸೆಯನ್ನು ನಾನು ಪೂರೈಸಬೇಡವೇ?'

ಸಂಜೆ ಗಾಡಿ ಮಾಡಿಕೊಂಡು ಕಮಲನನ್ನು ತನ್ನ ರೂಮಿಗೆ ಕರೆದುಕೊಂಡು ಹೋದ. ಹೊಟೇಲಿನವನಿಗೆ ತಾನೇ ಹೋಗಿ ಹೇಳಿಬಂದ – ತಿಂಡಿ ಕಾಫಿ ಬಂತು – ಉಪಾಹಾರ ಮುಗಿಯಿತು.

ಕಮಲನ ಮುಂದೆ ಕೆಲವು ಸಚಿತ್ರ ಮಾಸಪತ್ರಿಕೆಗಳನ್ನು ಒಗೆದು ತನ್ನ ಕಾಗದದ ರಾಶಿಗೆ ಕೈಯಿಕ್ಕಿದ. ಮುಖ್ಯವಾದ ಕೆಲವು ಕಾಗದಗಳಿಗೆ ಉತ್ತರಿಸಬೇಕೆಂದು ಕುಳಿತ.

ಶ್ರೀನಾಥ ಕೆಲಸ ಮಾಡುವುದಕ್ಕೆ ಕಮಲ ಬಿಡಲಿಲ್ಲ. ಎರಡು ಮೂರು ಕಾಗದ ಅವನು ಮುಗಿಸುವಷ್ಟರಲ್ಲಿ

"ನನ್ನ ಸುಮ್ಮನೆ ಕೂಡಿಸಿ – ಇದೇನು ಕೆಲಸ ಹಚ್ಚಿಕೊಂಡಿರಿ?"

ಎಂದು ಕೇಳಿದಳು.

ಶ್ರೀನಾಥ ನಸುನಗುತ್ತ ಕಾಗದ, ಲೇಖನಿಯನ್ನು ಒಂದೆಡೆಗೆ ತಳ್ಳಿದ.

"ಇದು ಕವಿಗಳ ರೂಮು ಇದ್ದಹಾಗಿಲ್ಲವಲ್ಲಾ?" ಎಂದಳು.

"ಇನ್ನು ಹೇಗಿದೆ?"

"ಯಾರೋ ವಿದ್ಯಾರ್ಥಿಯ ರೂಮು ಇದ್ದಹಾಗಿದೆ."

"ನಾನು ವಿದ್ಯಾರ್ಥಿಯೇ! ಕವಿಗಳ ರೂಮು ಹೇಗಿರುತ್ತವೆ?"

"ಸೊಗಸಾದ ಫರ್ನೀಚರು – ಸೊಗಸಾದ ಸಿಲ್ಕ್ ಕರ್ಟನ್‌ಗಳು – ಹೂವಿನ ಕುಂಡಗಳು – ಸಂಗೀತ ವಾದ್ಯಗಳು ಇವೆಲ್ಲಾ ಇರಬೇಕು."

"ಈ ಕಲ್ಪನೆ ನಿನಗೆ ಹೇಗೆ ಬಂತು?"

"ಸಿನೀಮಾದಲ್ಲಿ ನೋಡಿಲ್ಲವೇ ಕವಿಗಳು ಹೇಗಿರುತ್ತಾರೆ. ನೀಳವಾದ ಕೂದಲು ಬಿಟ್ಟುಕೊಂಡು, ದಪ್ಪ ಕನ್ನಡಕ ಹಾಕಿಕೊಂಡು, ಸದಾ ಮೈನಾ ಹಕ್ಕಿಯ ಜತೆ ಆಟವಾಡುತ್ತಾ, ಕೈಯಲ್ಲಿ ಯಾವದಾದರೂ ಸಂಗೀತವಾದ್ಯ ಹಿಡಿದು ಎಷ್ಟು ಸಂತೋಷವಾಗಿರುತ್ತಾರೆ."

ಕಮಲನ ಮುಗ್ಧಕಲ್ಪನೆ ಕಂಡು ಶ್ರೀನಾಥನಿಗೆ ಹಿಡಿಸಲಾರದಷ್ಟು ನಗೆ ಬಂದಿತು. ಗಹಗಹಿಸಿ ನಕ್ಕ.

"ಕವಿ ಸಂತೋಷ ಕೊಡುವವನೇ ವಿನಾ, ಸಂತೋಷ ಅನುಭವಿಸುವವನಲ್ಲ. ನೀನು ಸಿನೀಮಾದಲ್ಲಿ ನೋಡುವುದು ಕೃತ್ರಿಮ ಕವಿಗಳನ್ನು. ನಿಜವಾದ ಕವಿ ದುಃಖ, ನೋವನ್ನು ಕಂಡುಂಡು ಹಣ್ಣಾಗಿರುವ ಜೀವ. ಅವನ ಬಾಳೇ ಮೈನಾ ಹಕ್ಕಿಯಂತೆ ಅಸ್ವತಂತ್ರ ಬಾಳು; ಅವನ ಸಂಗೀತವೇ ಜೀವನದ ರುದ್ರಗೀತೆ."

"ಅಹಾ! ಈಗ ನನಗೆ ಅರ್ಥವಾಯಿತು?"

"ಏನು ಅರ್ಥವಾಯಿತು?"

"ನಿಮ್ಮ ಕಾದಂಬರಿ ಓದಿದರೆ ಕಣ್ಣೀರು ಏಕೆ ಮಿಡಿಯುತ್ತದೆಂದು. ಓದಿದವರು ದುಃಖಪಡುವ ಹಾಗೆ ಏಕೆ ಮಾಡುವಿರಿ? ಜನ ಸಂತೋಷಪಡುವ ಕಥೆಗಳನ್ನೇಕೆ ನೀವು ಬರೆಯಬಾರದು?"

"ಅಂಥ ಕಥೆಗಳು ಯಾವವು ಹೇಳು?"

"ಕಿಸ್ಮತ್, ಖಿಡ್ಕಿ."

"ನೀನು ಚರ್ಚಿಸುತ್ತಿರುವುದು ಗಹನವಾದ ವಿಷಯ. ನಿನಗೆ ಹೇಗೆ ಹೇಳಬೇಕೋ ನಾನರಿಯೆ. ಪ್ರಯತ್ನಿಸೆಂದರೆ ಪ್ರಯತ್ನಿಸುತ್ತೇನೆ."

"ಹೇಳಿ – ಕೇಳುವುದಕ್ಕೆ ನನಗೆ ತುಂಬ ಆಸೆ."

"ಸುಖ, ದುಃಖ ಎರಡೂ ಬೇರೆ ಬೇರೆಯಾಗಿ ಕಂಡರೂ ಅವುಗಳ ಮೈ ಒಂದೇ – ಮುಖ ಬೇರೆ ಬೇರೆ. ಪ್ರತಿಯೊಬ್ಬನೂ ಸುಖಕ್ಕಾಗಿ ಕಾತುರಪಡುತ್ತಾನೆ. ಸುಖಸಾಧನೆಗಾಗಿ ಶಕ್ತಿಮೀರಿ ದುಡಿಯುತ್ತಾನೆ. ಆದರೆ ಸುಖವೆಂದರೇನು? ಸುಖವೆಲ್ಲಿದೆ? ಎಂದು ಯೋಚಿಸುವವರು ಕಡಿಮೆ. ದೃಷ್ಟಾಂತಕ್ಕೆ ತೆಗೆದುಕೋ – ನಿನ್ನಮ್ಮನಿಗೆ ದಿನಕ್ಕೆ ನಾಲ್ಕುಸಲ ಸಿನೀಮಾ ನೋಡಿದರೆ ಸುಖವಾಗುತ್ತದೆ. ಇನ್ನೊಬ್ಬರಿಗೆ ಬಗೆಬಗೆಯ ಭಕ್ಷಭೋಜ್ಯ ತಿಂದರೆ ಸುಖವಾಗುತ್ತದೆ. ಆದರೆ ಈ ಸುಖ ಶಾಶ್ವತವಾದುದಲ್ಲ; ಕ್ಷಣಿಕವಾದುದು. ಹೊರಗಿನಿಂದ ಬರುವ ಸುಖ ಚಿರಕಾಲ ಬದುಕಲಾರದು. ಸುಖ ಮನುಷ್ಯನಲ್ಲಿಯೇ ಹುಟ್ಟಬೇಕು. ಆದರೆ ದುಃಖದ ವಿಷಯ ಹಾಗಲ್ಲ ಹೊರಗಿನಿಂದ ಬಂದುದಾದರೂ ದುಃಖ ಶಾಶ್ವತ ಪರಿಣಾಮವನ್ನುಂಟುಮಾಡಬಲ್ಲದು. ಆದರೆ

ಮನುಷ್ಯನ ಒಳಗೇ ಹುಟ್ಟಿದ ದುಃಖ ಹೊರಗಿನಿಂದ ಬಂದುದಕ್ಕಿಂತ ತೀಕ್ಷ್ಣ ವಾಗಿರುತ್ತದೆ. ಸುಖವನ್ನು ಬಯಸುವ ಮನುಷ್ಯ ತನಗೆ ದೊರೆತುದು ಸುಖಕ್ಕೆ ಹೇತುವೇ ಎಂದು ಆಲೋಚಿಸಬೇಕು. ತನಗೆ ಸಿಕ್ಕಿದುದು ಸುಖವೋ ಅದರ ನೆರಳೋ ಎಂದು ವಿಚಾರಮಾಡಬೇಕು."

"ಹಾಗಾದರೆ ಯಾವದು ನಿಜವಾದ ಸುಖ?"

"ದುಃಖವನ್ನು ನಿರ್ಮೂಲ ಮಾಡುವುದೇ ನಿಜವಾದ ಸುಖ. ದುಃಖ ಯಾವಾಗ ಪರಿಹಾರವಾಗುತ್ತದೆ ಆಗ ಮನುಷ್ಯನ ಮನಸ್ಸು ಶಾಂತ ವಾಗುತ್ತದೆ. ಶಾಂತಿಯಲ್ಲಿಯೇ ಸುಖದ ಭದ್ರವಾದ ಬುನಾದಿಯಿರುವುದು. ಮನುಷ್ಯ ತನ್ನ ವಿಚಾರ ಸಂಸ್ಕೃತಿಯನ್ನು ಬೆಳಸಿಕೊಂಡಾಗ ಅವನಿಗೆ ಸುಖಲಭಿಸುತ್ತದೆ."

"ದುಃಖ ಪರಿಹಾರವಾಗುವುದು ಹೇಗೆ?"

"ದುಃಖವನ್ನು ಧೈರ್ಯವಾಗಿ ಎದುರಿಸುವುದರಿಂದ. ಒಂದು ಉದಾ ಹರಣೆ ತೆಗೆದುಕೊಳ್ಳೋಣ. ಕಾಲಿಗೆ ಮುಳ್ಳು ಚುಚ್ಚಿಕೊಳ್ಳುತ್ತದೆ. ಅದನ್ನು ನೋಡಲು ಹೇಸಿ, ತೆಗೆಯಲೆತ್ನಿಸಿದರೆ ನೋವಾಗುತ್ತದೆಂದು ಅಂಜಿ, ಮನುಷ್ಯ ಸುಮ್ಮನಿದ್ದರೆ ಮುಳ್ಳು ಒಳಗೇ ಉಳಿಯುತ್ತದೆ; ಕೀವು ತುಂಬಿಕೊಳ್ಳುತ್ತದೆ. ಕೆಲಕಾಲವಾದ ಮೇಲೆ ಆಪರೇಷನ್ ಮಾಡಿಸಬೇಕಾದ ಪರಿಸ್ಥಿತಿಯೊದಗುತ್ತದೆ. ಆದರೆ ಆ ಕೂಡಲೆ, ಸ್ವಲ್ಪ ನೋವಾದರೂ ಚಿಂತೆಮಾಡದೆ ಅವನು ಮುಳ್ಳು ತೆಗೆಯುವ ಪ್ರಯತ್ನ ಮಾಡಿದರೆ ಅವನಿಗೆ ಮುಂದೆ ಸುಖವಾಗುತ್ತದೆ. ಹಾಗೇ ಸಾಹಿತಿ ಮಾಡಲೆತ್ನಿಸಬೇಕು. ನೋವನ್ನು ಧೈರ್ಯವಾಗಿ ಎದುರಿಸಬೇಕು. ಅಧರಕ್ಕೆ ಕಹಿಯಾದರೂ ಉದರಕ್ಕೆ ಸಿಹಿಯಾಗುವ ರೀತಿಯಲ್ಲಿ ಬರೆಯಬೇಕು. ನೋವಿನ ಉದ್ದೇಶವನ್ನು – ಅದರಲ್ಲಿಯೂ ಪರರ ನೋವಿನ ಉದ್ದೇಶವನ್ನು ಅರ್ಥಮಾಡಿಕೊಳ್ಳುವ ವ್ಯಕ್ತಿಯ ಮನಸ್ಸು ಶುಚಿಯಾಗುತ್ತದೆ; ಪವಿತ್ರ ವಾಗುತ್ತದೆ."

"ಯಾವಾಗಲೂ ಪರರಚಿಂತೆ ಮಾಡುತ್ತ ಕುಳಿತರೆ ಕವಿ ತನ್ನ ಚಿಂತೆ ಮಾಡುವುದು ಯಾವಾಗ?"

"ಕವಿ ಒಂದು ವಿಚಿತ್ರ ರೀತಿಯಲ್ಲಿ 'ನಾನು – ನನ್ನದು' ಎನ್ನುವ ವ್ಯಕ್ತಿತ್ವ ಪಡೆದಿರುತ್ತಾನೆ. ಅವನು ಕಾವ್ಯರೂಪದಲ್ಲಿ ಜಗತ್ತಿಗೆ ನೀಡುವ ಕಾಣಿಕೆ ಅವನ

ಭಿಪಾರ ಅನುಭವ, ಶ್ರದ್ಧೆ, ತ್ಯಾಗ ಮತ್ತು ನೋವಿನಫಲ. ಆದರೆ ಈ ಅನುಭವವನ್ನು ಅವನು ತಾನಾಗಿಯೇ ಸಂಪಾದಿಸಿಕೊಳ್ಳುವುದಿಲ್ಲ. ಸಂಘಜೀವಿಯಾದ ಕವಿ ವೈಯಕ್ತಿಕ ಕಷ್ಟ ಸುಖಗಳನ್ನು ಕಡೆಗಾಣಿಸಿ ಸಮಾಜದ–ಲೋಕದ ಕಷ್ಟ ಸುಖವನ್ನೇ ತನ್ನದು ಮಾಡಿಕೊಳ್ಳುತ್ತಾನೆ. ಸಾಮಾನ್ಯ ಮನುಷ್ಯನೊಬ್ಬ ಬಡತನ ಅನುಭವಿಸುತ್ತಾನೆ. ಅದರಿಂದ ಅವನಿಗೆ ಕಷ್ಟವಾಗುತ್ತದೆ, ಸಂಕಟವಾಗುತ್ತದೆ; ಕವಿ ಇಂಥ ಸಾವಿರಾರು ಸಾಮಾನ್ಯರ ಬಡತನವನ್ನನುಭವಿಸುತ್ತಾನೆ. ಬಡತನದ ಉಗಮಸ್ಥಾನ ಯಾವುದೆಂದು ಅರಸುತ್ತಾನೆ. ಅದಕ್ಕೇ ಸಾಮಾನ್ಯನ ಕಷ್ಟ ದುಃಖಕ್ಕಿಂತಲೂ ಕವಿಯ ಕಷ್ಟ ದುಃಖ ತೀಕ್ಷ್ಣವಾಗಿರುತ್ತದೆ – ಅಸಹನೀಯವಾಗಿರುತ್ತದೆ. ಮಾನವ ಲೋಕಕ್ಕೇ ತನ್ನ ಮನಸ್ಸು ಮೀಸಲುಮಾಡಿದ ಕವಿಗೆ ತನ್ನ ಅಲ್ಪ ಕಷ್ಟಸುಖ ವಿಚಾರಮಾಡುವುದಕ್ಕೆ ವೇಳೆಯೆಲ್ಲಿದೆ. ಇದರಿಂದ ಕವಿಗಳು ವ್ಯವಹಾರದೃಷ್ಟಿಯಿಂದ ತೀರ ನಿಷ್ಪ್ರಯೋಜಕರಾಗುತ್ತಾರೆ."

" ಹಾಗಾದರೆ ಕವಿಗೂ ಸುಖಕ್ಕೂ ಋಣಾನುಬಂಧವೇ ಇಲ್ಲವೇ ?"

" ಇದೆ. ಆದರದು ವಿಚಿತ್ರ ಋಣಾನುಬಂಧ. ಸಾಮಾನ್ಯ ಮನುಷ್ಯನ ಕಣ್ಣಿಗೆ ಬೀಳುವ ವಸ್ತುಗಳೆಲ್ಲಾ ಅವನವಾಗುವವರೆಗೆ ಅವನಿಗೆ ಸುಖ ಲಭಿಸುವುದಿಲ್ಲ. ಸಾಮಾನ್ಯ ಮನುಷ್ಯ ಒಂದು ಮಹಡಿಮನೆ ನೋಡುತ್ತಾನೆ – ಒಳ್ಳೆಯ ಮೋಟಾರುಕಾರು ನೋಡುತ್ತಾನೆ – ಸೊಗಸಾದ ಉಡುಗೆ ತೊಡಿಗೆ, ಭಕ್ಷ್ಯಭೋಜ್ಯಗಳನ್ನು ನೋಡುತ್ತಾನೆ – ಅವುಗಳೆಲ್ಲಾ ತನ್ನದಾಗಬೇಕೆಂದು ಬಯಸುತ್ತಾನೆ. ತನ್ನ ಸಮಸ್ತ ಚೇತನವನ್ನೂ ಆ ವಸ್ತುಗಳ ಸಂಗ್ರಹಣಕ್ಕೆ ನಿವೇದಿಸುತ್ತಾನೆ. ಕವಿಯ ದೃಷ್ಟಿ ಅದಲ್ಲ. ಒಂದು ಒಳ್ಳೆಯ ವಸ್ತು ತನ್ನದಾಗದಿದ್ದರೂ ಅದನ್ನು ನೋಡಿ ಅವನು ಸಂತೋಷಪಡಬಲ್ಲ. ಯಾರದೋ ಮಗು, ಲಕ್ಷಣವಾಗಿರುತ್ತದೆ, ಬೆಳದಿಂಗಳಿನ ಹಾಗೆ ನಗೆ ಬೀರುತ್ತದೆ. ಮಗು ತನ್ನದಲ್ಲದಿದ್ದರೂ ಕವಿ ಅದನ್ನು ನೋಡಿ ಸಂತೋಷಪಟ್ಟು ತೃಪ್ತಿ ತಂದುಕೊಳ್ಳಬಲ್ಲ. ಬೇಲೂರಿನ ಶಿಲಾ ಬಾಲಿಕೆಯರು ಚೆನ್ನಕೇಶವನ ದೇವಾಲಯದಲ್ಲಿವೆ. ಸಾಮಾನ್ಯ ಅವುಗಳು ತನ್ನ ಮನೆಯ ಡ್ರಾಯಿಂಗ್ ರೂಮು ಸೇರಿದಾಗಲೇ ಸುಖಿಸಬಲ್ಲ; ಕವಿ ಅವುಗಳನ್ನು ಇದ್ದಲ್ಲಿಯೇ ನೋಡಿ ಸುಖಿಸಬಲ್ಲ."

ಶ್ರೀನಾಥನ ವಾದಸರಣಿ ಕಮಲನ ಮನಸ್ಸಿಗೆ ಹಿಡಿಯಲಿಲ್ಲ. ಲೋಕ

ವ್ಯಾಪಾರ, ನಡೆವಳಿಕೆಗೆ ಅಳವಡದ ಯಾವದೋ ಆಕಾಶತತ್ತ್ವವನ್ನು ಅವನು ಪ್ರತಿಪಾದಿಸುತ್ತಿದ್ದಾನೆಂದು ಅವಳು ಭಾವಿಸಿದಳು.

ತಾನು ಆಡಿದ ಮಾತು ಕಮಲನ ಮನಸ್ಸಿಗೆ ಪೂರ್ಣವಾಗಿ ಹಿಡಿಯುವುದು ಸಾಧ್ಯವಿಲ್ಲವೆನ್ನುವುದು ಶ್ರೀನಾಥನಿಗೂ ಗೊತ್ತಿತ್ತು. ಆದರೆ ಇಂಥ ವಾದ ಒಂದಿದೆಯೆಂದು ಅವಳು ತಿಳಿದಿರಲಿ ಎಂದವನು ಚರ್ಚೆಮಾಡಿದ್ದ. ತನ್ನ ಮನಸ್ಸಿನಲ್ಲಿದ್ದುದನ್ನು ಶ್ರೀನಾಥ ಹೊರಚೆಲ್ಲಬೇಕಾಗಿತ್ತು. ತನ್ನ ಮಾತು ಕೇಳುವವರ ಮನಸ್ಸಿನ ಮೇಲೆ ಯಾವ ಪರಿಣಾಮವನ್ನುಂಟುಮಾಡಬಹು ದೆನ್ನುವುದರ ಕಡೆಗೆ ಅವನ ಲಕ್ಷ್ಯವಿರಲಿಲ್ಲ.

ಸಂಜೆಗಳೆದು ಕತ್ತಲೆ ಮುಸುಕುತ್ತ ಬಂದಿತ್ತು. ಶ್ರೀನಾಥ ಕಿಟಕಿ ಯಿಂದಾಚೆ ನೋಡಿ

"ಹೊರಡೋಣವೇ ?" ಎಂದು ಕೇಳಿದ.

"ಎಲ್ಲಿಗೆ ?"

ಎಂದು ಕಮಲ ಕೇಳಿದಳು. ಅವಳ ಧ್ವನಿಯಲ್ಲಿ ಬೇಸರವೂಡಿತ್ತು.

"ಎಲ್ಲಿಗೆ ಎಂದರೆ ಮನೆಗೆ."

"ಇವತ್ತು ಇಲ್ಲೇ ಇದ್ದರಾಗದೇ ?"

ಕಮಲನ ಮನಸ್ಸಿನಲ್ಲಿದ್ದುದು ಶ್ರೀನಾಥನಿಗೆ ಅರ್ಥವಾಯಿತು. ಅವಳಿಗೆ ಉತ್ತರ ಏನು ಹೇಳಬೇಕೆನ್ನುವುದು ಅವನಿಗೆ ಹೊಳೆಯಲಿಲ್ಲ.

"ಅಮ್ಮ ಬಂದು ಕಾಯುತ್ತಿರಬಹುದು."

"ಇಲ್ಲ. ಅವಳ ಪತ್ರಿರ ಇನ್ನೊಂದು ಬೀಗದಕ್ಕೆ ಇದೆ....ಇವತ್ತು ಇಲ್ಲೇ ಇರೋಣ. ಬೆಳಿಗ್ಗೆ ಹೋದರಾಯಿತು."

'ಸುತ್ತಲೂ ಸಂಸಾರವಂದಿಗರ ಮನೆ – ರಾತ್ರಿ ಕಮಲ ಇಲ್ಲೇ ಉಳಿದು ಕೊಂಡರೆ ಇಲ್ಲದ ಗಲಭೆಯಾಗಬಹುದು. ತಾನು ರೂಮು ಬಿಡುವ ಸಂದರ್ಭ ಒದಗಬಹುದು'

ಎಂದು ಶ್ರೀನಾಥ ಮನಸ್ಸಿನಲ್ಲಿ ಯೋಚಿಸಿದ – ಆದರೆ ಅದನ್ನು ಬಾಯಿ ಬಿಟ್ಟು ಕಮಲನಿಗೆ ಹೇಳುತ್ತಿರಲಿಲ್ಲ.

"ಇಲ್ಲಿ ತೊಂದರೆಯಾಗುತ್ತದೆ – ಬೇಡ. ಮನೆಗೇ ಹೋಗೋಣ"

ಎಂದು ಹೇಳಿದ. ಕಮಲನ ಮುಖ ಇಳಿಮುಖವಾಯಿತು.

"ಇಲ್ಲಿ ಯಾವ ಅನುಕೂಲವೂ ಇಲ್ಲ. ನೀರು ನಿಡಿಗಾಗಿ ಹೊಟೇಲಿನವರ ಮರೆಹೊಗಬೇಕು. ಅದಕ್ಕಾಗಿ ನಾನು ಹೇಳಿದ್ದು. ನಾನು ಮದರಾಸಿನಿಂದ ಹಿಂದಿರುಗಿದ ಮೇಲೆ ಬೇರೆ ಮನೆ ಮಾಡುತ್ತೇನೆ. ಆಗ ಒಂದಲ್ಲ – ನಾಲ್ಕು ದಿವಸ ನೀನಿದ್ದರೂ ಯೋಚನೆ ಇರುವುದಿಲ್ಲ."

"ನಾಳೆ ರಾತ್ರಿ ನೀವು ಹೊರಡುವವರು."

"ಹೌದು."

"ಹಾಗಾದರೆ ಅಲ್ಲಿಂದಲೇ ಹೊರಡಿ – ಬಟ್ಟೆಬರೆ ಜತೆಯಲ್ಲಿಯೇ ತೆಗೆದುಕೊಳ್ಳಿ."

ಕಮಲ ಹೇಳಿದಂತೆ ಶ್ರೀನಾಥ ಮಾಡಿದ. ಗಾಡಿ ತಂದು ಅದರಲ್ಲಿ ತನ್ನ 'ಹೋಲ್ಡ್ ಆಲ್' ಹಾಕಿ, ಕಮಲನೊಂದಿಗೆ ಕಬ್ಬನ್‌ಪೇಟೆಗೆ ಹೊರಟ.

ಕಮಲ, ಶ್ರೀನಾಥ ಮನೆಸೇರುವಷ್ಟರಲ್ಲಿ ಭಾಗ್ಯಮ್ಮ ಮನೆಗೆ ಬಂದಿರಲಿಲ್ಲ

"ನಿಮಗೆ ಊಟವಿಲ್ಲದೆ ಹಾಗಾಯಿತಲ್ಲಾ" ಎಂದಳು ಕಮಲ.

"ತಿಂಡಿಯಾಗಿದೆ – ಹಸಿವಿಲ್ಲ ನೀನು ..."

"ನನಗೂ ಹಸಿವಿಲ್ಲ, ಸ್ವಲ್ಪ ಕಾಫಿ ಮಾಡಬೇ?"

"ಹಾಲು!"

"ಪಕ್ಕದ ಮನೆಯಲ್ಲಿ ಹಾಲುಕೊಟ್ಟು ಹೋಗಿರುತ್ತಾಳೆ."

"ಮಾಡು"

ಎಂದ. ಕಮಲ ಒಲೆಹಚ್ಚಿ ನೀರಿಟ್ಟು ಕಾಫಿ ಮಾಡುವುದಕ್ಕೆ ನಿಂತಳು. ಶ್ರೀನಾಥ ರೂಮಿಗೆ ಬಂದು ಮಲಗಿಕೊಂಡ. ತಾನು ತೋರಿದ ಹೇಡಿತನಕ್ಕೆ ಅವನಿಗೆ ನಾಚಿಕೆಯಾಗಿತ್ತು.

'ಹೀಗೇ ಇನ್ನೆಷ್ಟು ದಿವಸ ನಡೆಸುವುದು. ತನ್ನವರಿಂದು ಕಮಲನನ್ನು ಒಪ್ಪಿಕೊಳ್ಳುವುದಕ್ಕೆ ಸಿದ್ಧನಾಗಿರುವೆನೇ? ಕಮಲನ ಕೈಹಿಡಿದರೆ – ಲೋಕ ತನ್ನನ್ನು ದೂರಮಾಡುತ್ತದೆ – ಲೋಕವನ್ನೆದುರಿಸಿ ನಿಲ್ಲುವ ಶಕ್ತಿ ಸಾಮರ್ಥ್ಯ ತನ್ನಲ್ಲಿದೆಯೇ'

ಎಂದು ಯೋಚಿಸಿದ. ಆದರೆ ಮನಸ್ಸು ಒಂದು ನಿರ್ಧಾರಕ್ಕೆ ಬಂದಿತ್ತು.

'ಏನೇ ಆಗಲಿ – ಯಾರೂ ಏನೇ ಅನ್ನಲಿ ಕಮಲನ ಕೈಬಿಡುವುದಿಲ್ಲ.

ಇಲ್ಲಿ ಬಾಳುವೆ ಮಾಡುವುದು ತೀರ ದುಸ್ಸಾಧ್ಯವಾದರೆ ಅವಳನ್ನೂ ಕರೆದು ಕೊಂಡು ಮದರಾಸಿಗೋ ಬೊಂಬಾಯಿಗೋ ಹೋಗಿಬಿಡುವುದು '

ಶ್ರೀನಾಥನ ಮನಸ್ಸು ಪ್ರತಿಪಕ್ಷವನ್ನು ಹಿಡಿದಿತ್ತು. ಅದರ ಆಕ್ಷೇಪಣೆಗಳನ್ನು ಅವನು ಮಹದ್ಪ್ರಯಾಸದಿಂದ ಬದಿಗೊತ್ತುತ್ತಿದ್ದ. ಆದರೆ ಅದು ಕೈಕೊಡವಿಕೊಂಡು ಮತ್ತೆ ಮತ್ತೆ ಅವನ ಮುಂದೆ ನಿಂತು ಕೇಳುತ್ತಿತ್ತು.

' ಇಷ್ಟೆಲ್ಲ ಅಪಖ್ಯಾತಿ ಅನುಭವಿಸಲು, ಸರ್ವಸ್ವವನ್ನೂ ತ್ಯಾಗ ಮಾಡಲು ಸಿದ್ಧನಾಗಿರುವೆಯಲ್ಲಾ ಶ್ರೀನಾಥ – ಅವಳು ಅದಕ್ಕೆ ಅರ್ಹಳೇ? ನಿನ್ನ ಬಲಿದಾನವನ್ನು ಅರ್ಥಮಾಡಿಕೊಳ್ಳುವ ಯೋಗ್ಯತೆ ಅವಳಿಗಿದೆಯೇ ?'

ಮನಸ್ಸಿನ ಕೋರಿ ಕೇಳಿ ಶ್ರೀನಾಥನಿಗೆ ಹಿಡಿಸಲಾರದಷ್ಟು ನಗೆ ಬಂದಿತು. ದಿಟ್ಟತನದಿಂದ ಉತ್ತರಿಸಿದ

' ದೇವರದೊಂದು ಮೂರ್ತಿ ಮಾಡಿ ನಾವು ಆರಾಧಿಸುತ್ತೇವೆ. ಒಡವೆ ವಸ್ತ್ರಗಳಿಂದ ಸಿಂಗರಿಸುತ್ತೇವೆ; ಭಕ್ಷ್ಯಭೋಜ್ಯಗಳನ್ನು ನಿವೇದನ ಮಾಡುತ್ತೇವೆ; ಉಪವಾಸ ಮಾಡುತ್ತೇವೆ. ನಮ್ಮಿಂದ ಇಷ್ಟು ಸೇವೆ ಕೈಗೊಳ್ಳುವ ಯೋಗ್ಯತೆ ದೇವರಿಗಿದೆಯೇ ಎಂದು ನಾವು ಆಲೋಚಿಸುತ್ತೇವೆಯೇ? ನಮ್ಮ ಬಲಿದಾನವನ್ನು ಅರ್ಥಮಾಡಿಕೊಳ್ಳುವ ಯೋಗ್ಯತೆ ದೇವರಿಗಿದೆಯೇ ಎಂದು ವಿಚಾರಮಾಡುತ್ತೇವೆಯೇ ?'

' ಕಮಲನಂಥ ಕುಲಟೆಯನ್ನು ದೇವರಿಗೆ ಹೋಲಿಸುವೆಯಾ ?'

' ನಾಸ್ತಿಕನೂ ದೇವರ ಬಗ್ಗೆ ಅದೇ ಮಾತನ್ನು ಹೇಳುತ್ತಾನೆ. ಮನುಷ್ಯನ ಅಜ್ಞಾನ, ಅಂಧಕಾರ, ಚಿತ್ತದಾಸ್ಯದ ಮೂರ್ತಿಮಂತ ಸ್ವರೂಪವೇ ದೇವರೆಂದು ನಾಸ್ತಿಕನ ಮತ.'

' ದೇವರನ್ನು ನಂಬಿದವರು ಯಾರೂ ಕೆಟ್ಟಿಲ್ಲ.'

' ಆ ಸರ್ಟಿಫಿಕೇಟ್ ಕೊಡುವವನು ಆಸ್ತಿಕ ತಾನೇ! ದೇವರನ್ನು ನಂಬಿದವನು ಉದ್ಧಾರವಾಗಿರುವ ನಿದರ್ಶನಗಳೆಲ್ಲಿವೆ? ಸೋಕ್ರಟಿಸ್, ಯೇಸು, ಮನಸೂರ್, ಅಪಮೃತ್ಯುವನ್ನು ಕಂಡುದು ದೇವರಲ್ಲಿ ಅವರಿಗಿದ್ದ ನಂಬಿಕೆಯಿಂದಲ್ಲವೇ ?'

' ಅವರಿಗೆ ಸಿಕ್ಕಿದ ಸಾವು ಬಂಧನದ ಬಿಡುಗಡೆಯ ಮಾರ್ಗವಾಯಿತು.'

' ಕಮಲನ ಬಗ್ಗೆ ನನಗಿರುವ ವಿಶ್ವಾಸ ನನ್ನನ್ನು ಸಾವಿನ ಮಡುಲಿನ
ಹಾಕಿದರೆ ನಾನೂ ಏಕೆ ಹಾಗೆ ಭಾವಿಸಬಾರದು.'

' ಇದು ಬುದ್ಧಿವಾದ.'

' ಬುದ್ಧಿ ಇಲ್ಲದ ವಾದ ವಾದವೇ ಅಲ್ಲ.'

ಕಮಲ ಕಾಫಿ ತಂದಾಗ ಶ್ರೀನಾಥನ ಮುಖದ ಮೇಲೆ ನಗೆ ಮೂಡಿದ ದನ್ನು ಕಂಡಳು.

" ಏಕೆ ನಗುತ್ತಿರುವಿರಿ ?"

" ಜಗಳವಾಡುತ್ತಿದ್ದೆ – ನಗೆ ಬಂದಿತು."

" ಯಾರೊಂದಿಗೆ ?"

" ನನ್ನ ಮನಸ್ಸಿನೊಂದಿಗೆ"

" ಯಾವ ವಿಷಯಕ್ಕೆ."

" ನಿನ್ನ ವಿಷಯಕ್ಕೆ."

" ನನ್ನ ವಿಷಯ."

" ಹೌದು. ನನ್ನ ಮನಸ್ಸು ಕೇಳಿತು ' ಈ ತ್ಯಾಗಕ್ಕೆ ಕಮಲ ಅರ್ಹಳೇ ಎಂದು ?"

" ನೀವೇನು ಹೇಳಿದಿರಿ ?"

" ಭಕ್ತನ ತ್ಯಾಗಕ್ಕೆ ದೇವರು ಅರ್ಹನೇ ಎಂದು ಕೇಳಿದೆ."

" ನನ್ನಂಥ ಪಾಪಿಯನ್ನು ದೇವರಿಗೇಕೆ ಹೋಲಿಸುವಿರಿ."

" ನೀನು ಪಾಪಿ ಎಂದು ಭಾವಿಸುವವರಿಗೆ ಆ ಮಾತು ಹೇಳು."

" ನಾನು ಪಾಪಿ ದೊರೆ, ನಿಜವಾಗಿಯೂ ಪಾಪಿ. ನಿಮ್ಮ ಯೋಗ್ಯತೆ ನನಗಿಂತಲೂ ಯೋಗ್ಯಳು ಸಿಕ್ಕಬೇಕಾಗಿತ್ತು."

" ಆ ಮಾತು ಸಾಕು – ಕಾಫಿ ಕೊಡು "

ಎಂದ. ಕಾಫಿ ಕುಡಿದು ಮುಗಿಸುವಷ್ಟರಲ್ಲಿ ಭಾಗ್ಯಮ್ಮ ಮನೆಗೆ ಬಂದಳ ಅವಳಿಗೂ ಊಟದ ಅಗತ್ಯವಿರಲಿಲ್ಲ. ಹೊರಗೆ ' ಬಿರಿಯಾನಿ ' ಹೊಡೆ ಬಂದಿದ್ದಳು. ಎರಡು ಗ್ಲಾಸು ನೀರು ಕುಡಿದು ಮಲಗಿದಳು

ಭಾಗ್ಯಮ್ಮನೂ ಊಟಮಾಡದೆ ಮಲಗಿದುದನ್ನು ಕಂಡು ಶ್ರೀನಾ ಕೇಳಿದ

" ಅಮ್ಮ ಊಟಮಾಡಲಿಲ್ಲವೇ ?"

" ಅವಳಿಗಿನ್ನೇಕೆ ಊಟ ! ಹೊರಗೆ ಹೋಗಿದ್ದಳು – ಪಟ್ಟಾಗಿ ಬಿರಿಯಾನಿ ಹೊಡೆದು ಬಂದಿದ್ದಾಳೆ."

" ಎರಡು ಹೊತ್ತು ಸರಿಯಾಗಿ ಊಟಮಾಡುವುದಕ್ಕಾಗುವುದಿಲ್ಲವೇ ? ಎಲ್ಲಿಯೋ ಹೋಗುವುದು – ಏನೋ ತಿನ್ನುವುದು ಯಾವ ಸಂಪ್ರದಾಯ. ಆರೋಗ್ಯ ಏನಾಗಬೇಕು ?"

" ನಾಳೆಯಿಂದ ನೀವು ಹೇಳಿದ ಹಾಗೇ ಮಾಡುತ್ತೇವೆ."

ಎಂದು ಸಮಾಧಾನ ಹೇಳಿದಳು.

ರಾತ್ರಿ ಶ್ರೀನಾಥ, ಕಮಲ ಜತೆಯಲ್ಲಿದ್ದರೂ ಅನ್ಯಮನಸ್ಕರಾಗಿದ್ದರು. ಭಾಗ್ಯಮ್ಮನ ಮನೆಯ ಜೀವನ – ನಾಗರಾಜ ಹೇಳಿದ ಮರ್ಮಭೇದಕ ಮಾತು ಶ್ರೀನಾಥನನ್ನು ಕಾಡುತ್ತಿತ್ತು. ಶ್ರೀನಾಥ ಕೇಳಿದ ಪ್ರಶ್ನೆ – ಅವನಿಗೂ ಅವನ ಮನಸ್ಸಿಗೂ ಆದ ಸಂಭಾಷಣೆ ಕಮಲನನ್ನು ಕೊರೆಯುತ್ತಿತ್ತು.

ಬೆಳಗಾದುದಕ್ಕೆ ಅವರಿಬ್ಬರೂ ದುಃಖಪಡಲಿಲ್ಲ. ಹಾಸಿಗೆ ಬಿಟ್ಟೆದ್ದು ಹೊರಡುವುದಕ್ಕೆ ಕಮಲ ಸಿದ್ಧಳಾದಾಗ ಶ್ರೀನಾಥ ಅವಳ ಕೈಹಿಡಿದು

" ನಿನ್ನೆ ರಾತ್ರಿ ಅನ್ಯಾಯವಾಯಿತು. ನಾನು ಇಂದು ಮದರಾಸಿಗೆ ಹೊರಡಲೇಬೇಕು."

ಎಂದು ಹೇಳಿದ.

ಕಮಲ ಉತ್ತರಕೊಡಲಿಲ್ಲ. ಆದರೆ ಅವಳ ಕಣ್ಣುಗಳಲ್ಲಿ ನೀರು ತುಂಬಿತ್ತು.

ಶ್ರೀನಾಥ ಎದ್ದವನೇ ಕಾಫಿ ಮುಗಿಸಿ, ಸ್ನಾನಮಾಡಿ ಹೊರಗೆ ಹೊರಡಲಣಿಯಾದ. ಅವನನ್ನು ಅಂದು ' ಹೊರಗೆ ಹೋಗಬೇಡಿ ' ಎಂದು ಹೇಳಲು ಕಮಲನಿಗೆ ಧೈರ್ಯವಾಗಲಿಲ್ಲ. ವಾಡಿಕೆಯಂತೆ

" ಎಷ್ಟು ಹೊತ್ತಿಗೆ ಬರುವಿರಿ ?"

" ಸ್ವಲ್ಪ ಹೊತ್ತಾಗಬಹುದು. ನನ್ನ ಪ್ರಕಾಶಕರನ್ನು ಕಂಡು ಬರಬೇಕಾಗಿದೆ. ನಿನ್ನೆಯೂ ಕಾಗದಗಳಿಗೆ ಉತ್ತರ ಬರೆಯಲಾಗಲಿಲ್ಲ ; ಇವತ್ತು ಮುಗಿಸದಿದ್ದರೆ !"

" ಊಟಕ್ಕೆ ಇಲ್ಲಿಗೇ........!"

ಶ್ರೀನಾಥ ಕಮಲನ ಮುಖವನ್ನು ದಿಟ್ಟಿಸಿ ನೋಡಿದ. 'ಬರುವುದಿಲ್ಲ' ಎಂದು ಎಲ್ಲಿ ಹೇಳಿಬಿಡುವನೋ ಎಂಬ ಅಂಜಿಕೆ ಕಮಲನ ಮುಖದಲ್ಲಿ ಸ್ಪಷ್ಟವಾಗಿ ಮೂಡಿತ್ತು.

ಶ್ರೀನಾಥ ಕಮಲನ ಗಲ್ಲ ಹಿಡಿದು

"ಇಲ್ಲಿಗೇ ಖಂಡಿತ ಬರುತ್ತೇನೆ. ಆದಷ್ಟು ಜಾಗ್ರತೆ ಬರುತ್ತೇನೆ."

"ಇನಿತ್ತು........"

"ಏನು ಹೇಳು ?"

"ನಾವಿಬ್ಬರೂ ಒಂದೇ ತಟ್ಟೆಯಲ್ಲಿ ಊಟಮಾಡಬೇಕೆಂದು ಆಸೆ."

"ಸಂತೋಷವಾಗಿ"

ಎಂದು ಹೇಳಿದ. ಕಮಲನ ಮುಖ ಪ್ರಸನ್ನವಾಯಿತು.

ಶ್ರೀನಾಥ ಕಬ್ಬನ್‌ಪೇಟೆ ಬಿಟ್ಟವನು ನೇರವಾಗಿ ರೂಮು ಸೇರಿದ. ಹತ್ತು ಗಂಟೆಯವರೆಗೆ ಪತ್ರವ್ಯವಹಾರದ ಕೆಲಸವಾಯಿತು. ಮೇಜಿನ ಡ್ರಾಯರಿನಲ್ಲಿಟ್ಟಿದ್ದ ಹಸ್ತಪ್ರತಿಯನ್ನು ಕೈಗೆ ತೆಗೆದುಕೊಂಡು ಪ್ರಕಾಶಕರ ಕಾರ್ಯಾಲಯದ ಬಳಿಗೆ ಹೊರಟ.

ಶ್ರೀನಾಥನ ಪ್ರಕಾಶಕರು ಸಂಜೀವರಾಯರು ಅವನು ಹೋದಾಗ ಕಾರ್ಯಾಲಯದಲ್ಲಿರಲಿಲ್ಲ. ಅವರ ಹಾದಿ ನೋಡುತ್ತ ಕುಳಿತ. ಕಾರ್ಯಾಲಯದ ಕಾರಕೂನ ಗೋಪಾಲಕೃಷ್ಣ

"ಕಾಫಿ ತರಿಸಿಕೊಡಲೇ ಸಾರ್" ಎಂದ.

"ಕಾಫಿ ಬೇಡಪ್ಪ – ಒಂದು ಪ್ಯಾಕ್ ಸಿಗರೇಟ್ ತರಿಸು"

ಗೋಪಾಲಕೃಷ್ಣ ಕಾಫಿ, ಸಿಗರೇಟ್ ಎರಡನ್ನೂ ತರಿಸಿಕೊಟ್ಟ.

ಶ್ರೀನಾಥ ಅರ್ಧಪ್ಯಾಕ್ ಸಿಗರೇಟ್ ಮುಗಿಸುವ ವೇಳೆಗೆ ಸಂಜೀವರಾಯರ ಸವಾರಿ ಸಾವಕಾಶವಾಗಿ ಚಿತ್ತೈಸಿತು.

ಶ್ರೀನಾಥನನ್ನು ಕಂಡವರೇ ಸಂಜೀವರಾಯರು ದೇಶಾವಾರದ ನಗೆ ಬೀರಿ

"ಯಾವಾಗ ಬಂದಿರಿ ?" ಎಂದು ಕೇಳಿದರು.

"ಎರಡು ದಿವಸವಾಯಿತು."

"ಇತ್ತ ಬರಲೇ ಇಲ್ಲ."

"ಕೈತುಂಬ ಕೆಲಸವಿತ್ತು – ಬರಲಾಗಲಿಲ್ಲ."

"ಹೊಸಕಾದಂಬರಿ ಏನಾಯಿತು."

ಶ್ರೀನಾಥ ಅವರ ಮುಂದೆ ಹಸ್ತಪ್ರತಿಯ ಕಟ್ಟನ್ನಿಟ್ಟ. ಸಂಜೀವ ರಾಯರು ಕಟ್ಟುಬಿಚ್ಚಿ ಹಾಳೆ ತಿರುವಿ ಹಾಕಿ

"ಮದರಾಸಿನಲ್ಲಿ ಕುಳಿತು ನೀವು ಕಾದಂಬರಿ ಮುಗಿಸಬಹುದೆಂದು ನಾನು ನಂಬಿರಲಿಲ್ಲ."

"ಏಕೆ ?"

"ಅಲ್ಲಿ ನೂರೊಂದು ಕೆಲಸ. ಇದಕ್ಕೆ ಬಿಡುವಿಲ್ಲಾಗುತ್ತದೆ ಎಂದು ಕೊಂಡಿದ್ದೆ. ಬರೆದು ಮುಗಿಸೇಬಿಟ್ಟಿರುವಿರಿ – ನೀವು ಗಟ್ಟಿಗರಪ್ಪಾ."

"ಇದನ್ನು ಯಾವಾಗ ಪ್ರಕಟಿಸುವಿರಿ ?"

"ಇಂದೇ ಪ್ರೆಸ್ಸಿಗೆ ಕಳಿಸುತ್ತೇನೆ."

"ಹಣ ಏನಾದರೂ ಕೊಡಲು ಸಾಧ್ಯವೇ ?"

"ನೋಡಿ ಶ್ರೀನಾಥ. ನಿಮ್ಮ ಪುಸ್ತಕಗಳು ಎಷ್ಟು ಬೇಕಾದರೂ ಪ್ರಕಟಿಸಲು ನಾನು ಸಿದ್ಧನಾಗಿರುವೆ. ಆದರೆ ಹಣಕ್ಕೆ ಹೀಗೆ ತೊಂದರೆ ಮಾಡಿದರೆ ನಾನು ಹೇಗೆ ಪೂರೈಸಬೇಕು."

"ಕಾದಂಬರಿ ಕೊಟ್ಟ ಕೂಡಲೆ ನೀವು ಹಣ ಕೊಡುವಿರೆಂದೇ ನಾನು ಎಲ್ಲಾ ಕೆಲಸಬಿಟ್ಟು ಇದನ್ನು ಮುಗಿಸಿದೆ. ಇದೂ ಬಾಕಿ ಬೀಳುವ ಹಾಗಿದ್ದರೆ ಬೇರೆ ಕಡೆಗೆ ಹೋಗುತ್ತೇನೆ."

"ಈಚೆಗೆ ನಿಮ್ಮ ವರ್ತನೆಯೇ ಬದಲಾಯಿಸಿ ಹೋಗಿದೆ ಶ್ರೀನಾಥ್. ಮೊದಲು ನೀವು ಹೀಗೆ ಮಾತನಾಡುತ್ತಿರಲಿಲ್ಲ."

"ಹೌದು. ಮೊದಲು ನನಗೆ ಅಷ್ಟು ಖರ್ಚೂ ಇರಲಿಲ್ಲ."

"ಹೋಗಲಿ. ಈಗ ಎಷ್ಟು ಬೇಕು ಹೇಳಿ."

"ಸ್ವಲ್ಪ ಹೆಚ್ಚಾಗಿಯೇ ಬೇಕು."

"ಇನ್ನೂರು ಕೊಡಲೇ ?"

"ಸಾಲುವುದಿಲ್ಲ."

"ಇನ್ನೆಷ್ಟು ಬೇಕು ?"

"ಒಂದು ಸಾವಿರ ಬೇಕು."

" ಸಾವಿರ !"

" ನನ್ನ ರಾಯಲ್ಟಿ ಲೆಕ್ಕ ಹಿಡಿದರೆ ಒಟ್ಟು ೧೩೫೦ ರೂಪಾ ನೀವು ಕೊಡಬೇಕಾಗುತ್ತದೆ. ಎರಡು ಸಾವಿರ ಪ್ರತಿ ಲೆಕ್ಕ ; ಪ್ರತಿಗೆ ನಾಲ್ಕಾ ರೂಪಾಯಿಯಂತೆ. ಈಗ ಸಾವಿರ ನಾನು ಕೇಳಿದರೆ ಹೆಚ್ಚೇನು ?"

" ಸರಿ ! ನಮ್ಮ ಕಷ್ಟ ಸುಖವನ್ನೂ ನೀವು ಸ್ವಲ್ಪ ನೋಡಬೇ ಮುದ್ರಣಕ್ಕೆ ನಾನು ನಾಲ್ಕೈದು ಸಾವಿರ ಕೂಡಲೆ ಒದಗಿಸಬೇಕು. ಎಲ್ಲ ಒಟ್ಟಿಗೆ ದುಡ್ಡು ಎಲ್ಲಿಂದ ತರಲಿ ? ಇತರ ಪುಸ್ತಕಗಳು ಬೇರೆ ಸಾಕಷ್ಟು ತಿಂದು ಕುಳಿತಿವೆ."

" ನನ್ನ ಕಾದಂಬರಿಗಳು ಚೆನ್ನಾಗಿ ಖರ್ಚಾಗುತ್ತವೆಂದು ನೀವೇ ಹ ತ್ತಿದ್ದಿರಿ."

" ಹೌದು ! ಇಲ್ಲವೆಂದು ನಾನು ಹೇಳಿದೆನೆ ? ನಾನು ಸೂಚಿಸಿದ ಇನ್ನೂರು ರೂಪಾಯಿ ತೆಗೆದುಕೊಂಡು ಹೋಗಿ."

" ಸಾಲುವುದಿಲ್ಲ. ನನಗೆ ಸಾವಿರ ಬೇಕೇ ಬೇಕು."

ಸಂಜೀವರಾಯರಿಗೆ ಪ್ರಾಣಸಂಕಟಕ್ಕಿಟ್ಟುಕೊಂಡಿತು. ಶ್ರೀನಾ ಕಾದಂಬರಿಯನ್ನು ಬಿಡಲು ಅವರಿಗೆ ಇಷ್ಟವಿಲ್ಲ ; ಅವನು ಕೇಳಿದಷ್ಟು ಕೊಡಲು ಮನಸ್ಸಿಲ್ಲ. ಐದು ನಿಮಿಷ ಯೋಚನೆ ಮಾಡಿ

" ಸಾವಿರ ಕೊಡುತ್ತೇನೆ – ಆದರೆ ಒಂದು ಕರಾರು."

" ಏನು ಹೇಳಿ."

" ಕಾದಂಬರಿಯ ಪೂರ್ಣಾಧಿಕಾರ ನನಗೆ ವಹಿಸಿಬಿಡಬೇಕು "

ಶ್ರೀನಾಥ ಯೋಚನೆ ಮಾಡಿದ. ಬೇರೆ ಮಾರ್ಗ ಅವನ ಚಿತ್ತಫ ಮೇಲೆ ಹೊಳೆಯಲಿಲ್ಲ.

" ನೀವೇ ಯೋಚನೆ ಮಾಡಿ – ಇದು ನ್ಯಾಯವೇ ? ನನ್ನ ಕಾದ ಹಲವು ಮುದ್ರಣಗಳನ್ನು ಕಾಣುತ್ತದೆ. ಮುಂದಿನ ಮುದ್ರಣಗಳಿಗೆ ಏನೂ ಬರದಂತೆ ಮಾಡುವುದು ನ್ಯಾಯವೇ ?"

" ನನ್ನ ಕೈಯಲ್ಲಿ ಅಷ್ಟೇ ಸಾಧ್ಯ ಸ್ವಾಮಿ. ಅದಕ್ಕೆ ಒಪ್ಪ ಸಾಧ್ಯವಾಗದಿದ್ದರೆ ನಿಮ್ಮ ಇಷ್ಟ."

ಎಂದರು.

ಶ್ರೀನಾಥನ ಮನಸ್ಸಿನಲ್ಲಿ ಏನೋ ನಿರ್ಧಾರವಮೂಡಿತು. ಹಣವಂತೂ ಅವನಿಗೆ ಬೇಕಾಗಿತ್ತು. ಮನಸ್ಸು ಗಟ್ಟಿಮಾಡಿ

"ಆಗಬಹುದು – ಆದರೆ ಹಣ ಈಗಲೇ ಕೊಡಬೇಕು."

"ಒಳ್ಳೆಯದು – ಚೆಕ್ ಕೊಡುತ್ತೇನೆ."

"ಬೇಡಿ – ಗೋಪಾಲಕೃಷ್ಣನ ಹತ್ತಿರ ಕ್ಯಾಷೇ ತರಿಸಿಕೊಟ್ಟು ಬಿಡಿ."

ಸಂಜೀವರಾಯರು ಮರುಮಾತಾಡಲಿಲ್ಲ. ಒಂದು ಚೆಕ್ ಬರೆದು ಗೋಪಾಲಕೃಷ್ಣನನ್ನು ಬ್ಯಾಂಕಿಗೆ ಕಳುಹಿಸಿ, ಕರಾರಿನ ಕಾಗದ ಬರೆದು ಮುಗಿಸಿದರು. ಹಣಸಂದ ರಶೀತಿಯೂ ಸಿದ್ಧವಾಯಿತು.

ಇಬ್ಬರೂ ಸಹಿ ಮಾಡಿದರು.

ಶ್ರೀನಾಥ ಗೋಪಾಲಕೃಷ್ಣನ ದಾರಿ ನೋಡುತ್ತ ಕುಳಿತ. ಗೋಪಾಲ ಕೃಷ್ಣ ಬಂದು ಧಣಿಯ ಕೈಗೆ ಹಣ ಎಣಿಸಿಕೊಡಲು ಅವರದನ್ನು ಶ್ರೀನಾಥನ ಕೈಗೆ ಹಾಕಿದರು.

ಶ್ರೀನಾಥ ಹೊರಟು ನಿಂತು

"ಅರ್ಧಗಂಟೆ ಗೋಪಾಲಕೃಷ್ಣನನ್ನು ಜತೆಯಲ್ಲಿ ಕಳಿಸಿಕೊಡುವಿರಾ? ಮಾರ್ಕೆಟ್ಟಿನಲ್ಲಿ ಸ್ವಲ್ಪ ಸಾಮಾನು ಬೇಕಾಗಿದೆ."

"ಅವಶ್ಯಕವಾಗಿ ಕರೆದುಕೊಂಡು ಹೋಗಿ. ಮುಂದಿನ ಕಾದಂಬರಿ ಯಾವಾಗ?"

"ಇನ್ನೆರಡು ತಿಂಗಳಲ್ಲಿ. ಆದರದನ್ನು ಹೀಗೆ ಅಗ್ಗಕ್ಕೆ ಕೊಡುವುದಿಲ್ಲ."

"ಹಸ್ತಪ್ರತಿ ತೆಗೆದುಕೊಂಡು ಬನ್ನಿ – ಮಾತಾಡೋಣ"

ಎಂದರು.

ಗೋಪಾಲಕೃಷ್ಣನನ್ನು ಜತೆಯಲ್ಲಿ ಕರೆದುಕೊಂಡು ಶ್ರೀನಾಥ ಹೊರಟ. ಮೌನವಾಗಿ ಬರುತ್ತಿದ್ದ ಗೋಪಾಲಕೃಷ್ಣ ಸ್ವಲ್ಪದೂರ ಹೋದಮೇಲೆ

"ಸಾರ್" ಎಂದ.

"ಏನಪ್ಪಾ?"

"ಏಕೆ ಸಾರ್. ಹೀಗೆ ಅಗ್ಗವಾಗಿ ನಿಮ್ಮ ಕಾದಂಬರಿಗಳನ್ನು ಕೊಡುತ್ತಿರುವಿರಿ?"

"ಅಗ್ಗವೇನು ಬಂತು ಗೋಪಾಲ್. ಒಂದು ಸಾವಿರ ರೂಪಾಯಿ ಸ್ವಲ್ಪವೇ ?"

"ಸ್ವಲ್ಪ ನೀವು ನಿಧಾನಿಸಿದ್ದರೆ ಅದರ ನಾಲ್ಕರಷ್ಟು ಬರುತ್ತಿತ್ತಲ್ಲಾ ಸಾರ್. ಇವತ್ತು ನಿಮ್ಮ ಕಾದಂಬರಿಗಳು ಹೇಗೆ ಮಾರಾಟವಾಗುತ್ತಿವೆ ನಿಮಗೆ ಗೊತ್ತೇನು ?"

"ಸಂಜೀವರಾಯರೂ ಹಣ ಸುರಿಯುತ್ತಾರೆ – ಕಷ್ಟಪಡುತ್ತಾರೆ – ಅವರೂ ನಾಲ್ಕು ಕಾಸು ಮಾಡಿಕೊಂಡರೆ ನನಗೆ ದುಃಖವಿಲ್ಲ ಗೋಪಾಲ್."

ಮಾರ್ಕೆಟ್ ಸಮೀಪಿಸಿತು. ಶ್ರೀನಾಥ ಒಂದು ಬುಟ್ಟಿಯ ತುಂಬ ಹಣ್ಣು, ಹೂವು, ತರಕಾರಿ ವ್ಯಾಪಾರಮಾಡಿದ. ಗೋಪಾಲಕೃಷ್ಣ ಗಾಡಿ ಗೊತ್ತುಮಾಡಿ ಬುಟ್ಟಿಯನ್ನು ಅದರಲ್ಲಿಟ್ಟ.

ಶ್ರೀನಾಥ ಕಿಸೆಯಿಂದ ಐವತ್ತು ರೂಪಾಯಿ ತೆಗೆದು ಗೋಪಾಲಕೃಷ್ಣನ ಕೈಗಿತ್ತ. ಗೋಪಾಲಕೃಷ್ಣನಿಗೆ ಪರಮಾಶ್ಚರ್ಯವಾಯಿತು.

"ಇದೇಕೆ ಸಾರ್" ಎಂದ.

"ನೀನಾದರೂ ನನ್ನ ಒಬ್ಬ ಮನುಷ್ಯ ಎಂದು ಭಾವಿಸಿರುವೆಯಲ್ಲಾ ಗೋಪಾಲಕೃಷ್ಣ. ಅದಕ್ಕೆ ಸಂತೋಷವಾಯಿತು. ತೆಗೆದುಕೋ."

"ನಾನೇನು ಸಾರ್. ಇಡಿಯ ಲೋಕವೇ ತಿಳಿದುಕೊಂಡಿದೆ. ನಿಮ್ಮ ಕಾದಂಬರಿಗಳು ಎಷ್ಟು ಮನೆ ಬೆಳಗಿಸಿವೆ ಬಲ್ಲಿರಾ ? ಎಷ್ಟು ಮನಸ್ಸು ಶುಚಿ ಮಾಡಿವೆ ಬಲ್ಲಿರಾ ?"

ಶ್ರೀನಾಥನಿಗೆ ಉತ್ತರಿಸಲಾಗಲಿಲ್ಲ. ಗಾಡಿಪತ್ತಿ ಹೊರಟು ಬಿಟ್ಟ.

ದಾರಿಯುದ್ದಕ್ಕೂ ಅವನ ತಲೆಯಲ್ಲಿ ಗೋಪಾಲಕೃಷ್ಣನ ಮಾತುಗಳು ಮೊರೆಯುತ್ತಿದ್ದವು.

'ನನ್ನ ಕಾದಂಬರಿಗಳು ಹಲವು ಮನೆ, ಹಲವು ಮನ ಬೆಳಗುತ್ತಿವೆ. ಆದರೆ ನಾನು ! – ನಾನು ಮಾಡುತ್ತಿರುವುದೇನು ?'

ಕಮಲ ಬಾಗಿಲಲ್ಲೇ ಶ್ರೀನಾಥನನ್ನು ಕಾಯುತ್ತ ನಿಂತಿದ್ದಳು. ನಗೆ ಮೊಗದಿಂದ ಅವನಿಗೆ ಸ್ವಾಗತ ಬಯಸಿದಳು.

ಕಮಲ ಬಯಸಿದ್ದಂತೆ ಇಬ್ಬರೂ ಕುಳಿತು ಒಂದೇ ತಟ್ಟೆಯಲ್ಲಿ ಊಟ

ಗಿಸಿದರು. ಭಾಗ್ಯಮ್ಮನ ಊಟ ಮುಗಿಯುತ್ತಲೆ ಕಮಲ ವೀಳೆಯದೆಲೆ ಹಿಡಿದು ಒಳಕ್ಕೆ ಬಂದಳು.

ಮೇಜಿನ ಮೇಲೆ ತಟ್ಟೆಯಿಟ್ಟು, ಕೈಗೆ ಎಲೆ ತೆಗೆದುಕೊಂಡು ಸುಣ್ಣ ಕ್ಚಲು ಕಮಲ ಆರಂಭಿಸಿದಳು. ಶ್ರೀನಾಥ ಅವಳ ಕೈಹಿಡಿದು ಪಕ್ಕದಲ್ಲಿ ಡಿಸಿಕೊಂಡು

"ತಾಂಬೂಲ ನಿಧಾನವಾಗಿ ಆಗಲಿ."

ಕಮಲ ನಸುನಕ್ಕಳು.

ಶ್ರೀನಾಥ ತನ್ನ ಕೋಟಿನ ಕಿಸೆಯಿಂದ ಒಂದು ಕಟ್ಟು ನೋಟು ದು, ಕಮಲನ ಕೈಯಲ್ಲಿಟ್ಟ.

"ಇದೇನು" ಎಂದಳು.

"ನೋಡು – ಎಣಿಸಿ ನೋಡು"

ಕಮಲ ಎಣಿಸಿನೋಡಿ

"ನೂರು ರೂಪಾಯಿನ ಎಂಟು ನೋಟುಗಳು. ನನಗೇಕೆ ಇಷ್ಟು ಹಣ."

"ಇರಲಿ ನಿನ್ನ ಹತ್ತಿರ."

"ಎಲ್ಲಿಂದ ಬಂತು ?"

"ಕದ್ದುಕೊಂಡು ಬಂದೆ."

"ಹಾಸ್ಯ ಸಾಕು. ಹೇಳಿ."

"ಹೊಸ ಕಾದಂಬರಿ ಕೊಟ್ಟುಬಿಟ್ಟೆ."

ಕಮಲ ನೋಟಿನ ಕಂತೆಯನ್ನು ಶ್ರೀನಾಥನ ಕೈಗಿತ್ತು

"ನನಗೆ ಬೇಡ" ಎಂದಳು.

"ಏಕೆ ?"

"ಕೇವಲ ಹಣಕ್ಕಾಗಿ ನಿಮ್ಮ ಸ್ನೇಹಮಾಡಿರುವುದಾಗಿ ಭಾವಿಸಿರುವಿರಾ?"

"ಇಲ್ಲ."

"ಇಲ್ಲವೆನ್ನಬೇಡಿ. ನಿಮ್ಮ ಭಾವನೆಯೇ ಹಾಗಿದೆ."

"ಅಯ್ಯೋ ಹುಚ್ಚಿ – ನನ್ನ ಭಾವನೆ ಹೇಗಿದೆಯೆನ್ನುವುದು ನಿನಗೆ ಹೇಗೆ ಯಬೇಕು. ನಿನ್ನ ತಾಯಿಯ ಧನಪೈಶಾಚ್ಯಕ್ಕೆ ನೀನು ತುತ್ತಾಗ ರದೆಂದು ಹಣ ಕೊಟ್ಟೆ."

"ನಾನು ಬಡತನದಲ್ಲಿ ಸಂಸಾರ ಮಾಡಿಕೊಂಡು ಸುಖವಾಗಿರಬಲ್ಲೆ – ನಿಮ್ಮ ವಿಶ್ವಾಸವೊಂದು ದೃಢವಾಗಿದ್ದರೆ........"

"ನನ್ನ ಜತೆ ನಿನಗೆ ಬಡತನದ ಸಂಸಾರ ಕಟ್ಟಿಟ್ಟ ಮುಡಿಪು. ಈಗ ನಾನು ದುಡಿಯುತ್ತಿರುವ ಹಾಗೆ ಎಷ್ಟು ದಿನ ದುಡಿಯಬಲ್ಲೆ. ನನ್ನ ವೃತ್ತಿ ಯಂತ್ರವೃತ್ತಿಯಲ್ಲ – ಈ ತಲೆ ಬರಿದಾಗದ ಹಾಗೆ ನೋಡಿಕೊಳ್ಳು ವುದೇ ನನಗೊಂದು ಮಹಾಸಾಧನೆ. ನಾನು ಕೊಟ್ಟಿರುವ ಹಣ ಜೋಪಾನ ವಾಗಿಟ್ಟುಕೋ – ನಾಳೆ ನಮ್ಮ ಕಷ್ಟ ಸುಖಕ್ಕೆ ಅದರ ನೆರವು ಬೇಕಾಗುತ್ತದೆ."

ಎಂದು ಹಣವನ್ನು ಮತ್ತೆ ಅವಳ ಕೈಯಲ್ಲಿಟ್ಟ. ಕಮಲ ಅದನ್ನು ನಿರಾಕರಿಸಲಿಲ್ಲ.

ಇಬ್ಬರೂ ರೂಮು ಬಿಟ್ಟು ಹೊರಬರುವ ಹೊತ್ತಿಗೆ ಸಂಜೆಯಾಗಿತ್ತು. ಭಾಗ್ಯಮ್ಮ ಅವರನ್ನು ಒಂದೆರಡು ಸಲ ಕೂಗಿ, ಉತ್ತರ ಬಾರದಿರಲು ಬೇಸತ್ತು, ಸಿಡಿಗುಟ್ಟಿಕೊಂಡು ತೆಪ್ಪಗಾಗಿದ್ದಳು.

ಮಗಳು ಹೊರಕ್ಕೆ ಬರಲು ಮುಖ ಕೆಂಪಗೆ ಮಾಡಿಕೊಂಡು

"ಹೊತ್ತಿಲ್ಲ ಗೊತ್ತಿಲ್ಲ, ನೀನೋ ನಿನ್ನ ಬುದ್ಧಿಯೋ !" ಎಂದಳು.

"ಅವರು ಇವತ್ತು ರಾತ್ರಿ ಊರಿಗೆ ಹೊರಡುತ್ತಾರೆ"

"ಯಾವಾಗಲಾದರೂ ಹೋಗಲಿ ನನಗೇನು ? ಏಕೆ ಕಳಿಸಿಕೊಡುತ್ತೀ. ನಿನ್ನ ಮುಂದೇನೇ ಸದಾ ಕೂಡಿಸಿಕೊಂಡಿರು – ಈರಣ್ಣನ ಮುಂದೆ ಬಸವಣ್ಣ."

"ಹೋಗಲಿ ಸುಮ್ಮನಾಗುತ್ತೀಯೋ ಇಲ್ಲವೇ ಅಮ್ಮ. ಅವರ ಕಿವಿಯ ಮೇಲೆ ನೀನು ಆಡುವ ಮಾತು ಬಿದ್ದೀತು."

"ಬಿದ್ದರೆ ಬೀಳಲಿ ನನಗೇನು ಭಯ."

ಎದುರಿಗೆ ನಿಂತರೆ ಮಾತಿಗೆ ಮಾತು ಬೆಳದೀತು ಎಂದು ಕಮಲ ಅಲ್ಲಿ ನಿಲ್ಲದೆ ಹೊರಟುಹೋದಳು.

ಶ್ರೀನಾಥ ಹೊರಡುವ ಸಿದ್ಧತೆ ಮಾಡಿಕೊಳ್ಳತೊಡಗಿದ.

ಕಮಲನನ್ನು ಬಿಟ್ಟು ಹೋಗಬೇಕಲ್ಲಾ ಎಂದು ಅವನ ಮನಸ್ಸು ಖಿನ್ನವಾಯಿತು.

ಕಮಲ ಒಳಕ್ಕೆ ಬಂದವಳೇ ಕೇಳಿದಳು

"ರೈಲು ಎಷ್ಟು ಹೊತ್ತಿಗೆ"

"ಸರಿಯಾಗಿ ಒಂಭತ್ತು ಗಂಟೆಗೆ. ನಾನು ಏಳೂವರೆಗೆ ಮನೆ ಬಿಡಬೇಕಾಗುತ್ತದೆ."

"ಸ್ಟೇಷನ್ನಿಗೆ ನಾನೂ ಬರುತ್ತೇನೆ."

"ರಾತ್ರಿ ಹೊತ್ತು....ಅಲ್ಲಿಂದ ಒಬ್ಬಳೇ ಮನೆಗೆ ಹೇಗೆ ಹಿಂದಿರುಗುವೆ ?"

"ಅಮ್ಮನೂ ಬರುತ್ತಾಳೆ....ಗಾಡಿ ಮಾಡಿಕೊಂಡು ಬರುತ್ತೇವೆ."

"ನಿನ್ನ ಇಷ್ಟ"

ಮನೆ ಬಿಟ್ಟು ಹೊರಡುವ ವೇಳೆ ಸಮೀಪಿಸಲು ಶ್ರೀನಾಥನ ದುಃಖ ಹೆಚ್ಚಿತು. ಅವನ ಸ್ಥಿತಿ ನೋಡಿ ಕಮಲನ ಕಣ್ಣಲ್ಲಿ ನೀರೂರಿತು.

ಕಮಲನ ಬಲವಂತಕ್ಕೆ ಒಂದು ತುತ್ತು ಹಾಲೂ ಅನ್ನ ಊಟಮಾಡಿ ಶ್ರೀನಾಥ ಗಾಡಿಗೆ ಸಾಮಾನು ಸಾಗಿಸಿದ. ಭಾಗ್ಯಮ್ಮ, ಕಮಲ ಹೊಸ ಸೀರೆ ಉಟ್ಟುಕೊಂಡು ಅವನ ಜತೆ ಹೊರಟರು.

ಶ್ರೀನಾಥನ ಗುರುತಿನ ಟಿಕೆಟ್ ಕಲೆಕ್ಟರೊಬ್ಬ ಅವನಿಗೆ ಸೆಕೆಂಡ್‌ಕ್ಲಾಸಿನಲ್ಲಿ ಜಾಗ ಮಾಡಿಕೊಟ್ಟ.

ರೈಲು ಹೊರಡುವ ಮುನ್ನ ಶ್ರೀನಾಥ ಭಾಗ್ಯಮ್ಮನಿಗೆ

"ಹೋಗಿಬಿಟ್ಟು ಬರುತ್ತೇನಮ್ಮ. ಕಮಲನನ್ನು ಚೆನ್ನಾಗಿ ನೋಡಿಕೊಳ್ಳಿ"

ಎಂದು ಹೇಳಿದ.

"ಬೇಗ ಬಂದುಬಿಡಿಯಪ್ಪ. ಕೆಲಸ ಮುಗಿದ ಮೇಲೆ ಮದರಾಸಿನಲ್ಲಿ ನಿಲ್ಲಬೇಡಿ"

ಎಂದಳು.

ಕಮಲ ದೈನ್ಯದಿಂದ

"ಹೋದ ಕೂಡಲೆ ಕಾಗದ ಬರೆಯುವಿರಾ ?"

"ಬರೆಯದೆ ಇರುತ್ತೇನೆಯೇ ?"

"ಸಮಾಧಾನವಾಗಿರಿ – ನನ್ನ ವಿಷಯ ಯೋಚನೆ ಹಚ್ಚಿಕೊಳ್ಳಬೇಡಿ – ನಾನು ಎಂದಿಗೂ ನಿಮ್ಮವಳೇ."

ಅವಳ ಆಶ್ವಾಸನ ಶ್ರೀನಾಥನ ಮನಸ್ಸಿಗೆ ಶಾಂತಿ ನೀಡಿತು.

ರೈಲು ಹೊರಟುಬಿಟ್ಟಿತು. ಶ್ರೀನಾಥ ಬಾಗಿಲಲ್ಲೇ ನಿಂತುಕೊಂಡು ಕಮಲನನ್ನೀಕ್ಷಿಸುತ್ತಿದ್ದ. ಅವಳು ಕಣ್ಣೀರು ಹಾಕುತ್ತಿದ್ದುದನ್ನು ಕಂಡು ಅವನ ಹೃದಯಕ್ಕೆ ತಳಮಳವಾಯಿತು.

ಮನೆಗೆ ಹಿಂದಿರುಗಿದ ಕೂಡಲೆ ಕಮಲ ರೂಮು ಸೇರಿ ಮಲಗಿಬಿಟ್ಟಳು. ಅವಳ ಹೃದಯ ಅಪಾರಯಾತನೆಯಲ್ಲಿ ಹಿಂಡಿಹೋಗಿತ್ತು.

ಮಾರನೆಯ ಬೆಳಿಗ್ಗೆ ಕಮಲ ಏಳುವ ಹೊತ್ತಿಗೆ ಒಂಭತ್ತು ಗಂಟೆಯಾಗಿತ್ತು. 'ಮನಸ್ಸು ಬಂದಾಗ ಏಳಲಿ' ಎಂದು ಭಾಗ್ಯಮ್ಮನೂ ಅವಳನ್ನೆಬ್ಬಿಸುವ ಪ್ರಯತ್ನಮಾಡಲಿಲ್ಲ.

ಕಮಲ ಎದ್ದು ತೊಟ್ಟಿಗೆ ಬಂದಕೂಡಲೆ ಅವಳ ಕಣ್ಣಿಗೆ ಬಿದ್ದವನು ನಾಗರಾಜ. ಮುಖ ತೊಳೆದುಕೊಂಡು ಬಂದು

"ನೀನು ಯಾವಾಗ ಬಂದೆಯಪ್ಪಾ."

ಎಂದು ಕೇಳಿದಳು.

"ಆಗಲೇ ಬಂದೆ. ಇದೇನು ಕಮಲ, ಇಷ್ಟುಹೊತ್ತು ಮಲಗಿಬಿಟ್ಟಿದ್ದೆ."

"ರಾತ್ರಿ ನಿದ್ರೆ ಬರಲಿಲ್ಲ. ಬೆಳಗಿನ ಝಾಮು ನಿದ್ರೆ ಹತ್ತಿರಬೇಕು."

"ಅವರು ಊರಿಗೆ ಪ್ರಯಾಣಮಾಡಿದರಂತೆ."

"ನಿನಗೆ ಹೇಗೆ ಗೊತ್ತಾಯಿತು."

"ಅಮ್ಮ ಹೇಳಿದಳು."

"ಏನು ಬಂದಿದ್ದೆ."

"ನಿನ್ನ ನೋಡಿ ಬಹಳ ದಿವಸವಾಗಿತ್ತು – ಬಂದೆ. ನನ್ನೇನು ಸಿನೀಮಾಗಿನೀಮಾಕ್ಕೆ ಕರೆದುಕೊಂಡು ಹೋಗುವುದಿಲ್ಲ."

"ನನಗೆ ಯಾವದೂ ಮನಸ್ಸಿಲ್ಲ ನಾಗರಾಜ."

"ನೀನು ಕರೆದುಕೊಂಡು ಹೋಗದಿದ್ದರೆ ಚಿಂತೆಯಿಲ್ಲ – ನಾನೇ ಕರೆದುಕೊಂಡು ಹೋಗುತ್ತೇನೆ ಬರುತ್ತೀಯಾ ?"

"ಈಗ !"

"ಈಗಲ್ಲ – ಮಧ್ಯಾಹ್ನದ ಆಟಕ್ಕೆ."

"ಇದೇನು ನಾಗರಾಜ....ಇದ್ದಕ್ಕಿದ್ದಂತೆ ನೀನು ಶ್ರೀಮಂತನಾದ ಹಾಗೆ ಕಾಣುತ್ತದೆ."

"ಕಾಲ ಒಂದೇ ರೀತಿ ಇರುತ್ತದೆಯೇ ಕಮಲ. ಬಡವನೂ ಒಂದು ಕಾಲಕ್ಕೆ ಅನುಕೂಲಸ್ಥನಾಗಿಯೇ ಆಗುತ್ತಾನೆ."

ಕಾಫಿತಂದ ಭಾಗ್ಯಮ್ಮನಿಗೆ ಕಮಲ ಸಿನೀಮಾಕ್ಕೆ ಹೋಗುವ ವಿಷಯ ತಿಳಿಸಿದಳು.

"ನೀನು ಇಲ್ಲೀಗೇ ಬರುತ್ತೀಯೇನಪ್ಪಾ ?"

"ಹೂ ! ಬರದೇ ! ಎರಡು ಗಂಟೆಗೇ ಬರುತ್ತೇನೆ."

"ಯಾವ ಥಿಯೇಟರು ?"

"ಹೊಸದಾಗಿ ಆಗಿದೆಯೆಲ್ಲಾ 'ಅರುಣ.'"

"ನಾನು ಆ ಥಿಯೇಟರಿನಲ್ಲಿ ಪಿಕ್ಚರ್ ನೋಡಿಯೇ ಇಲ್ಲ"

ಎಂದು ಕಮಲ ಹೇಳಿದಳು.

"ನಾನು ಬರುವ ಹೊತ್ತಿಗೆ ನೀವು ಸಿದ್ಧವಾಗಿರಿ"

ಎಂದು ಹೇಳಿ ನಾಗರಾಜ ಹೊರಟುಬಿಟ್ಟ.

ನಾಗರಾಜ ಆಡಿದ ಮಾತಿಗೆ ತಪ್ಪಲಿಲ್ಲ. ಎರಡು ಗಂಟೆಗೆ ಸರಿಯಾಗಿ ಗಾಡಿ ಮಾಡಿಕೊಂಡೇ ಬಂದ. ಅಲಂಕಾರ ಮಾಡಿಕೊಂಡು ಭಾಗ್ಯಮ್ಮ, ಕಮಲ ಅರ್ಧಗಂಟೆಯಲ್ಲಿ ಹೊರಟುಬಿಟ್ಟರು.

ಥಿಯೇಟರ್ ಮುಂದೆ ಗಾಡಿಯಿಂದಿಳಿದು ಕಮಲ ಬಾಡಿಗೆ ಕೊಡ ಹೋದಳು. ನಾಗರಾಜ ಅವಳ ಕೈಯಿಂದ ಕೊಡಿಸಲಿಲ್ಲ.

ಥಿಯೇಟರ್ ಆಳು ಅವರನ್ನು ಕರೆದೊಯ್ದು ಬಾಲ್ಕನಿಯಲ್ಲಿ ಕೂಡಿಸಿದ. ಕಮಲನಿಗೆ ಪರಮಾಶ್ಚರ್ಯವಾಯಿತು.

"ಇದು ಎಷ್ಟರ ಸೀಟೋ ನಾಗರಾಜ" ಎಂದು ಕೇಳಿದಳು.

"ಎರಡೂಕಾಲು ರೂಪಾಯಿ ಸೀಟು."

"ನಿನಗೆ ಭಾರಿ ಪುಟ್ಟಗಂಟು ಸಿಕ್ಕಿದ ಹಾಗೆ ಕಾಣುತ್ತದೆ."

"ಥಿಯೇಟರಿನವರು ನನಗೆ ಗುರುತು ಕಮಲ."

ಎಂದು ಹೇಳಿದ. ಕಮಲ ಥಿಯೇಟರಿನ ಅಂದ ಚೆಂದವನ್ನು ನೋಡಿ ಮೆಚ್ಚಿಕೊಂಡಳು.

ಚಿತ್ರ ಆರಂಭವಾಗುವುದಕ್ಕೆ ಸ್ವಲ್ಪ ಹೊತ್ತಿಗೆ ಮುಂಚೆ ಜರೀ ರುಮಾಲ

ಧರಿಸಿ, ಟ್ವೀಡ್ ಕೋಟ್ ಹಾಕಿಕೊಂಡು, ಬಾಲ್ಕನಿಯಲ್ಲಿ ಓಡಿಯಾಡುತ್ತಿದ್ದ ಒಬ್ಬ ವ್ಯಕ್ತಿಯ ಕಡೆ ಕಮಲನ ಗಮನ ಸೆಳೆದು ನಾಗರಾಜ

"ಅವರೇ ನೋಡು ಕಮಲ, ಥಿಯೇಟರಿನ ಯಜಮಾನರು, ಗವಿಯಪ್ಪನವರು."

"ಥಿಯೇಟರಿಗೆ ಎಷ್ಟು ಖರ್ಚಾಯಿತು ನಾಗರಾಜ."

"ಮೂರು ನಾಲ್ಕು ಲಕ್ಷವಾಗಿರಬಹುದು."

"ಮೂರು ನಾಲ್ಕು ಲಕ್ಷವೇ! ಹಾಗಾದರೆ ಅವರು ಭಾರಿ ಶ್ರೀಮಂತರಾಗಿರಬಹುದು."

"ಅವರಿಗೇನಮ್ಮ ದೇವರು ಕಡಿಮೆ ಮಾಡಿರುವುದು. ಸಾಕ್ಷಾತ್ ಲಕ್ಷ್ಮೀಪುತ್ರರು. ಈ ಊರಿನಲ್ಲಿಯೇ ೩೦-೪೦ ಮನೆ ಇದೆ – ತಿಂಗಳಿಗೆ ಮನೆ ಬಾಡಿಗೆಯೇ ಸಾವಿರಾರು ರೂಪಾಯಿ ಬರುತ್ತದೆ."

'ಬಂಧನ್' ಚಿತ್ರ ಆರಂಭವಾಯಿತು.

ವಿರಾಮ ಕಾಲ ಬಂತು. ದೀಪಗಳು ಹೊತ್ತಿಸಲ್ಪಟ್ಟವು. ಥಿಯೇಟರಿನ ಹೋಟಲ್ ಮಾಣಿ ಮೂರು ಜನಕ್ಕೆ ತಿಂಡಿ, ಕಾಫಿ ತಂದಿತ್ತು ನಾಗರಾಜನಿಗೆ ಎರಡು ಪ್ಯಾಕ್ 'ಗೋಲ್ಡ್ ಫ್ಲೇಕ್' ಸಿಗರೇಟು ಕೊಟ್ಟು ಹೋದ.

ಮಾಣಿ ಪಾತ್ರೆಗಳನ್ನು ಒಯ್ಯುವುದಕ್ಕೆ ಬಂದಾಗ ಅವನ ಕೈಗೆ ಕಮಲ ಹಣ ಕೊಡಹೋದಳು.

"ಬಿಲ್ ಬಂದಿದೆ ತಾಯಿ"

ಎಂದು ಮಾಣಿ ಹೇಳಿಹೋದ.

ಚಿತ್ರ ಮತ್ತೆ ಆರಂಭವಾಯಿತು. ನಾಗರಾಜ 'ಇದೋ ಬಂದೆ' ಎಂದು ಹೇಳಿ ಎದ್ದು ಹೋಗಿ ಹತ್ತು ನಿಮಿಷ ಬಿಟ್ಟು ಬಂದು ಮತ್ತೆ ಕುಳಿತ.

ಅವರನ್ನು ಮನೆಗೆ ನಾಗರಾಜನೇ ಕರೆತಂದು ಬಿಟ್ಟ.

"ಒಳಗೆ ಬಾಪ್ಪ. ಕಾಫಿ ಕುಡಿದುಕೊಂಡು ಹೋಗುವೆಯಂತೆ"

ಎಂದು ಭಾಗ್ಯಮ್ಮ ಕರೆದು ಕಮಲನಿಗೆ ಕಾಫಿ ಮಾಡೆಂದು ಹೇಳಿದಳು. ಮನೆಯಲ್ಲಿದ್ದ ಹಾಲು ಒಡೆದು ಹೋಗಿತ್ತು. ಕಮಲ ಒಲೆ ಹೊತ್ತಿಸಿ, ನೀರಿಟ್ಟು ಪಕ್ಕದಮನೆಯಲ್ಲಿ ಸ್ವಲ್ಪ ಹಾಲು ಎರವು ತರಲು ಹೋದಳು.

ನಾಗರಾಜ ಪಿಸುಮಾತಿನಲ್ಲಿ ಆರಂಭಿಸಿದ

"ಆಯುಪ್ಪ ಬರುವುದು ಇನ್ನೆಷ್ಟು ದಿವಸಕ್ಕೆ ಭಾಗ್ಯಮ್ಮ."

"ಒಂದೂವರೆ ತಿಂಗಳಾಗಬಹುದು."

"ಅಲ್ಲಿಯವರೆಗೆ........"

"ನಾನೇನೂ ಯೋಚನೆ ಮಾಡಿಲ್ಲಪ್ಪ."

"ನಾನೊಂದು ಮಾತು ಹೇಳಲೇ ?"

"ಹೇಳು."

"ಒಬ್ಬ ಭಾರಿ ದೊಡ್ಡ ಮನುಷ್ಯರನ್ನು ನಾನು ನೋಡಿದ್ದೇನೆ. ನೀನು ಒಪ್ಪುವಹಾಗಿದ್ದರೆ ಕರೆದುಕೊಂಡು ಬರುತ್ತೇನೆ."

"ಯಾರವರು ?"

"ಸಿನೀಮಾದಲ್ಲಿ ನಾನು ತೋರಿಸಿದೆ ನೋಡು – ಅವರು."

"ಮಾಲೀಕರು."

"ಹೂ !"

ಭಾಗ್ಯಮ್ಮನ ಮುಖ ಬೆಳಕಾಯಿತು.

"ಬರೀ ದೊಡ್ಡ ಮನುಷ್ಯರೋ, ಕಾಸೂ ದುಡ್ಡೂ ಬಿಚ್ಚುತ್ತಾರೋ ?"

"ನೀನೇ ನೋಡುವೆಯಂತೆ. ಮನುಷ್ಯ ಹಣ್ಣ ನೀರು ಚೆಲ್ಲಿದ ಹಾಗೆ ಚೆಲ್ಲುವವನು. ಊರು ತುಂಬ ಅವನಿಗೆ ಮನೆಗಳಿವೆ – ನಿಮಗೊಂದು ಮನೆ ಕೊಡುವುದೇನೂ ದೊಡ್ಡ ವಿಷಯವಲ್ಲ."

"ಯಾವಾಗ ಕರೆದುಕೊಂಡು ಬರುತ್ತೀ ?"

"ನಿನ್ನ ಕೇಳಿ ಹೇಳುತ್ತೇನೆಂದು ತಿಳಿಸಿದ್ದೇನೆ. ಥಿಯೇಟರಿನಲ್ಲಿ ನನ್ನ ದಾರಿ ಕಾಯುತ್ತಿರುತ್ತಾರೆ. ನೀನು ಒಪ್ಪಿದರೆ ಈಗಲೇ ಕರೆದುಕೊಂಡು ಬರುತ್ತೇನೆ"

"ಒಂದು ಗಂಟೆ ಬಿಟ್ಟು ಕರೆದುಕೊಂಡು ಬಾ. ಅಷ್ಟರಲ್ಲಿ ನಾನು ಕಮಲನ ಜತೆ ಮಾತನಾಡಿರುತ್ತೇನೆ."

ಕಮಲ ಹಾಲು ತೆಗೆದುಕೊಂಡು ಬಂದುದನ್ನು ನೋಡಿ ಇಬ್ಬರೂ ಮಾತು ನಿಲ್ಲಿಸಿದರು. ನಾಗರಾಜ ಕಾಫಿ ಕುಡಿದುಕೊಂಡು ಹೊರಟು ಹೋದ.

ಭಾಗ್ಯಮ್ಮ ತಾನು ಕುಳಿತಿದ್ದೆಡೆಗೇ ಮಗಳನ್ನು ಕರೆದು ತನ್ನ ಪೂರ್ವ

ಕಥೆಯನ್ನು ನಿರೂಪಿಸುತ್ತಾ ಕಣ್ಣೀರು ಹಾಕಿದಳು. ತಾಯಿ, ಇಂದೇಕೆ ಹೀಗೆ ವ್ಯಸನಪಡುತ್ತಿದ್ದಾಳೆ ಎಂದು ಕಮಲ ಆಶ್ಚರ್ಯಗೊಂಡಳು.

"ಏನಾಯಿತೇ ಅಮ್ಮ."

"ನನ್ನದು ಯಾವ ಶಾಶ್ವತವೇ ಅಮ್ಮಯ್ಯ. ನಿನಗೆ ಒಂದು ದಾರಿ ಯಾದದ್ದು ನೋಡಿ ಕಣ್ಣು ಮುಚ್ಚಿಕೊಂಡರೆ ಸಾಕು. ರಾತ್ರಿಯಾದರೆ ನನಗೆ ಎದೆನೋವು. ಭಯವಾಗತ್ತೆ – ಯಾವಾಗ ಈ ಘಟ ಉರುಳುವುದೋ ಎಂದು."

"ನಾಳೆ ಡಾಕ್ಟರಲ್ಲಿ ಹೋಗಿ ಬರೋಣ."

"ಡಾಕ್ಟರೇನು ಮಾಡುತ್ತಾರೆ ? – ಮನಸ್ಸಿಗೆ ನೆಮ್ಮದಿಯಾದರೆ ದೇಹಾರೋಗ್ಯ ತಾನೇ ಸರಿಹೋಗುತ್ತದೆ."

"ನನ್ನ ವಿಷಯ ಒಂದು ಇತ್ಯರ್ಥಕ್ಕೆ ಬಂದಿದೆಯಲ್ಲಾ – ಇನ್ನೇಕೆ ಯೋಚನೆ."

"ಏನು ಇತ್ಯರ್ಥಕ್ಕೆ ಬಂದಿದೆ. ಆಯಪ್ಪನದು ಯಾವ ನೆಚ್ಚಿಗೆ. ಪುಸ್ತಕ ಬರೆದು, ಮಾರಿ ಆತ ಸಂಪಾದಿಸುವುದೆಷ್ಟು ?"

"ಎಷ್ಟೆಂದು ನೀನೇ ನೋಡಿದ್ದೀ. ಸಂಪಾದಿಸಿದಷ್ಟನ್ನೂ ನನ್ನ ಕೈಗೆ ತಂದುಹಾಕುತ್ತಿದ್ದಾರೆ. ನನಗಾಗಿ ಮೈಮುರಿಯ ದುಡಿಯುತ್ತಿದ್ದಾರೆ."

"ಇಲ್ಲವೆಂದು ನಾನು ಹೇಳಲಿಲ್ಲ. ಆತನೂ ಬಂದುಕೊಳ್ಳಲಿ...."

"ಹಾಗಂದರೆ ?"

"ಸಂಸಾರ ಸರಿಯಾಗಿ ನಡಸುವವರು ಯಾರಾದರೂ ಇರಲೇಬೇಕು."

"ನಾನು ಆತನಿಗೆ ಮೋಸಮಾಡುವುದಿಲ್ಲ."

"ಆತನನ್ನು ಬಿಟ್ಟುಬಿಡೆಂದು ನಾನು ಹೇಳುತ್ತಿಲ್ಲ."

"ಇನ್ನೇನು ಹೇಳುತ್ತಿರುವೆ ?"

"ಜವಾಬ್ದಾರಿ ಹೊರುವ ಸರಿಯಾದವರ ಆಶ್ರಯ ನಿನಗಿರಲಿ ಎಂದು ಹೇಳುತ್ತಿದ್ದೇನೆ"

"ನನಗೆ ಯಾರ ಆಶ್ರಯವೂ ಬೇಡ."

ಭಾಗ್ಯಮ್ಮನ ಮುಖ ಕೆಂಪಗಾಯಿತು. ಕಣ್ಣುಗಳು ಕಿಡಿ ಕಾರ ತೊಡಗಿದವು.

"ಮನೆಹಾಳ ರಂಡೇ – ನಿನಗೇ ಬೇಕಾದದ್ದೇನು – ಆ ಹುಡುಗ ಮುಂಡೇದರ ಹತ್ತಿರ ಚಕ್ಕಂದ."

"ನೀನು ಅವರನ್ನು ಹೀನಾಮಾನಾ ಬೈಯಬೇಡಮ್ಮ"

ಎಂದು ಕಮಲ ಸ್ವಲ್ಪ ಬಿರುಸಾಗಿಯೇ ನುಡಿದಳು. ಭಾಗ್ಯಮ್ಮನ ಕೋಪ ಮತ್ತಷ್ಟು ಕೆರಳಿತು. ಎದ್ದವಳೇ ಮಗಳ ಕಪಾಳಕ್ಕೆ ಎರಡು ಬಿಗಿದು, ಅವಳ ಮುಂದಲೆ ಹಿಡಿದು ಜಗ್ಗಿದಳು.

ಕಮಲ ದೀರ್ಘವಾಗಿ ರೋಧಿಸುತ್ತ ನಿಂತಳು.

"ದೊಡ್ಡವಳು. ನನ್ನ ಮಾತು ಕೇಳದಿದ್ದ ಮೇಲೆ, ನಿನಗೂ ನನಗೂ ಸಂಬಂಧ ತೊಡೆದುಹೋಯಿತೆಂದು ತಿಳಿದುಕೋ"

ಎಂದು ಒದರಿ ಒಳಗೆ ಹೋಗಿ ಬಟ್ಟೆಯ ಟ್ರಂಕುಗಳನ್ನು ಗೂರಾಡಿ ತನ್ನ ಸೀರೆ, ಕುಪ್ಪಸಗಳನ್ನಾರಿಸಿಕೊಂಡು, ಒಂದು ಗಂಟುಕಟ್ಟಿ

"ನಾನು ಹಾಳಾಗಿಹೋಗುತ್ತೇನೆ – ನೀನು ಸುಖವಾಗಿರು"

ಎಂದು ಬಾಗಿಲು ಕಡೆ ನಡೆದಳು. ಕಮಲ ಬಾಗಿಲಿಗೆ ಅಡ್ಡ ನಿಂತಳು. ಭಾಗ್ಯಮ್ಮ ಅವಳನ್ನು ಒಂದೆಡೆಗೆ ನೂಕಿ ಬಾಗಿಲು ಚಿಲುಕ ತೆಗೆದಳು. ಕಮಲ ಧಾವಿಸಿ ಅವಳ ಬಳಿಗೆ ಹೋಗಿ ಭದ್ರವಾಗಿ ಭಾಗ್ಯಮ್ಮನ ಎರಡು ಕಾಲುಗಳನ್ನೂ ಹಿಡಿದು

"ಹೋಗಬೇಡಮ್ಮ....ನೀನು ಹೇಳಿದ್ದು ಮಾಡುತ್ತೇನೆ"

ಎಂದಳು.

ಭಾಗ್ಯಮ್ಮನ ಕೋಪ ಒಂದೇ ಕ್ಷಣದಲ್ಲಿ ಇಳಿಮುಖವಾಯಿತು. ಗಂಟನ್ನತ್ತ ಇಟ್ಟು ಮಗಳನ್ನು ಸಂತೈಸುತ್ತಾ

"ಏಳು – ಮುಖತೊಳೆದು ಹಣೆಗಿಟ್ಟುಕೊಂಡು, ಒಂದು ಲಕ್ಷಣವಾದ ಸೀರೆ ಉಟ್ಟುಕೋ. ನಾಗರಾಜ ಅವರನ್ನು ಕರೆದುಕೊಂಡು ಬರುವುದಕ್ಕೆ ಹೋಗಿದ್ದಾನೆ."

ಕಮಲ ಮರುಮಾತನಾಡದೆ ರೂಮಿಗೆ ಹೋಗಿ ಅಳುತ್ತ ಕುಳಿತಳು. ಭಾಗ್ಯಮ್ಮ ಬಂದು ಎಚ್ಚರಿಸುತ್ತಲೇ ಎದ್ದು ತಲೆಬಾಚಿಕೊಳ್ಳುವುದಕ್ಕಾರಂಭಿಸಿದಳು. ಭಾಗ್ಯಮ್ಮನೇ ಹೋಗಿ ಒಂದು ಕುಚ್ಚುಹೂವು ತಂದು ಮಗಳ ಕೈಗಿತ್ತಳು.

ಸ್ವಲ್ಪಹೊತ್ತು ಕಳೆದಿರಬಹುದು. ನಾಗರಾಜ ಗವಿಯಪ್ಪನನ್ನು ಕರೆದುಕೊಂಡು ಒಳಕ್ಕೆ ಹೋದ.

ಸ್ವಲ್ಪಹೊತ್ತಿಗೆ ಮುಂಚೆ ನಡೆದ ಕದನದ ಕುರುಹು ತಿಳಿಯದಂತೆ ಭಾಗ್ಯಮ್ಮ ತೊಟ್ಟಿಯ ಕಸಗುಡಿಸಿ, ಕುರ್ಚಿ ಮೇಜುಗಳನ್ನು ಸರಿಯಾಗಿ ಜೋಡಿಸಿ, ದೀಪ ಹಚ್ಚಿದ್ದಳು.

ನಾಗರಾಜ ಗವಿಯಪ್ಪನನ್ನು ಒಳಗೆ ಕರೆದುಕೊಂಡು ಬಂದು ತೊಟ್ಟಿಯಲ್ಲಿದ್ದ ಕುರ್ಚಿಯ ಮೇಲೆ ಕೂಡಿಸಿ, ತಾನು ಕೆಳಗೆ ಚಾಪೆಯ ಮೇಲೆ ಕುಳಿತುಕೊಂಡು

"ಭಾಗ್ಯಮ್ಮ....ಇವರೇ ಗವಿಯಪ್ಪನವರು. ಅರುಣ ಥಿಯೇಟರ್ ಯಜಮಾನರು."

ಗವಿಯಪ್ಪ ಭಾಗ್ಯಮ್ಮನನ್ನೊಮ್ಮೆ ನೋಡಿ, ಕಿಸೆಗೆ ಕೈಹಾಕಿ ಸಿಗರೇಟ್ ಪ್ಯಾಕೆಟ್ ತೆಗೆದು ಒಂದು ಸಿಗರೇಟ್ ಎಳೆದುಕೊಂಡು ಕಡ್ಡಿಪೊಟ್ಟಣಕ್ಕೆ ಹುಡುಕಿದ. ನಾಗರಾಜ ಕೂಡಲೆ ಎದ್ದು ಗವಿಯಪ್ಪನ ಬಾಯಲ್ಲಿದ್ದ ಸಿಗರೇಟಿಗೆ ಕಡ್ಡಿಕೊರೆದು ಬೆಂಕಿಯಿಟ್ಟ.

ಗವಿಯಪ್ಪ ಮಾತನಾಡಲಿಲ್ಲ; ಭಾಗ್ಯಮ್ಮನೂ ಬಾಯಿ ಬಿಡಲಿಲ್ಲ. ಸ್ವಲ್ಪ ಹೊತ್ತು ಕಳೆಯಲು ನಾಗರಾಜ

"ಸುಮ್ಮನೆ ಹೀಗೆ ಕುಳಿತುಬಿಟ್ಟರೆ...."

ಎಂದ.

"ಏನು ಅವರೇ ಹೇಳಲಪ್ಪಾ"

ಎಂದಳು ಭಾಗ್ಯಮ್ಮ.

"ನೀನೇ ಎಲ್ಲಾ ಮಾತಾಡು ನಾಗರಾಜ."

ಎಂದು ಗವಿಯಪ್ಪ ಸರ್ವಾಧಿಕಾರ ನಾಗರಾಜನಿಗೆ ವಹಿಸಿದ.

"ಮುಂದೆ ಹೇಗಿರಬೇಕೆಂದು ಅವರ ಇಷ್ಟ?"

ಎಂದು ಭಾಗ್ಯಮ್ಮ ಕೇಳಿದಳು.

"ಹೇಗೆ ಎಂದರೆ ಖಾಯಂ ಆಗಿಯೇ?"

"ನಮ್ಮ ಮನೆ ಸಂದರ್ಭ ಹೇಳಿದ್ದೀಯಲ್ಲಾ."

"ಹೇಳಿದ್ದೇನೆ. ತಮ್ಮದೇನೂ ಅಭ್ಯಂತರವಿಲ್ಲವೆಂದು ಸಾಹುಕಾರರು ಹೇಳಿದರು."

"ಅವರು ಇನ್ನು ಒಂದೂವರೆ ತಿಂಗಳಿಗೆ ಊರಿಗೆ ಬರುತ್ತಾರೆ."

"ಬರಲಿ – ಆಗ ಮಿಕ್ಕದ್ದು ಯೋಚನೆಮಾಡಿದರಾಯಿತು. ಅಮ್ಮಯ್ಯ ನನ್ನು ಕೇಳಿದೆಯಾ?"

"ಕೇಳಿದೆ. ಮಿಕ್ಕ ವಿಷಯ?"

"ಯಾವ ವಿಷಯ? ಹಣಕಾಸಿನ ವಿಷಯವೇ? ಸಾಹುಕಾರರ ಸಂಗತಿ ನಿನಗೆ ನಾನು ಹೇಳಿಯೇ ಇದ್ದೇನೆ ಭಾಗ್ಯಮ್ಮ. ಈ ವಿಷಯ ಅವರ ಮರ್ಜಿಗೆ ಬಿಡುವುದೊಳ್ಳೆಯದು. ಅವರ ವಿಶ್ವಾಸ ಉಳಿಸಿಕೊಂಡರೆ ಬೇಕಾದದ್ದು ಮಾಡುತ್ತಾರೆ."

"ಅದೇನೋ ಸರಿಯೇ. ಆದರೆ ನನಗೊಂದು ಧೈರ್ಯವಾಗಬೇಕೋ ಇಲ್ಲವೋ?"

"ತಿಂಗಳಿಗೆ ನಿಮಗೆ ಎಷ್ಟು ಬೇಕಮ್ಮ?"

ಎಂದು ಗವಿಯಪ್ಪ ನೇರವಾಗಿ ಭಾಗ್ಯಮ್ಮನನ್ನು ಪ್ರಶ್ನಿಸಿದ.

"ನೋಡಿಯಪ್ಪ. ತಿಂಗಳಿಗೆ ನನ್ನ ಮನೆಯ ಖರ್ಚೇ ಮುನ್ನೂರು ರೂಪಾಯಿ ಇದೆ. ಬಟ್ಟೆ ಬರೆ, ವಸ್ತ್ರ ಒಡವೆ ವಿಷಯ ನಿಮಗೆ ಸೇರಿದ್ದು. ನಿಮ್ಮ ಸಂತೋಷ ಹೇಗಿದೆಯೋ ಹಾಗೆ ಮಾಡಬಹುದು."

"ಇಷ್ಟೇ ತಾನೆ – ಆಗಬಹುದು"

ಎಂದು ಗವಿಯಪ್ಪ ಕಿಸೆಯಿಂದ ಪರ್ಸ್ ತೆಗೆದು ಭಾಗ್ಯಮ್ಮನ ಕೈಗೆ ನೂರುರೂಪಾಯಿನ ಮೂರು ನೋಟುಗಳನ್ನಿಟ್ಟ. ಭಾಗ್ಯಮ್ಮ ಹಣ ನೋಡಿ ಅವಾಕ್ಕಾದಳು.

"ಇನ್ನೇನು" ಎಂದು ಗವಿಯಪ್ಪ ಕೇಳಿದ.

"ಏನೂ ಇಲ್ಲಪ್ಪ. ಅಮ್ಮಯ್ಯ ಒಳಗೆ ರೂಮಿನಲ್ಲಿದ್ದಾಳೆ. ಅಲ್ಲಿಗೇ ಹೋಗಿ. ಕಾಫಿ ಮಾಡಿಕೊಡಲೇ?"

"ಏನೂ ಬೇಡ – ನಾನು ತರಿಸುತ್ತೇನೆ"

ಎಂದು ಭಾಗ್ಯಮ್ಮನಿಗೆ ಹೇಳಿ, ನಾಗರಾಜನ ಕೈಗೆ ಒಂದೆರಡು ನೋಟು ಕೊಟ್ಟು ಏನೋ ಹೇಳಿ ಕಳಿಸಿದ.

ನಾಗರಾಜ ಹೋದ ಮೇಲೂ ಗವಿಯಪ್ಪ ಕುಳಿತ ಸ್ಥಳ ಬಿಟ್ಟು ಏಳಲಿಲ್ಲ. ಭಾಗ್ಯಮ್ಮ, ಪರಮ ವಿನಯದಿಂದ

"ಒಳಗೆ ಹೋಗಿಯಪ್ಪ" ಎಂದಳು.

"ಹೋಗೋಣ – ಇನ್ನು ಮೇಲೆ ಇದು ನನ್ನ ಮನೇ ಕಾನೆ – ಅವಸರ ವೇಕೆ ?"

"ನೀವು ಹಾಗೆ ತಿಳಿದುಕೊಂಡು ನಮ್ಮನ್ನು ಕಾಪಾಡಿಕೊಂಡು ಬರ ಬೇಕು."

"ನೀವು ನೀಯತ್ತಾಗಿರಬೇಕು."

"ನಾವು ನೀಯತ್ತು ಬಿಡುವವರಲ್ಲಪ್ಪ. ನಮ್ಮ ಹುಡುಗಿ ತಿಳಿಯದೆ ಇದೊಂದು ಅವಿವೇಕ ಮಾಡಿಕೊಂಡಿದೆ."

"ಇರಲಿ – ಅದರ ವಿಷಯ ಮುಂದೆ ಯೋಚಿಸೋಣ. – ಮನೆಗೆ ಇನ್ನೂ ಯಾರಾದರೂ ಬಂದು ಹೋಗುವುದುಂಟೋ ?"

"ಯಾರೂ ಇಲ್ಲಪ್ಪ. ನರಪ್ರಾಣಿ ಈ ಕಡೆ ಸುಳಿಯುವುದಿಲ್ಲ. ಸುತ್ತ ಮುತ್ತಲಿನವರನ್ನು ನೀವೇ ಕೇಳಿ – ನಾವು ಎಷ್ಟು ಮರ್ಯಾದೆಯಾಗಿದ್ದೇವೆನ್ನು ವುದು ಗೊತ್ತಾಗುತ್ತದೆ."

"ಮರೆ ಮೋಸ ನಾನು ಸಹಿಸುವುದಿಲ್ಲಮ್ಮ. ಅಂಥ ವ್ಯವಹಾರ ಏನಾದರೂ ಇದ್ದರೆ ಈಗಲೇ ಹೇಳಿಬಿಡು. ನಾಳೆ ಜಗಳಬೇಡ."

"ದೇವರಾಣೆಗೂ ಏನೂ ಇಲ್ಲಪ್ಪ. ನೀವೇ ಪರೀಕ್ಷೆಮಾಡಿ ನೋಡಿ."

ನಾಗರಾಜ ಥಿಯೇಟರಿನ ಒಬ್ಬ ಆಳಿನ ಕೈಯಲ್ಲಿ ಒಂದು ಬುಟ್ಟಿ ಹೊರಿಸಿ ಕೊಂಡು ಬಂದು, ಬುಟ್ಟಿಯನ್ನು ಕೈಗೆ ತೆಗೆದುಕೊಂಡು ಆಳನ್ನು ಕಳುಹಿಸಿ ಬಿಟ್ಟ.

ಬುಟ್ಟಿ ತೆಗೆದು ಅದರಲ್ಲಿದ್ದ ಹಣ್ಣು, ತಿಂಡಿಯ ಪೊಟ್ಟಣಗಳು, ಗ್ಲಾಸು ಗಳು, ಬಾಟಲ್ ತೆಗೆದು ಮೇಜಿನ ಮೇಲಿಟ್ಟ. ಭಾಗ್ಯಮ್ಮ ತಿಂಡಿಯ ಪ್ಲೇಟು ಗಳನ್ನು ತಂದು, ತಿಂಡಿ ಎಲ್ಲರಿಗೂ ಅಣಿಮಾಡಿದಳು. ನಾಗರಾಜ ಬಾಟಲ್ ತೆಗೆದು ನಾಲ್ಕು ಗ್ಲಾಸುಗಳಿಗೂ ಬಗ್ಗಿಸಿ, ಸೋಡಾ ಶೀಷೆ ತೆಗೆದು ಸ್ವಲ್ಪ ಸ್ವಲ್ಪ ಸೋಡಾ ಸೇರಿಸಿ,

"ಅಮ್ಮಯ್ಯನ್ನೂ ಇಲ್ಲೇ ಕರಿ" ಎಂದು ಹೇಳಿದ.

ಭಾಗ್ಯಮ್ಮ ಅವನಿಗೆ ಉತ್ತರಕೊಡದೆ ಒಂದು ಗ್ಲಾಸು ತೆಗೆದುಕೊಂಡು ಅಮ್ಮಯ್ಯನ ರೂಮಿಗೆ ಹೋಗಿ, ಅವಳ ಮೇಜಿನ ಮೇಲಿಟ್ಟು

" ಇದನ್ನು ತೆಗೆದುಕೊಂಡು – ಬೇಗ ಹೊರಗೆ ಬಾ. ಅಯ್ಯಪ್ಪ ಬಹಳ ಹೊತ್ತಿನಿಂದ ಕಾಯುತ್ತಿದ್ದಾರೆ"

ಎಂದು ಹೇಳಿ ಹೊರಗೆ ಬಂದಳು.

ನಾಗರಾಜ, ಗವಿಯಪ್ಪ, ಭಾಗ್ಯಮ್ಮ ಮೊದಲು ಗ್ಲಾಸು ಖಾಲಿಮಾಡಿ ತಿಂಡಿ ತಟ್ಟೆಗೆ ಕೈಹಾಕಿದರು.

ಕಮಲನ ಕಣ್ಣೆದುರಿಗೆ ಗ್ಲಾಸ್ ಕುಳಿತಿತ್ತು. ಅದನ್ನೇ ಎವೆಯಿಕ್ಕದೆ ದಿಟ್ಟಿಸಿ ನೋಡಿದಳು. ಗ್ಲಾಸಿನ ಒಳಗೆ ಸುವರ್ಣ ದ್ರಾವಕ. ಅದರ ಬಣ್ಣ ಅವಳ ವೈರಿಯೆನ್ನಿಸಿತು.

ಗ್ಲಾಸಿಗೊಮ್ಮೆ ಕೈ ಹಾಕಿದಳು. ಅದರಲ್ಲಿ ಶ್ರೀನಾಥನ ಮುಖ ಕಂಡು ಬಂದಿತು.

' ಅದೇ ಮುಖ – ಆರಾತ್ರಿ ಕಂಡ ಮುಖ — ದುಃಖದಿಂದ ತಪ್ತವಾಗಿದ್ದ ಮುಖ – ಆ ರಾತ್ರಿ ತನಗೂ ಶ್ರೀನಾಥನಿಗೂ ನಡೆದ ಸಂಭಾಷಣೆ, ಅದೇ ನಡೆಯುತ್ತಿದ್ದಂತೆ ಕಂಡುಬಂತು –

' ಬ್ರ್ಯಾಂದಿ ವಾಸನೆ ಇದ್ದ ಹಾಗಿದೆಯಲ್ಲಾ.'

' ಹೌದು. ನನಗೂ ಹಾಗೇ ಅನ್ನಿಸಿತು. ಹಾಳು ಔಷಧದಲ್ಲಿ ಡಾಕ್ಟರು ಬ್ರ್ಯಾಂದಿ ಬೆರಸಿದ್ದನೋ ಏನೋ ?'

' ಬ್ರ್ಯಾಂದಿ ಬೆರೆತ ಔಷಧ ಕುಡಿದಿರುವೆಯೋ, ಬರಿ ಬ್ರ್ಯಾಂದಿಯನ್ನೇ ಕುಡಿದಿರುವೆಯೋ ನಿಜ ಹೇಳಬಾರದೇ ?'

' ನನ್ನ ಮಾತಿನಲ್ಲಿ ಅನುಮಾನವೇ ? ನಾನು ಬ್ರ್ಯಾಂದಿ ಮುಟ್ಟುತ್ತೀನೆಯೇ ?'

' ಪ್ರಮಾಣವಾಗಿ....?'

' ಪ್ರಮಾಣವಾಗಿ....ಇದೇಕೆ ಅನುಮಾನಪಡುವಿರಿ ?'

' ಇಲ್ಲ....ಚಿನ್ನಾ....ತಪ್ಪಾಯಿತು....ಕ್ಷಮಿಸು.'

ಕಮಲ ಮುಖ ಮುಚ್ಚಿದಳು. ಶ್ರೀನಾಥ ಎದುರಿಗೆ ನಿಂತು ಅವಳನ್ನು ಪರೀಕ್ಷಿಸುತ್ತಿರುವಂತೆ ಭಾಸವಾಯಿತು. ಕಣ್ಣುಮುಚ್ಚಿಕೊಂಡು ಗ್ಲಾಸನ್ನು

ಒಗೆದು ಬಿಡಬೇಕೆಂದು ನಿರ್ಧರಿಸಿದಳು. ಅದನ್ನೊಮ್ಮೆ ನೋಡುವ ಆಸೆಯಾಯಿತು – ಕತ್ತೆತ್ತಿ ನೋಡಿದಳು – ಮನಸ್ಸು ಡವಡವಗುಟ್ಟಲಾರಂಭಿಸಿತು. ಗ್ಲಾಸನ್ನು ಕೈಗೆತ್ತಿಕೊಂಡಳು – ಅದನ್ನೇ ದಿಟ್ಟಿಸಿ ನೋಡಿದಳು – ಬಾಯಿ ಒಣಗುತ್ತಿತ್ತು – ಕಣ್ಣು ಮುಚ್ಚಿಕೊಂಡು ಗ್ಲಾಸು ಖಾಲಿ ಮಾಡಿ

"ಅಮ್ಮಾ" ಎಂದು ಕೂಗಿದಳು.

ಅವಳು ಕೂಗಿದ ಧ್ವನಿಗೆ ಗಾಬರಿಯಾಗಿ ಭಾಗ್ಯಮ್ಮ ಒಳಕ್ಕೆ ಎದ್ದು ಹೋದಳು.

"ಇನ್ನೊಂದು ಗ್ಲಾಸು – ಬೇಗ"

ಎಂದಳು. ಭಾಗ್ಯಮ್ಮ ತನ್ನ ಮುಂದಿಟ್ಟುಕೊಂಡಿದ್ದ ಗ್ಲಾಸನ್ನು ತೆಗೆದುಕೊಂಡು ಹೋಗಿ ಕಮಲನ ಕೈಗಿತ್ತು ಹೊರಗೆ ಬಂದಳು. ತನಗೆ ದೊರೆತ ವಿಜಯಕಂಡು ಭಾಗ್ಯಮ್ಮ ದಿಗ್ಭ್ರಾಂತಳಾಗಿದ್ದಳು.

ಈ ವೇಳೆಗೆ ನಾಗರಾಜ, ಗವಿಯಪ್ಪ, ಭಾಗ್ಯಮ್ಮ ಮೂರು ಮೂರು ಗ್ಲಾಸು ಮುಗಿಸಿದ್ದರು. ಗವಿಯಪ್ಪ

"ಅವಳು ಹೊರಗೆ ಬರುವುದಿಲ್ಲವೇ" ಎಂದು ಕೇಳಿದ.

ಭಾಗ್ಯಮ್ಮ

"ಬೇಡಿ – ನೀವೇ ಒಳಗೆ ಹೋಗಿ"

ಎಂದು ಹೇಳಿ ತಿಂಡಿಯ ಒಂದು ತಟ್ಟೆ, ಮದ್ಯದ ಶೀಷೆ, ಸೋಡಾ ಬಾಟಲು ತೆಗೆದುಕೊಂಡು ಹೋಗಿ ಕಮಲನ ಕೋಣೆಯಲ್ಲಿಟ್ಟು ಬಂದು ಗವಿಯಪ್ಪನನ್ನು ಒಳಕ್ಕೆ ಕಳಿಸಿಕೊಟ್ಟಳು.

ಉಳಿದಿದ್ದ ತಿಂಡಿ, ಮದ್ಯ, ನಾಗರಾಜ, ಭಾಗ್ಯಮ್ಮ ಮುಗಿಸಿದರು. ನಾಗರಾಜ ಅಲ್ಲಿಯೇ ಚಾಪೆಯ ಮೇಲೆ ಪವಡಿಸಿದ. ಭಾಗ್ಯಮ್ಮ ಅವನಿಗೊಂದು ದಿಂಬು ಹೊದಿಕೆ ತಂದಿತ್ತು ತಾನು ಮಲಗಲು ಹೋದಳು.

ಬೆಳಿಗ್ಗೆ ಆರು ಗಂಟೆಗೆ ಗವಿಯಪ್ಪನಿಗೆ ಎಚ್ಚರವಾಯಿತು. ಪಕ್ಕಕ್ಕೆ ತಿರುಗಿ ನೋಡಿದ. ಕಮಲ ಗಾಢನಿದ್ರೆಯಲ್ಲಿದ್ದಳು. ಎದ್ದು ತನ್ನ ಬಟ್ಟೆ ಧರಿಸಿ ಹೊರಗೆ ಬಂದು ಭಾಗ್ಯಮ್ಮನನ್ನು ಕರೆದ.

"ಇದೇನಪ್ಪಾ ಇಷ್ಟು ಬೇಗ. ಕಾಫಿಯೂ ತೆಗೆದುಕೊಂಡಿಲ್ಲ."

" ಇರಲಿ – ನಾನು ಮಧ್ಯಾನ್ಹ ಬರುತ್ತೇನೆ. ನಾಗರಾಜ ಎದ್ದ ಮೇಲೆ ಥಿಯೇಟರ್ ಹತ್ತಿರ ಕಳಿಸು."

" ಎಲ್ಲ ಸುಖವಾಗಿತ್ತು ತಾನೇ...."

" ಇತ್ತು "

ಎಂದು ಹೇಳಿ ಹೊರಟುಬಿಟ್ಟ.

ನಾಗರಾಜ ಎದ್ದಮೇಲೆ ಅವನಿಗೆ ಕಾಫಿಕೊಟ್ಟು ಭಾಗ್ಯಮ್ಮ ಗವಿಯಪ್ಪನ ಸಂದೇಶ ಮುಟ್ಟಿಸಿದಳು. ಅವನು ಹೋದಮೇಲೆ ಮಗಳ ರೂಮಿನ ಒಳಗೆ ಹೋಗಿ ನೋಡಿದಳು. ಕಮಲ ಗಾಢ ನಿದ್ರೆಯಿಂದ ಎಚ್ಚರಗೊಂಡಿರಲಿಲ್ಲ.

ಹನ್ನೊಂದು ಗಂಟೆ ಹೊಡೆಯಿತು. ಅಂಚೆಯಾಳು ಭಾಗ್ಯಮ್ಮನ ಕೈಗೆ ಒಂದು ಲಕೋಟೆ ತಂದಿತ್ತ. ಅದನ್ನು ಹರಿದು ಬಿಸುಡಬೇಕೆಂದು ಭಾಗ್ಯಮ್ಮನ ಮನಸ್ಸಿಗೆ ಹೊಳೆಯಿತು. ಲಕೋಟೆಯನ್ನು ಕೈಯಲ್ಲಿ ಹಿಡಿದು

' ಎಲ್ಲಾ ಸರಿಹೋಗುತ್ತಿದೆ. ಕಮಲ ಇವತ್ತು ಕಾಗದ ನಿರೀಕ್ಷಿಸುತ್ತಿರುತ್ತಾಳೆ. ಕಾಗದ ಬರಲಿಲ್ಲವೆಂದು ಹೇಳಿದರೆ ಅವಳು ನಂಬುವುದಿಲ್ಲ.'

ಎಂದು ಯೋಚಿಸಿ ಕಮಲನ ರೂಮಿಗೆ ಹೋಗಿ ಅವಳನ್ನೆಬ್ಬಿಸಿ ಕಾಗದ ವಿತ್ತು ಬಂದಳು.

ಕಮಲ ಕಾಗದ ಕೈಯಲ್ಲಿ ಹಿಡಿದಳು. ಶ್ರೀನಾಥನ ಅಕ್ಷರ. ಕೂಡಲೆ ಅದನ್ನು ಒಡೆದು ನೋಡಲು ಧೈರ್ಯವಾಗಲಿಲ್ಲ. ಲಕೋಟೆಯನ್ನು ನೂರು ನಾಲ್ಕು ಬಾರಿ ತಿರುಗಿಸಿ ತಿರುಗಿಸಿ ನೋಡಿದಳು. ತೂಕವಾಗಿಯೂ ಇತ್ತು. ಲಕೋಟೆ ಒಡೆಯಲೆತ್ನಿಸಿದಳು. ಕೈ ನಡುಗಲಾರಂಭಿಸಿತು.

ಲಕೋಟೆ ಹಿಡಿದು ಸುತ್ತ ಕಣ್ಣು ಹೊರಳಿಸಿದಳು. ಹಾಸಿಗೆಯ ಮೇಲೆ ಒಣಗಿದ ಹೂವಿನ ಚೂರುಚೂರುಗಳು – ಮೇಜಿನ ಮೇಲೆ ಬಾಟಲು, ಗ್ಲಾಸುಗಳು, ನೆಲದಮೇಲೆ ತಿಂಡಿಯ ಚೂರುಗಳು. ಮುಖ ಮುಚ್ಚಿಕೊಂಡು ಅತ್ತಳು. ಏನೋ ಯೋಚಿಸುತ್ತ ಲಕೋಟೆ ಒಡೆದು ಕಾಗದ ಓದಲಾರಂಭಿಸಿದಳು

' ಹೃದಯೇಶ್ವರಿ '

ಮದರಾಸು ತಲುಪಿ ನನ್ನ ರೂಮಿಗೆ ಬಂದಕೂಡಲೆ ನಾನು ಮಾಡುತ್ತಿರುವ ಮೊದಲನೆಯ ಕೆಲಸ ನಿನಗೆ ಕಾಗದ ಬರೆಯುತ್ತಿರುವುದು. ನಿನ್ನೆ ರಾತ್ರಿ

ರೈಲಿನಲ್ಲಿ ಒಬ್ಬನೇ ಪ್ರಯಾಣ ಮಾಡಿದಾಗ ನನ್ನ ಮನಸ್ಸಿಗಾದ ದುಃಖ, ತಾಪ ಎಷ್ಟೆಂದು ವರ್ಣಿಸಲಿ.

ನನ್ನ ರೂಮಿನಲ್ಲಿ ಕುಳಿತು, ಕಿಟಕಿಯಾಚೆ ನೋಡಿದರೆ ಸಾವಿರಾರು ಜನ ಓಡಿಯಾಡುತ್ತಿದ್ದಾರೆ – ಬಸ್‌ಗಳು, ಟ್ರಾಂಗಳು, ರಿಕ್‌ಷಾಗಳು, ಜಟಕಾಗಳು, ಮೋಟಾರುಗಳು – ಅವುಗಳ ತುಂಬೆಲ್ಲ ಜನ. ಆದರೆ ನಾನು ಜನರಿಲ್ಲದ ಅರಣ್ಯದಲ್ಲಿರುವೆನೋ ಅನ್ನಿಸುತ್ತಿದೆ. ಇಷ್ಟು ಜನ ಎದುರಿಗಿದ್ದರೂ ಯಾರೂ ನನ್ನವರಲ್ಲ. ನನ್ನ ಜೀವಕ್ಕೆ ಹತ್ತಿದ ಜೀವ – ಅಲ್ಲಿ ಬಹಳ ದೂರದಲ್ಲಿದೆ – ನನ್ನ ಹಾಗೆ ದುಃಖಪಡುತ್ತಿದೆ – ನನಗಾಗಿ ಹಂಬಲಿಸುತ್ತಿದೆ.

ರಾಣೀ....ಈ ಬಾರಿ ನಾನು ಮದರಾಸಿನಿಂದ ಹಿಂದಿರುಗಿದ ಮೇಲೆ ಬೇರೆ ಮನೆ ಮಾಡೋಣ. ನಮ್ಮ ಸಂಸಾರ ಹೂಡೋಣ. ಸುಖದಲ್ಲಿ, ದುಃಖದಲ್ಲಿ ನೀನು ನನ್ನವಳಾಗಿರುವವರೆಗೆ ನಾನು ಯಾವದಕ್ಕೂ ಹೆದರುವುದಿಲ್ಲ – ಯಾರಿಗೂ ಅಂಜುವುದಿಲ್ಲ.

ದೇವೀ – ನಾನೇನೋ ಬರೆಹಗಾರ ನಿಜ. ನನ್ನ ಗ್ರಂಥಗಳನ್ನು ಓದಿದವರು 'ಇತರರ ಮನಸ್ಸನ್ನು ಇವನು ಎಷ್ಟು ಚೆನ್ನಾಗಿ ಅರ್ಥಮಾಡಿಕೊಳ್ಳುತ್ತಾನೆ. ಇತರರ ಮನಸ್ಸಿನ ವ್ಯಾಪಾರವನ್ನು ಎಷ್ಟು ಚೆನ್ನಾಗಿ ವರ್ಣಿಸುತ್ತಾನೆ' ಎಂದು ಹೊಗಳುತ್ತಾರೆ. ಆದರೆ ನಾನೆಷ್ಟು ದುರ್ಬಲನೆಂದು ಅವರು ಕಾಣರು. ನನ್ನ ಲೇಖನಿ ಎಷ್ಟು ನಿಷ್ಪ್ರಯೋಜಕವೆಂಬುದನ್ನವರು ಅರಿಯರು. ನಾನು ಏನು ಬರೆದರೇನು? ನನ್ನ ಮನಸ್ಸಿನ ಬಗೆಯನ್ನೇ ಬಣ್ಣಿಸಲಾರೆ. ಈ ಹೃದಯ ಸಿಂಹಾಸನದಲ್ಲಿ ನೀನು ಹೇಗೆ ಮಂಡಿಸಿದ್ದೀಯೆಂದು ವರ್ಣಿಸಲಾರದಾಗಿರುವೆ. ಮನಸ್ಸು ಅನುಭವಿಸುವ ವೇದನೆಯನ್ನು ಬರೆಯಬಲ್ಲ ಶಕ್ತಿಯನ್ನು ಭಗವಂತ ನನಗೆ ಕೊಡಬಾರದೇತಕ್ಕೆ?

ನಮ್ಮ ಸಂಬಂಧ ವಿಚಿತ್ರವಾಗಿ ಆರಂಭವಾಯಿತು. ಅದರಲ್ಲಿ ದೈವದ ಕೈಯಿರದಿದ್ದರೆ ನಾಲ್ಕುದಿನ ನಡೆದು ಅದು ನಿಂತುಹೋಗಬೇಕಾಗಿತ್ತು. ನನ್ನ ಚಿತ್ತವೃತ್ತಿ ಹಲವು ಹನ್ನೊಂದು ಕಡೆಗೆ ಹರಿದು, ದುಂಬಿಯಂತೆ ಹಲವು ಹೂಗಳನ್ನು ಬಯಸಬೇಕಾಗಿತ್ತು. ಆದರೆ ಹಾಗಾಗಲಿಲ್ಲ. ಮನಸ್ಸು ಸ್ಥಿರವಾಗಿ ಒಂದೆಡೆ ನಿಂತುಬಿಟ್ಟಿತು. ನನ್ನ ಲೋಕ, ಆಸೆ, ಆನಂದ ಸರ್ವವೂ ನಿನ್ನ ರೂಪಹೊತ್ತು ನಿಂತುಬಿಟ್ಟಿತು.

ಮಾತನಾಡುವಾಗೊಮ್ಮೊಮ್ಮೆ ನೀನು 'ನಾನು ಪಾಪಿ! ಪಾಪಿ!' ಎಂದು ಹೇಳುವೆ. ನೀನು ಪಾಪಿಯಲ್ಲ. ಪುಣ್ಯವಂತೆ ಎಂದು ನಾನು ನೂರು ಸಲ ಹೇಳಿದ್ದೇನೆ. ನೂರೊಂದನೆಯ ಸಲವೂ ಹೇಳುತ್ತಿದ್ದೇನೆ. ನನ್ನ ಜೀವನಕ್ಕೆ ಅಮೃತವನ್ನೆರೆದು, ಅದರಲ್ಲಿ ಅಮಿತವಾದ ಆನಂದ ತುಂಬಿದ ನೀನು ಪಾಪಿ ಹೇಗಾದೀಯೊ? ತಿಳಿಯದೆ ತಪ್ಪು ಹಾದಿ ನೀನು ತುಳಿದಿರುವೆ. ಈಗ ತಿಳುವಳಿಕೆ ಬಂದ ಮೇಲೆ ನೀನು ಅದೇ ಹಾದಿಯಲ್ಲಿ ಹೋಗುವೆಯೆಂದು ನಾನು ಹೇಳಲಾರೆ. ಲೋಕ ಬೇಕಾದದ್ದು ನುಡಿಯಬಹುದು. ನೆಲದಮೇಲೆ ಬಿದ್ದವರನ್ನು ಮತ್ತಷ್ಟು ಒಳಕ್ಕೆ ತಳ್ಳುವುದೇ ಲೋಕದ ವ್ಯಾಪಾರ... ಲೋಕದ ದೌರ್ಜನ್ಯ. ಇದನ್ನೆದುರಿಸುವುದಕ್ಕೆ ಒಂದೇ ದಾರಿ ಇರುವುದು. ಲೋಕದ ಭಾವನೆ ತಪ್ಪು ಎಂದು ನಾವು ತೋರಿಸಿಕೊಡಬೇಕು. ಪಾಪದ ಕೊಳಚೆಯಲ್ಲಿ ಕಾಲಿಟ್ಟ ಜೀವವೂ, ಆ ಮಾಲಿನ್ಯ ನೀಗಿಕೊಂಡು ಪರಿಶುದ್ಧ ಬಾಳುವೆಯನ್ನು ಮಾಡಬಲ್ಲುದು ಎಂದು ನಮ್ಮ ನಡತೆಯಿಂದ ಸಿದ್ಧಾಂತಪಡಿಸಬೇಕು.

ಅಂದು, ಬೆಂಗಳೂರಿಗೆ ನಾನು ಬಂದ ದಿವಸ ನಿನ್ನ ಬಾಯಲ್ಲಿ ಮದ್ಯದ ವಾಸನೆ ಬಂದುದಕ್ಕೆ ನೀನು ಹೇಳಿದ ಕಾರಣವನ್ನು ನಾನು ಒಪ್ಪಿಕೊಂಡೆ. 'ನಾನು ನಂಬಿದ್ದು ಸುಳ್ಳು – ನೀನು ಹೇಳಿದ್ದು ದಿಟ' ಎಂದು ಮನಸ್ಸಿಗೆ ತಂದುಕೊಂಡೆ. ಮಾರನೆಯ ದಿನವೇ ನನ್ನ ನಂಬಿಕೆಯ ಬುಡವನ್ನು ನಾಗರಾಜ ಅಲುಗಾಡಿಸಿದ. ಅವನ ಮಾತು ನನಗೆ ನರಕ ಯಾತನೆಯನ್ನುಂಟುಮಾಡಿತು. ಈಗ ಈ ಪ್ರಸ್ತಾಪಮಾಡುವ ಅಗತ್ಯವೇನೆಂದು ನೀನು ಕೇಳಬಹುದು. ನಾವು ಒಂದು ತಪ್ಪನ್ನು ವಿನೋದಕ್ಕೆ ಮಾಡುತ್ತೇವೆ. 'ಅದರಲ್ಲಿಯೇನು ಮಹಾ – ನನ್ನ ಮನಸ್ಸು ಗಟ್ಟಿಯಾಗಿರುವಾಗ' ಎಂದು ಸಮಾಧಾನ ಹೇಳಿಕೊಳ್ಳುತ್ತೇವೆ. ಆರಂಭದಲ್ಲಿ ಮನಸ್ಸು ಗಟ್ಟಿಯೂ ಆಗಿರುತ್ತದೆ. ಆದರೆ ವಿನೋದ ಕಾಲಕ್ರಮೇಣ ವಿರೋಧವಾಗುತ್ತದೆ. ವಿನೋದ ಒಂದು ಅಭ್ಯಾಸವಾಗುತ್ತದೆ – ದುರಭ್ಯಾಸವಾಗುತ್ತದೆ. ಅದರ ಮೇಲೆ ನಮಗಿದ್ದ ಪ್ರಭಾವವನ್ನು ಕಳೆದುಕೊಂಡು, ಅದರ ದಾಸಾನುದಾಸರಾಗಿ ಬಿಡುತ್ತೇವೆ. ಹಾವಿನ ಹಲ್ಲು ಕಿತ್ತರೆ, ಹಾವಿನ ಸಂಗವೇ ಲೇಸಯ್ಯ ಎಂದು ಹಿರಿಯರು ಹೇಳಿದ್ದಾರೆ. ಹಾವಿನ ಹಲ್ಲು ಕೀಳಬಲ್ಲ ಶಕ್ತಿ ಎಷ್ಟು ಜನದಲ್ಲಿದೆ. ಹಾವಿನ ಹಲ್ಲು ಕಿತ್ತು ಅದರ ಸಂಗದಲ್ಲಿ ಇರಬಲ್ಲವರಲ್ಲಿ ನೀನು ಒಬ್ಬಳು ಎಂದು ನಾನು ಭಾವಿಸಲಾರೆ.

ವಿನಾಕಾರಣ ಹಾವಿನ ಹುತ್ತಕ್ಕೆ ಕೈಹಾಕಿ ಹಾಸಿಗೀಡಾಗುವುದಕ್ಕಿಂತ, ಹುತ್ತದಿಂದ ದೂರನಿಲ್ಲುವುದೇ ಲೇಸು.

ನೀನು ಮದ್ಯಪಾನಮಾಡುವ ವಿಷಯ ಆ ದಿನ ನನಗೆ ಸತ್ಯ ಹೇಳಿದೆಯೋ ಸುಳ್ಳು ಹೇಳಿದೆಯೋ ನಾನು ಕಾಣೆ. ಒಂದುವೇಳೆ, ಅಂದು ನೀನು ಸುಳ್ಳೇ ಹೇಳಿದ್ದರೂ ಚಿಂತೆಯಿಲ್ಲ. ದಯೆಯಿಟ್ಟು ಆ ಸುಳ್ಳು ಬೆಳಸಬೇಡ. ಇನ್ನು ಎಂದೆಂದಿಗೂ ಮದ್ಯ ಮುಟ್ಟುವುದಿಲ್ಲ ಎಂದು ಪ್ರಮಾಣ ಮಾಡು – ದೇವರ ಮುಂದಲ್ಲ; ನನ್ನ ಮುಂದಲ್ಲ; ನಿನ್ನ ಅಂತರಾತ್ಮನ ಮುಂದೆ. ಯಾರನ್ನು ಮೆಚ್ಚಿಸುವುದಕ್ಕೂ ನೀನು ಸನ್ಮಾರ್ಗದಲ್ಲಿ ಹೋಗಬೇಕಾಗಿಲ್ಲ – ನಿನ್ನನ್ನು ಮೆಚ್ಚಿಸಿಕೊಳ್ಳುವುದಕ್ಕೆ ಸನ್ಮಾರ್ಗಾವಲಂಬಿಯಾಗಬೇಕು.

ಈ ಬಗ್ಗೆ ನಾನು ಇಷ್ಟು ಖಂಡಿತವಾಗಿ ಏಕೆ ಬರೆಯುತ್ತಿರುವೆ ಗೊತ್ತೇ? ಒಂದು ತಪ್ಪು ನಮ್ಮನ್ನು ಇನ್ನೊಂದಕ್ಕೆ ಎಳೆದೊಯ್ಯುತ್ತದೆ – ಇನ್ನೊಂದು ಮತ್ತೊಂದಕ್ಕೆ. ಬಾಳೇ ತಪ್ಪಿನ ತವರಾಗುತ್ತದೆ – ಸುಳ್ಳಿನ ಸರಮಾಲೆಯಾಗುತ್ತದೆ. ಲೋಕವನ್ನು ವಂಚಿಸಿ – ಪ್ರಿಯಜನರನ್ನು ವಂಚಿಸಿ – ಎಲ್ಲಕ್ಕೂ ಹೆಚ್ಚಾಗಿ ತನ್ನನ್ನೇ ತಾನು ವಂಚಿಸಿಕೊಂಡು ಬಾಳುವ ಬಾಳ್ವೆ ಒಂದು ಬಾಳೇ! ದೇವರು ಮನುಷ್ಯನಿಗೆ ಬುದ್ಧಿಶಕ್ತಿ, ಆತ್ಮಶಕ್ತಿಯನ್ನಿತ್ತುದು ಇದಕ್ಕಾಗಿಯೇ?

ಕಮಲಾ, ನನ್ನ ಕಾಗದ ಬಹಳ ದೀರ್ಘವಾಯಿತು. ಇದರಲ್ಲಿ ನಿನಗೆ ಉಪದೇಶ ಕೊಡುತ್ತಿದ್ದೇನೆಂದು ಭಾವಿಸಬೇಡ. ನಾನು ಉಪದೇಶ ಕೊಡುವುದಕ್ಕೆ ಅರ್ಹನಲ್ಲ. ನಿನ್ನ ಬಗ್ಗೆ ನನ್ನ ಹೃದಯದಲ್ಲಿ ಉಂಟಾದ ಭಾವನೆಗಳನ್ನು ಸ್ಪಷ್ಟವಾಗಿ ವಿವರಿಸುತ್ತಿದ್ದೇನೆ. ಎದುರಿಗಿದ್ದಾಗ ನಿನ್ನ ಮೇಲಣ ಮೋಹ ನನ್ನ ಕಣ್ಣು ಮುಚ್ಚುತ್ತದೆ. ಈ ಮಾತುಗಳನ್ನು ಎದುರಿಗೆ ಹೇಳಲು ನನಗೆ ಸಾಧ್ಯವಾಗಲಿಲ್ಲ – ಅದಕ್ಕೇ ಕಾಗದದಲ್ಲಿ ಬರೆಯುತ್ತಿದ್ದೇನೆ.

ಕೂಡಲೆ ಉತ್ತರ ಬರಿ. ಎಷ್ಟೇ ಕಷ್ಟ ಬರಲಿ, ಏನೇ ನಷ್ಟವಾಗಲಿ ಸತ್ಯಕ್ಕೆ ಅಪಮಾನ ಮಾಡುವುದಿಲ್ಲವೆಂದು ಶಪಥ ಮಾಡು.

ಇಂತು ಸದಾ ನಿನ್ನ
"ಶ್ರೀನಾಥ"

ಶ್ರೀನಾಥನ ಕಾಗದ ಓದಿ ಕಮಲನಿಗೆ ಮೈನಡುಕ ಉಂಟಾಯಿತು. ' ಇಲ್ಲಿ ನಡೆಯುವುದು ಹೇಗೆ ಅವರ ಮನಸ್ಸಿಗೆ ಥಟ್ಟನೆ ಹೊಳೆಯುತ್ತದೆ ' ಎಂದು ಆಶ್ಚರ್ಯಪಟ್ಟಳು. ದುಃಖವುಕ್ಕಿಬಂತು ; ಕಣ್ಣಲ್ಲಿ ಕೋಡಿ ಹರಿಯಿತು.

ಕಮಲ ಬಿಕ್ಕಿಬಿಕ್ಕಿ ಅಳುತ್ತಿರುವುದು ಭಾಗ್ಯಮ್ಮನಿಗೆ ಕೇಳಿಸಿತು. ಮಗಳ ರೂಮಿಗೆ ಬಂದು

" ಏನೇ ಹೀಗೆ ಅಳುತ್ತಾ ಇದ್ದೀ – ಏನೇ ಆದದ್ದು ?"

" ಏನೂ ಇಲ್ಲ – ಇಲ್ಲಿ ನೋಡು "

ಎಂದು ಕಾಗದವನ್ನು ತಾಯಿಯ ಮುಖದ ಮುಂದೆ ಹಿಡಿದಳು.

" ಏನು ಬರೆದಿದ್ದಾರೆ ?"

" ನಿನ್ನೆ ಇಲ್ಲಿ ಆದದ್ದೆಲ್ಲಾ ಬರೆದಿದ್ದಾರೆ ?"

" ಅದು ಹೇಗೆ ಗೊತ್ತಾಯಿತೇ ಅವರಿಗೆ – ನೂರಾರು ಮೈಲಿ ದೂರದಲ್ಲಿ ಕುಳಿತು."

" ಕಾಗದ ಓದು, ನಿನಗೇ ಅರ್ಥವಾಗುತ್ತದೆ."

ಭಾಗ್ಯಮ್ಮ ಕೈಗೆ ಕಾಗದ ತೆಗೆದುಕೊಂಡು ಅದನ್ನು ಸ್ಥೂಲವಾಗಿ ಅವಲೋಕಿಸಿದಳು.

" ಅವರು ಸಾಮಾನ್ಯರಲ್ಲ ಎಂದು ನಾನು ಹೇಳಿದರೆ ನೀನು ಕೇಳು ವೆಯಾ ?"

" ಅವರು ದೇವರ ಅವತಾರ ಕಣೇ – ಏನೋ ಲೋಕಾಭಿರಾಮವಾಗಿ ಬರೆದಿದ್ದಾರೆ. ಅದಕ್ಕೆ ಇಷ್ಟು ಯೋಚನೆ ಮಾಡಿದರೆ ಬಾಳಿದ ಹಾಗೇ ಆಯಿತು."

" ಹೋಗಲಿ – ಅವರ ಕಾಗದ ಓದಿದೆಯಲ್ಲಾ. ಮುಂದೇನು ಮಾಡ ಬೇಕೆಂದಿರುವೆ ?"

" ಮಾಡುವುದೇನು ? ನಿನ್ನೆಯೇ ಎಲ್ಲ ಇತ್ಯರ್ಥವಾಯಿತಲ್ಲ."

" ನನ್ನ ಮನಸ್ಸಿನ ವಿರುದ್ಧ – ನಿನ್ನ ಆರ್ಭಟಕ್ಕೆ ಹೆದರಿ ನಾನು ಒಪ್ಪಿ ಕೊಳ್ಳಬೇಕಾಯಿತು."

" ಹೌದು, ಎಲ್ಲಾ ನನ್ನ ಉದ್ಧಾರಕ್ಕೇ ನಾನು ಮಾಡಿಕೊಳ್ಳುತ್ತಿರುವುದು.

ಬೀದಿ ಭಿಕ್ಷಕ್ಕೆ ಹೋಗುವ ನಿನ್ನ ಕರ್ಮ ತಪ್ಪಿಸಿದೆನಲ್ಲಾ, ಅದೇ ನನ್ನ ದೊಡ್ಡ ತಪ್ಪು."

"ಅವರು ಬಂದಾರಭ್ಯ ಭಿಕ್ಷ ಬೇಡುವಂತೆ ಮಾಡಿಲ್ಲವಲ್ಲಾ, ಕೈತುಂಬ ಹಣಕೊಟ್ಟಿದ್ದಾರೆ."

"ಕೊಟ್ಟಿದ್ದಾರೆ – ನಾನು ಇಲ್ಲವೆನ್ನಲಿಲ್ಲ. ಆದರೆ ಇದು ಎಷ್ಟು ದಿನ ಸಾಧ್ಯ ಯಾವ ನಿಖರ ಆದಾಯ ಅವರಿಗಿದೆ – ಇವತ್ತಿನ ಸ್ಥಿತಿ ನೋಡಿ ನಾವು ತೃಪ್ತಿಪಟ್ಟುಕೊಂಡರೆ ನಾಳಿನ ಗತಿಯೇನು ?"

"ದೇವರು ಮಾಡಿಸಿದಂತಾಗುತ್ತದೆ."

"ನಿನಗೆ ರಕ್ತ ಇನ್ನೂ ಬಿಸಿಯಾಗಿದೆ. ಪ್ರಪಂಚದ ಕಷ್ಟಸುಖ ಗೊತ್ತಿಲ್ಲ, ಬಾಯಿಗೆ ಬಂದ ಹಾಗೆ ಮಾತನಾಡುತ್ತಿರುವೆ. ಏಳು – ಎದ್ದು ಸ್ನಾನಮಾಡಿ ಊಟಮಾಡು. ಆಯಪ್ಪ ಮಧ್ಯಾನ್ಹ ಬರುತ್ತೇನೆಂದು ಹೇಳಿ ಹೋಗಿದ್ದಾರೆ."

ಕಮಲ ಕಾಗದವನ್ನು ತನ್ನ ದಿಂಬಿನ ಕೆಳಗಿಟ್ಟು ಹಾಸಿಗೆಬಿಟ್ಟು ಎದ್ದಳು. ಸ್ನಾನ, ಊಟ ಒಂದೂ ಬೇಡವಾಗಿತ್ತು. ಆದರೆ ಅವುಗಳನ್ನು ಬಿಡಲು ಸಾಧ್ಯವಾಗಿರಲಿಲ್ಲ.

೬

ಗವಿಯಪ್ಪನ ಪರಿಚಯವಾದುದು ನಾಗರಾಜನ ಅದೃಷ್ಟ 'ಖುಲಾಯಿಸಿ'ತ್ತು. ನಾಗರಾಜನಿಗೆ ಗವಿಯಪ್ಪನ ಪರಿಚಯ ಮಾಡಿಸಿದವನು ವೃತ್ತಿಬಂಧು ಗಣೇಶ. ತಮ್ಮ ತಮ್ಮ ಗಿರಾಕಿಗಳ ಪರಸ್ಪರ ಪರಿಚಯ ಮಾಡಿಕೊಡುವ ಕರಾರು ಅವರೊಳಗಾಗಿತ್ತು. ಗಣೇಶ ಕರಾರನ್ನು ಪರಿಪಾಲಿಸಿಕೊಂಡು ಬಂದಿದ್ದ. ನಾಗರಾಜನೂ ಅವನಿಗೆ ವೆಂಕಟಿ, ನಾಗಿ ಇವರ ಪರಿಚಯ ಮಾಡಿಸಿದ್ದ. ಆದರೆ ಕಮಲನ ಸುದ್ದಿ ಮಾತ್ರ ಗಣೇಶನ ಹತ್ತಿರ ತೆಗೆದಿರಲಿಲ್ಲ.

ಗವಿಯಪ್ಪನ ಪರಿಚಯವಾದ ಮೇಲೆ ನಾಗರಾಜ ಅವನ ಹತ್ತಿರ ಕಮಲನ ಅಸಾಧಾರಣ ರೂಪು, ಲಾವಣ್ಯ, ಯೌವ್ವನ ಕುರಿತು ವಿಶೇಷ

ಪ್ರಸ್ತಾಪಿಸಿ ಅವನ ಬಾಯಲ್ಲಿ ನೀರೂರಿಸಿದ್ದ. ನಾಗರಾಜನ ಮುಖ ಕಂಡಾಗಲೆಲ್ಲಾ ಗವಿಯಪ್ಪ ಕಮಲನ ವಿಷಯ ಕೇಳಲಾರಂಭಿಸಿದ್ದ.

ನಾಗರಾಜ ದುಷಂ ಪ್ರವೇಶ ಮಾಡುವಹಾಗೆ ಇರಲಿಲ್ಲ. 'ಎಷ್ಟು ದಿವಸಕ್ಕೆ ಶ್ರೀನಾಥ ಬೆಂಗಳೂರು ಬಿಟ್ಟು ತೊಲಗುತ್ತಾನೆ' ಎಂದು ಜಪಿಸ ತೊಡಗಿದ. ಅವನ ಸಂಧಾನಕ್ಕೆ ಭಾಗ್ಯಮ್ಮ ಸಂತೋಷವಾಗಿ ಸಹಕಾರ ನೀಡಿದಳು.

ಕಮಲನ ಸುದ್ದಿ ಹೇಳಿ, ಅವಳ ವರ್ಣನೆ ಮಾಡಿ ನಾಗರಾಜ ಗವಿಯಪ್ಪನ ಪತ್ತಿರ ನೂರಾರು ರೂಪಾಯಿ ಸುಲಿದಿದ್ದ. ನಾಗರಾಜ ತನ್ನ ಸಂಪಾದನೆಯಲ್ಲಿ 'ಶಾಕಾಯ ಲವಣಾಯ' ಮುತ್ತಮ್ಮನಿಗೆ ಮುಟ್ಟಿಸುತ್ತಿದ್ದ. ಅವನ ಮೈಮೇಲೆ ಸಿಲ್ಕ್ ಷರ್ಟು, ಸರ್ಜ್‌ಕೋಟು ಬಂದುದನ್ನು ಕಂಡು ಮುತ್ತಮ್ಮನಿಗೆ ಅನುಮಾನ ಹುಟ್ಟಿತು. ಬೆಳಿಗ್ಗೆಯಿಂದ ಸಂಜೆಯವರೆಗೆ ಮನೆಯಲ್ಲಿಯೇ ಕೊಳೆಯುತ್ತಿದ್ದ ನಾಗರಾಜ, ಈಗ ಮನೆ ಸೇರುವುದೇ ಕಷ್ಟವಾಯಿತು.

ಮುತ್ತಮ್ಮ ಒಂದು ದಿನ ತನ್ನ ಅಳಲನ್ನು ರಾಮುರಾಜಪ್ಪನಲ್ಲಿ ನಿವೇದಿಸಿಕೊಂಡಳು. ನಾಗರಾಜನ ಚಲನವಲನ ಪರೀಕ್ಷಿಸಿ ನೋಡಿ ತಿಳಿಸುವುದಾಗಿ ರಾಮುರಾಜಪ್ಪ ಸಮಾಧಾನ ಹೇಳಿದ.

ಒಂದು ದಿನ 'ಅರುಣ' ಥಿಯೇಟರಿನಲ್ಲಿ 'ಬಾಲನಾಗಮ್ಮ' ಚಿತ್ರ ನೋಡಿಕೊಂಡು ರಾಮುರಾಜಪ್ಪ ಹೊರಬರುವಾಗ ನಾಗರಾಜ ಥಿಯೇಟರ್ ಯಜಮಾನ ಗವಿಯಪ್ಪನ ಕೈಲಿ ಮಾತನಾಡುತ್ತ ಕುಳಿತಿರುವುದು ಕಂಡುಬಂತು. ರಾಮುರಾಜಪ್ಪನಿಗೆ ನಾಗರಾಜನ ರಹಸ್ಯ ಥಟ್ಟನೆ ಮನಸ್ಸಿಗೆ ಹೊಳೆಯಿತು. ಮನೆಗೆ ಹೋಗುವ ಯೋಚನೆ ಬಿಟ್ಟು ಥಿಯೇಟರ್ ಬಳಿ ನಾಗರಾಜ ಹೊರಬರುವುದನ್ನೇ ಕಾಯುತ್ತ ನಿಂತ.

ಅರ್ಧಗಂಟೆ ಕಳೆದಿರಬಹುದು. ನಾಗರಾಜ ಹೊರಗೆ ಬಂದು ಮನೆಯ ಕಡೆ ತಿರುಗಿದ. ರಾಮುರಾಜಪ್ಪ ಅವನನ್ನು ಹಿಂಬಾಲಿಸಿ ಹೋಗಿ ಸ್ವಲ್ಪ ದೂರದಲ್ಲಿ ಹಿಡಿದು ನಿಲ್ಲಿಸಿ ಮಾತನಾಡಿಸಿದ

"ಏನು ನಾಗರಾಜ. ನಿನ್ನ ದರ್ಶನ ಇಷ್ಟು ಅಪರೂಪವಾಗಿಬಿಟ್ಟಿತಲ್ಲಾ."

"ಮನೆಕಡೆ ಹೋಗಿದ್ದೆಯೇನಪ್ಪ?"

" ಹೊ !"

" ಯಾರಿದ್ದರು ?"

" ಇನ್ನು ಯಾರು – ಅವಳೇ – ಅಚ್ಚಮ್ಮ. ನೀನು ಎಲ್ಲಿಗೆ ಹೋಗಿದ್ದೆ ?"

" ಸಿನೀಮಾಕ್ಕೆ ಹೋಗಿದ್ದೆ."

" ನಿಜ ಹೇಳಿದರೆ ಏಟು ಬೀಳಲ್ಲ, ಇಲ್ಲದಿದ್ದರೆ ಸುಮ್ಮನೆ ಏಟು ತಿನ್ನುತ್ತೀ ನೋಡು."

" ನಿಜವಾಗಿ ಸಿನೀಮಾಕ್ಕೆ ಹೋಗಿದ್ದೆನಪ್ಪಾ ?"

" ಗವಿಯಪ್ಪನ ಆಫೀಸ್ ರೂಮಿನಲ್ಲಿ ಸಿನೀಮಾ ನಡೆಯುತ್ತಿತ್ತಲ್ಲವೇ ?"

" ಸಿನೀಮಾ ನೋಡಿಕೊಂಡು ಅವರಿಗೆ ಹೇಳಿ ಬರೋಣ ಎಂದು ಹೋಗಿದ್ದೆ."

" ಅವನಿಗೇಕೆ ಹೇಳಿಬರಬೇಕು."

" ಅವರೇ ಒಳಗೆ ಬಿಡಿಸಿದ್ದು."

" ಶುದ್ಧ ಸುಳ್ಳು. ನಾನೂ ಸಿನೀಮಾಕ್ಕೆ ಹೋಗಿದ್ದೆ ಬಲ್ಲೆಯಾ ? ಅದು ಹೋಗಲಿ – ಗವಿಯಪ್ಪ ನಿನ್ನ ಏಕೆ ಒಳಗೆ ಬಿಡಿಸಬೇಕು."

" ನಿನ್ನ ಹಾಗೇ ಅವರೂ ಗುರುತು."

" ಹಾಗೆ ಹೇಳು. ಅವರಿಗೆ ಯಾವ ಸ್ನೇಹನಾಡಿಸಿದೆ."

" ಯಾವದೂ ಇಲ್ಲಪ್ಪಾಂದ್ರೆ."

" ನಿಜ ಹೇಳಿಬಿಡು. ನಾನೇನು ಮಾಡುವುದಿಲ್ಲ."

" ಕಮಲ."

" ಅದಕ್ಕೋ ಸಿಲ್ಕ್ ಷರ್ಟು – ಸರ್ಜ್‌ಕೋಟು ಬಂದಿರುವುದು. ಶ್ರೀಮಂತ ಗಿರಾಕಿ ಸಿಕ್ಕಿದ, ಇನ್ನು ನಮ್ಮ ಯೋಗಕ್ಷೇಮ ಏಕೆಬೇಕು ನಿನಗೆ."

" ನಿನ್ನ ಬಿಟ್ಟರಾಗುತ್ತದೆಯೇನಪ್ಪಾ."

" ಅಲ್ಲವೋ – ಮುತ್ತಮ್ಮನಿಗೆ ಹೀಗೆ ನೀನು ದ್ರೋಹ ಮಾಡಬಹುದೇನೋ ? ಅವಳ ಮನೆಯಲ್ಲಿದ್ದುಕೊಂಡು ಹೊರಗೆ ವ್ಯವಹಾರ ಮಾಡಬಹುದೇನೋ ?"

" ಏನೋ ಸಂದರ್ಭ ಹಾಗೆ ಬಂತಪ್ಪ, ನಾನೇನು ಮಾಡಲಿ. ನಿನ್ನ

ದಮ್ಮಯ್ಯಾ – ಮುತ್ತಮ್ಮನ ಕಿವಿ ಮೇಲೆ ಈ ಸುದ್ದಿ ಹಾಕಬೇಡಪ್ಪಾ – ನಿನ್ನ ಕಾಲು ಹಿಡಿದು ಬೇಡಿಕೊಳ್ಳುತ್ತೇನೆ."

"ಹಾಳಾಗಿ ಹೋಗು – ನಿನ್ನ ಮೇಲೆ ನಾನೇಕೆ ಚಾಡಿ ಹೇಳುವುದಕ್ಕೆ ಹೋಗಲಿ. ನನ್ನ ಯಾವಾಗ ಕಮಲನ ಮನೆಗೆ ಕರೆದುಕೊಂಡು ಹೋಗುತ್ತೀ?"

"ಅದೊಂದು ಮಾತು ಬಿಟ್ಟು ನೀನು ಏನು ಹೇಳಿದರೂ ಮಾಡುತ್ತೇನೆ ರಾಮರಾಜಪ್ಪ. ಗವಿಯಪ್ಪನವರಿಗೆ ತಿಳಿದರೆ ನನ್ನ ಚರ್ಮ ಸುಲಿಸಿಬಿಡುತ್ತಾರೆ. ನಿನಗೆ ಬೇರೆ ಹುಡುಕಿಕೊಡುತ್ತೇನೆ."

"ಏನು ಮಾಡುತ್ತೀಯೋ ನೋಡೋಣ. ಮನೆಗೆ ತಾನೇ...."

"ಹೊ! ಮುತ್ತಮ್ಮನಿಗೆ ಹೇಳುವುದಿಲ್ಲವಷ್ಟೆ!"

"ಇಲ್ಲ"

ಎಂದು ಹೇಳಿ ರಾಮರಾಜಪ್ಪ ತನ್ನ ಮನೆಯ ದಾರಿ ಹಿಡಿದ.

ನಾಗರಾಜನ ಮುಖನೋಡಿ ಮುತ್ತಮ್ಮ ಬೆಕ್ಕು ಕಂಡ ನಾಯಿಯಂತಾದಳು. ಅವಳು ಒದರಿ ಚೀರುವುದಕ್ಕೆ ನಾಗರಾಜ ಪೂರ್ತಿ ಅವಕಾಶಕೊಟ್ಟ. ಅವಳು ಸ್ವಲ್ಪ ಮೆತ್ತಗಾದಮೇಲೆ

"ನಾನೇನು ಪೋಲಿ ಅಲೀತಿರಲಿಲ್ಲಾ ಮುತ್ತಾ. ನಿನ್ನ ಕೆಲಸಕ್ಕೇ ಹೋಗಿದ್ದೆ."

"ಏನೋ ನನ್ನ ಕೆಲಸ ನೀನು ಮಾಡಿಕೊಂಡು ಬಂದಿರೋದು."

"ಹಿಂದೆ ಚಾಮರಾಜಪೇಟೆ ಮನೆಯಲ್ಲಿದ್ದಾಗ ಸಾಗರದ ಒಬ್ಬ ಸಾಹುಕಾರ ಬಂದಿದ್ದ ಜ್ಞಾಪಕವಿದೆಯೋ?"

"ಹೂ! ಆ ಮುದುಕ"

"ಅವನು ಇವತ್ತು ಅಕಸ್ಮಾತ್ತಾಗಿ ಮಾರ್ಕೆಟ್ ಹತ್ತಿರ ಸಿಕ್ಕಿ ತಾನಿಳಿದುಕೊಂಡಿದ್ದ ಹೋಟೆಲಿಗೆ ಕರೆದುಕೊಂಡು ಹೋದ."

"ಏನಂತೆ ಅವನದು ರಾಮಾಯಣ."

"ಕಂಡೇ ಇದೆಯಲ್ಲಾ. ಅದರಲ್ಲಿ ಸ್ವಲ್ಪ ವಿಶೇಷವಿದೆ."

"ಏನು?"

"ನಮ್ಮ ಮನೆ ಹುಡುಕಿಕೊಂಡು ಚಾಮರಾಜಪೇಟೆಗೆ ಹೋಗಿದ್ದನಂತೆ. ನಾವು ಮನೆ ಬದಲಾಯಿಸಿದ್ದು ಕೇಳಿ ತುಂಬ ವ್ಯಸನಪಟ್ಟನಂತೆ."

"ಅಯ್ಯೋ ಪಾಪ !"

"ಅವನಿಗೆ ಖಾಯಂ ಆಗಿ ಯಾರಾದರೂ ಬೇಕಂತೆ. ಜತೆಯಲ್ಲಿಯೇ ಊರಿಗೆ ಕರೆದುಕೊಂಡು ಹೋಗುತ್ತಾನಂತೆ."

"ಅದಕ್ಕೆ ನಾವು ಯಾರನ್ನು ತರೋಣ."

"ಅದೂ ನಾನು ಯೋಚನೆ ಮಾಡಿದೆ. ಅಚ್ಚಮ್ಮ.........."

"ಕರೆಯೋ ಹಸು ಕೊಂದು ಬಿರಿಯಾನಿ ಮಾಡಿಕೊಂಡು ತಿಂದಹಾಗೆ ನಿನ್ನ ಮಾತು."

"ಹಾಗಲ್ಲ ಮುತ್ತಾ. ಕೈತುಂಬ ನಾಲ್ಕುಕಾಸು ಕೊಡುವುದಕ್ಕೆ ಅವನು ಸಿದ್ಧನಾಗಿದ್ದಾನೆ."

"ಎಷ್ಟು ಕೊಡುತ್ತಾನೆ ಕೇಳಿದೆಯಾ ?"

"ಅದನ್ನು ನೀನು ಕೇಳಬೇಕು."

"ಯಾವಾಗ ಬರುತ್ತಾನಂತೆ !"

"ಯಾವಾಗ ನಾನು ಹೋಗಿ ಕರೆದರೆ ಆವಾಗ. ನಿನ್ನ ಕೇಳಿ ಬಂದು ತಿಳಿಸುತ್ತೇನೆ ಎಂದು ಹೇಳಿದೆ."

ಮುತ್ತಮ್ಮನ ಮುಖದಮೇಲೆ ಮುಗುಳ್ನಗೆ ಮೂಡಿತು. ನಾಗರಾಜನ ಮೇಲಿದ್ದ ಕ್ಷಾತ್ರ ಒಮ್ಮೆಲೇ ಕಡಿಮೆಯಾಯಿತು.

"ಗಂಟೆ ಇನ್ನೂ ಒಂಭತ್ತು. ಈಗಲೇ ಹೋಗಿ ಕರೆದುಕೊಂಡು ಬರುತ್ತೀಯಾ. ಬೇಕಾದರೆ ಗಾಡಿಮಾಡಿಕೊಂಡು ಹೋಗು."

"ಗಾಡಿಮಾಡದೆ -- ಅಷ್ಟುದೂರ ನಡೆಯಬೇ ?"

"ಊಟ ಬಂದು ಮಾಡುವೆಯಂತೆ !"

"ನನಗೆ ಹಸಿವಿಲ್ಲ. ಹೊರಗಡೆ ಸ್ವಲ್ಪ ತಿಂಡಿಯಾಯಿತು ಪುಟ್ಟಾ ಮಲಗಿಕೊಂಡಳೇ ?"

"ಕಣ್ಣಿಕೇಳು. ಅವಳು ಮಲಗಿ ಒಂದು ಗಂಟೆಯಾಯಿತು."

ಕಾಲ ವಿಳಂಬಮಾಡದೆ ನಾಗರಾಜ ಮನೆಬಿಟ್ಟು ಹೊರಟು 'ನ್ಯೂ ಹಿಂದೂ ಹೋಟೆಲಿ'ಗೆ ಹೋಗಿ ಬರುವುದಕ್ಕೆ ಒಂದು ಗಾಡಿ ಗೊತ್ತುಮಾಡಿಕೊಂಡ.

ನಾಗರಾಜ ಹಿಂದಿರುಗಿ ಬರುವುದರೊಳಗಾಗಿ ಮುತ್ತಮ್ಮ ಮನೆಯನ್ನೆಲ್ಲಾ ಗುಡಿಸಿ, ಬೀಡಿ ಸಿಗರೇಟ್ ತುಂಡುಗಳನ್ನು ಹೊರಗೆ ಹಾಕಿ, ಬೀರ್ ಶೀಷೆ ಗಳನ್ನು ಮುಚ್ಚಿಟ್ಟು, ತೊಟ್ಟಿಯಲ್ಲಿ ಚಾಪೆ ಹಾಸಿದಳು. ಮುತ್ತಮ್ಮನ ಆಜ್ಞೆ ಯಂತೆ ಅಚ್ಚಮ್ಮ ತಲೆ ಬಾಚಿಕೊಂಡು, ಮುಖಕ್ಕೆ ಪೌಡರ್ ಹಚ್ಚಿಕೊಂಡು, ಹೊಸಸೀರೆ ಉಟ್ಟು ಸಿದ್ಧವಾದಳು.

ಸ್ವಲ್ಪ ಹೊತ್ತಿನಲ್ಲಿ ನಾಗರಾಜ ಅತಿಥಿಯನ್ನು ಕರೆದುಕೊಂಡು ಮನೆಗೆ ಬಂದ. ಸಾಗರದ ಸಾಹುಕಾರನನ್ನು ಕಂಡಕೂಡಲೆ ಮುತ್ತಮ್ಮ ಅವನ ಗುರುತು ಹಿಡಿದು ಮಾತನಾಡಿಸಿದಳು.

“ಇಷ್ಟು ವರ್ಷಗಳ ಮೇಲೆ ನಮ್ಮ ಜ್ಞಾಪಕ ಬಂತೇನಪ್ಪಾ ?”

“ನೀವು ಮನೆ ಬದಲಾಯಿಸಿದರೆ ನಾನು ಎಲ್ಲೀಗೇಂತ ಬರಲಿ. ಇವತ್ತು ಅಕಸ್ಮಾತ್ತಾಗಿ ನಾಗರಾಜ ಸಿಕ್ಕುವ ಹೊತ್ತಿಗೆ ಬರುವುದು ಸಾಧ್ಯವಾಯಿತು.”

ಸಾಹುಕಾರ ಶಿವರಾಯ ಕುಳಿತುಕೊಂಡ ಮೇಲೆ ಮುತ್ತಮ್ಮ ಅವನ ಮುಂದೆ ಎಲೆಯಡಿಕೆ ತಟ್ಟೆಯನ್ನಿಟ್ಟು

“ಬೆಂಗಳೂರಿಗೆ ಯಾವಾಗ ಬಂದೆಯಪ್ಪಾ ?”

“ಮೂರು ದಿವಸವಾಯಿತು. ಆ ಮನೆ ಏಕೆ ಬದಲಾಯಿಸಿದೆ ಮುತ್ತಮ್ಮ ?”

“ಮನೆ ಸಾಲಲಿಲ್ಲ.”

“ಇದೂ ಬಹಳ ದೂರ ಆಯಿತಮ್ಮ.”

“ಬಡವಳಿಗೆ ಒಂದು ಮನೆ ತೆಗೆದುಕೊಡಬಾರದೇ?”

“ತೆಗೆದುಕೊಡೋಣ – ಕಾಲ ಬರಲಿ.”

“ಏನು ಸಮಾಚಾರ.”

“ನಾಗರಾಜ ಎಲ್ಲಾ ಹೇಳಿರಬೇಕಲ್ಲ.”

“ಹೇಳಿದ. ಖಾಯಂ ವಿಷಯವೇ ಕಷ್ಟ. ನಿಮ್ಮೂರಿಗೇ ಬರ ಬೇಕೇನೋ ?”

“ಹೂ ! ಅವಳಿಗೋಸ್ಕರ ನಾನು ಊರುಬಿಟ್ಟು ಬೆಂಗಳೂರಿಗೆ ಬಂದು ಸಂಸಾರ ಹೂಡುವುದಕ್ಕಾಗುತ್ತದೆಯೇ ? ಯಾವದಾದರೂ ತಲಾಷ್ ಮಾಡಿ ದೆಯೋ ?”

"ನಿನ್ನ ಕೆಲಸ ಯಾವತ್ತಪ್ಪಾ ನಾನು ಮಾಡದೆ ಇರೋದು."

"ಅದೇನೋ ನಿಜಾನ್ನು. ನೀನು ನನ್ನ ಸೇವೆ ಬಹಳ ಮಾಡಿದ್ದೀ? ಯಾರಿದ್ದಾರೆ ಕರಿ."

"ಕರೆಯುತ್ತೀನಿ. ಮುಂದಿನ ಮಾತು ಹೇಳು"

"ನಾನು ನೋಡುತ್ತೀನಿ. ಒಪ್ಪಿಗೆಯಾದರೆ ಮುಂದಿನ ಮಾತು."

"ಮಾತು ಮುಗಿದುಹೋಗಲಿ. ಒಪ್ಪಿಗೆಯಾದರೆ ಸರಿ – ಇಲ್ಲದಿದ್ದರೆ ಇಲ್ಲ."

"ಹಾಗೂ ಆಗಬಹುದು. ನೀನೇ ಹೇಳು."

"ಹುಡುಗಿ ತುಂಬ ಒಳ್ಳೆಯದು. ಕಷ್ಟದಲ್ಲಿತ್ತು. ನಾನೇ ಕರೆದುಕೊಂಡು ಬಂದು ಸಾಕಿದೆ. ಅವಳಿಗೋಸ್ಕರ ಸಾವಿರಾರು ರೂಪಾಯಿ ಖರ್ಚು ಮಾಡಿದೆ."

ಎಂದು ಮುಂದುವರಿಸಿ ಅಚ್ಚಮ್ಮನ ಕಥೆಯನ್ನು ಕೂಲಂಕಷವಾಗಿ ಶಿವರಾಯನಿಗೆ ಹೇಳಿದಳು. ಅದನ್ನು ಕೇಳಿ ಶಿವರಾಯನ ಕಣ್ಣಲ್ಲಿ ನೀರು ಚಿಮ್ಮಿತು.

"ಸರಿ. ನಿನಗೇನು ಕೊಡಬೇಕು."

"ಒಂದು ಮನೆಗಾಗುನಷ್ಟು ಕೊಡಪ್ಪಾ."

"ಎಲ್ಲಿಂದ ತರಲಿ ಮುತ್ತಮ್ಮ."

"ನಿನಗೇನಪ್ಪಾ ದೇವರು ಕಡಿಮೆಮಾಡಿರೋದು – ದೊಡ್ಡ ಸಾಹುಕಾರ – ನನಗೆ ನಾಲ್ಕೈದು ಸಾವಿರ ಕೊಟ್ಟರೆ ನಿನಗೆ ದೇವರು ಅದರ ಹತ್ತರಷ್ಟು ಕೊಡುತ್ತಾನೆ."

"ಬರೀ ಮಾತೇಕೆ? ಒಂದು ಸಾವಿರ ತೆಗೆದುಕೊಂಡು ಬಿಡು."

"ಧರ್ಮಕರ್ಮ ನೀನೇ ನೋಡಪ್ಪಾ."

"ಅವಳನ್ನು ಕರೆಯುತ್ತೀಯೇನು?"

ಮುತ್ತಮ್ಮ ಕರೆಯಲು ಅಚ್ಚಮ್ಮ ಬಂದು ಅವಳ ಬಳಿ ಕುಳಿತಳು.

"ಇವರು ಸಾಗರದ ಸಾಹುಕಾರರು ಅಚ್ಚಮ್ಮ. ಮೊದಲಿನಿಂದ ನನಗೆ ಗುರುತು. ನನಗೆ ತುಂಬ ಉಪಕಾರಮಾಡಿದ್ದಾರೆ. ನಿನ್ನ ವಿಷಯವೆಲ್ಲಾ ಇವರಿಗೆ ಹೇಳಿದ್ದೀನಿ."

'ಏಕೆ ಹೇಳಿದಿರಿ?' ಎನ್ನುವಂತೆ ಅಚ್ಚಮ್ಮ ಒಂದುಸಲ ಮುತ್ತಮ್ಮನ ಮುಖನೋಡಿದಳು.

"ಇವರಿಗೆ ತಿಳಿದರೇನೂ ಬಾಧಕವಿಲ್ಲ ಅಚ್ಚಮ್ಮ. ಮುಂದೆ ನಿನಗೆ ಏನಾದರೂ ಒಂದು ದಾರಿ ಮಾಡಬೇಕೆಂದಿದ್ದಾರೆ. ನೀನು ಏನು ಹೇಳುತ್ತೀ?"

"ನಾನೇನು ಹೇಳಲಮ್ಮ. ನೀವು ಹೇಗೆ ಹೇಳಿದರೆ ಹಾಗೆ ಮಾಡುತ್ತೇನೆ"

ಎಂದು ಅಚ್ಚಮ್ಮ ನುಡಿದಳು.

ತನಗೂ ಶಿವರಾಯನಿಗೂ ಆಗಿದ್ದ ಮಾತುಕತೆಯನ್ನು ಮುತ್ತಮ್ಮ ವಿವರಿಸಲಿಲ್ಲ.

"ಹೋಗಿ ಒಳಗೆ. ಹೊತ್ತು – ಮೀರುತ್ತ ಬಂತು"

ಎಂದಳು.

ಕೋಣೆಗೆ ಬಂದ ಶಿವರಾಯ ಕೋಟು ಕಳಚಿ ಅದನ್ನು ತೂಗು ಹಾಕಲು ಗೂಟ ಹುಡುಕುತ್ತಿದ್ದ. ಅಚ್ಚಮ್ಮ ಕೈಗೆ ತೆಗೆದುಕೊಂಡು ಗೋಡೆಯ ಒಂದು ಮೊಳೆಗೆ ನೇತುಹಾಕಿದಳು.

ಒಂದು ಬೆಡ್‌ಲ್ಯಾಂಪ್ ಸಣ್ಣಗೆ ಉರಿಯುತ್ತಿತ್ತು.

ನಿಂತೇ ಇದ್ದ ಅಚ್ಚಮ್ಮನನ್ನು ಕರೆದು ಶಿವರಾಯ ಹತ್ತಿರ ಕೂಡಿಸಿ ಕೊಂಡು

"ನಿನ್ನ ವಿಷಯವನ್ನೆಲ್ಲಾ ಮುತ್ತಮ್ಮ ಹೇಳಿದ್ದಾಳೆ. ನಿನ್ನ ಕರುಣಾ ಜನಕ ಕಥೆ ಕೇಳಿ ತುಂಬ ವ್ಯಸನವಾಯಿತು."

"ನನ್ನ ಕರ್ಮಕ್ಕೆ ಯಾರು ಹೊಣೆ."

"ನಿನ್ನ ಕರ್ಮದ ಹೊಣೆಯಲ್ಲ. ಕಂಡವರ ಕರ್ಮ ಬಂದು ನಿನಗೆ ಸುತ್ತಿಕೊಂಡಿತು. ನಿನ್ನ ನೋಡಿದರೆ ಈ ಬಾಳು ನಿನಗಲ್ಲ ಎಂದೆನಿಸುತ್ತದೆ."

ಅಚ್ಚಮ್ಮನ ಕಣ್ಣಿನಲ್ಲಿ ಧಾರೆಧಾರೆಯಾಗಿ ನೀರು ಹರಿಯಿತು.

"ನನ್ನನ್ನು ಕಾಪಾಡಿ. ಈ ಬಾಳು ನಾನು ಸಹಿಸಲಾರೆ. ನಿಮ್ಮಂಥ ವರ ಮನೆಯಲ್ಲಿ ಕಸಮುಸರೆ ಮಾಡಿಕೊಂಡಿದ್ದರೂ ಚಿಂತೆಯಿಲ್ಲ. ನಾನು ...ರವಾಗಿ ಬಾಳುವಂತೆ ಒಂದು ದಾರಿ ತೋರಿಸಿ."

"ಅದನ್ನೇ ಯೋಚನೆ ಮಾಡುತ್ತಿದ್ದೇನೆ"

ಎಂದು ಹೇಳಿದ.

ಕುಳಿತದ್ದು ಸಾಕಾಗಿ ಶಿವರಾಯ ಹಾಸಿಗೆಯ ಮೇಲೆ ಮಲಗಲು ಅಚ್ಚಮ್ಮ ಅವನ ಪಕ್ಕದಲ್ಲಿ ಕುಳಿತು ಕಾಲುಗಳನ್ನೊತ್ತುತ್ತಿದ್ದಳು. ಶಿವರಾಯನಿಗೆ ಆಪ್ಯಾಯಮಾನವಾಯಿತು.

"ನೋಡು ಅಚ್ಚಮ್ಮ...."

"ಅಚ್ಚಮ್ಮ ಎಂದು ಕರೆಯಬೇಡಿ, ಅಚ್ಚ ಎಂದು ಕರೆಯಿರಿ."

"ಹಾಗೇ ಆಗಲಿ. ನನ್ನ ಹೆಂಡತಿ ತೀರಿಹೋಗಿ ಹತ್ತು ವರ್ಷಗಳಾದವು. ಇಬ್ಬರು ಮಕ್ಕಳಿದ್ದಾರೆ. ದೊಡ್ಡವರಾಗಿದ್ದಾರೆ. ಮೊದಲನೆಯವನು ಸಾಗರದಲ್ಲಿ ಒಂದು ಜವಳಿ ಅಂಗಡಿ ಇಟ್ಟುಕೊಂಡಿದ್ದಾನೆ; ಎರಡನೆಯವನು ಸ್ವಂತ ಬೇಸಾಯ ಮಾಡಿಸುತ್ತಾನೆ. ನನ್ನ ಹೆಂಡತಿ ಹೋಗುವಾಗ ಮಕ್ಕಳು ಚಿಕ್ಕವರು. ನಾನು ಎರಡನೆಯ ಮದುವೆಮಾಡಿಕೊಂಡರೆ ಅವರಿಗೆ ತೊಂದರೆಯಾಗುವುದೆಂದು ಮದುವೆಯೋಚನೆ ಬಿಟ್ಟು ಕಾಲ ತಳ್ಳಿದೆ."

"ಅವರಿಗೆ ಮದುವೆಯಾಗಿದೆಯೇ ?"

"ಇಬ್ಬರಿಗೂ ಆಗಿದೆ. ದೊಡ್ಡವನಿಗೆ ಒಂದು ಗಂಡು, ಒಂದು ಹೆಣ್ಣು ಮಗುವಿದೆ. ಚಿಕ್ಕವನ ಹೆಂಡತಿ ಬಸುರಿ."

"ಸಂತೋಷ"

"ನನಗೂ ವಯಸ್ಸಾಗುತ್ತ ಬಂತು. ಒಂಟಿಬಾಳುವೆ ಮಾಡುವುದು ನನಗೆ ದುಸ್ಸಾಧ್ಯವಾಗಿದೆ. ನನ್ನ ಯೋಗಕ್ಷೇಮ ನೋಡಿಕೊಳ್ಳುವುದಕ್ಕೆ ಯಾರಾದರೂ ಬೇಕು. ಸಾಯುವ ಕಡೆಗಾಲದಲ್ಲಿ ಬಾಯಿಗೆ ನೀರು ಹಾಕುವುದಕ್ಕಾದರೂ ಯಾರಾದರೂ ಬೇಕು."

"ಸಾಯುವ ಮಾತು ಆಡಬೇಡಿ."

"ಇರುವ ಸ್ಥಿತಿ ಹೇಳಿದೆ. ನಿನ್ನ ವಿಷಯ ಮುತ್ತಮ್ಮ ಎಲ್ಲಾ ವಿವರಿಸಿದಳು. ನೀನು ನಂಬಿಕೆಯಾಗಿ ಇರಬಹುದು ಎನಿಸಿತು."

"ಯೋಚನೆಮಾಡಿ. ನನ್ನ ಕಟ್ಟಿಕೊಂಡು ನಿಮ್ಮ ಗೌರವ ಹಾಳಾಗಬಾರದು. ನಿಮ್ಮ ಮಕ್ಕಳಿಗೂ ನಿಮಗೂ ಮನಸ್ತಾಪ ಬರಬಾರದು."

"ಮಕ್ಕಳು ಯೋಗ್ಯರು. ನನ್ನ ವ್ಯವಹಾರಕ್ಕೆ ಅವರು ಬರುವುದಿಲ್ಲ.

ಅವರಿಗೆ ನಾನೇನೂ ಅನ್ಯಾಯ ಮಾಡಿಲ್ಲ. ನಾನು ಸಾಗರದಲ್ಲಿ ಕೂಡ ಇರುವುದಿಲ್ಲ. ಹತ್ತಿರ ನನ್ನ ತೋಟ ಒಂದಿದೆ – ಅಲ್ಲೇ ಇರುತ್ತೇನೆ. ನೀನೂ ಯೋಚನೆ ಮಾಡು – ಬೆಳಿಗ್ಗೆ ಉತ್ತರ ಹೇಳು."

"ನನಗೊಂದು ಮಗುವಿದೆ."

"ಬಲ್ಲೆ"

"ಅದನ್ನೇನು ಮಾಡಲಿ?"

"ಬೆಳಿಗ್ಗೆ ಯೋಚನೆ ಮಾಡೋಣ."

ತನಗೆ ಭಾಗ್ಯದ ಬಾಗಿಲು ತೆಗೆಯಿತೆಂದು ಅಚ್ಚಮ್ಮ ಭಾವಿಸಿ ಹರ್ಷಚಿತ್ತಳಾದಳು.

ಬೆಳಿಗ್ಗೆ ಅಚ್ಚಮ್ಮ ಬೇಗ ಎದ್ದು, ಒಲೆಗೆ ಉರಿಹಾಕಿ ನೀರುಕಾಯಿಸಿ, ತಾನು ಸ್ನಾನಮುಗಿಸಿ ಶಿವರಾಯನನ್ನು ಎಬ್ಬಿಸಿದಳು. ಅವನು ಮುಖ ತೊಳೆದುಕೊಂಡು ಬರುವ ಹೊತ್ತಿಗೆ ನಾಗರಾಜ ಹೋಟೇಲಿನಿಂದ ಬಿಸಿಬಿಸಿ ದೋಸೆ, ಕಾಫಿ ತಂದ. ಎಲ್ಲರೂ ಕುಳಿತು ಉಪಾಹಾರ ಮುಗಿಸಿದರು.

ಮುತ್ತಮ್ಮ ನಸುನಗುತ್ತಾ

"ಏನಪ್ಪಾ ನಿರ್ಧರಿಸಿದೆ"

ಎಂದು ಶಿವರಾಯನನ್ನು ಕೇಳಿದಳು.

"ಇವತ್ತು ರಾತ್ರಿ ನಾನು ಊರಿಗೆ ಹೊರಡುತ್ತೇನೆ – ಅಚ್ಚಮ್ಮ ಪ್ರಯಾಣ ಮಾಡುವುದಕ್ಕಾಗುತ್ತದೆಯೇ?"

"ಕರೆದುಕೊಂಡು ಹೋದರೆ ಬರುತ್ತಾಳೆ."

"ಕರೆದುಕೊಂಡು ಹೋಗಲು ನಿರ್ಧರಿಸಿದ್ದೇನೆ."

"ಬಹಳ ಸಂತೋಷ. ಬಡವಳು – ಅವಳಿಗೊಂದು ದಾರಿಯಾದದ್ದು ನೋಡಿ ನನಗೆ ತುಂಬ ಸಂತೋಷವಾಯಿತು."

"ಅವಳ ಮಗುವಿನ ವಿಷಯ ಹೇಗೆ ನಿರ್ಧರಿಸೋಣ."

ಮುತ್ತಮ್ಮ ಸ್ವಲ್ಪ ಯೋಚಿಸಿ

"ಅದನ್ನು ನನಗೆ ಅವಳು ಕೊಟ್ಟುಬಿಡಬೇಕು."

ಅಚ್ಚಮ್ಮನ ಬಾಯಲ್ಲಿ ಮಾತು ಹೊರಡಲಿಲ್ಲ. ಕಣ್ಣಲ್ಲಿ ದುಃಖ ಉಕ್ಕಿತು.

" ಇದರಿಂದ ನಿನಗೂ ಸುಖವಿಲ್ಲ – ಆಯಪ್ಪನಿಗೂ ಸುಖವಿಲ್ಲ ಅಚ್ಚಮ್ಮ– ಮಗುವಿನ ವಾತ್ಸಲ್ಯ ಬಿಟ್ಟುಬಿಡು. ನಾನು ಅದಕ್ಕೆ ಯಾವದಕ್ಕೂ ಕಡಿಮೆ ಮಾಡಲ್ಲ."

" ಎಷ್ಟಾದರೂ ಅದು ನನ್ನ ಮಗುವಲ್ಲವೇ ಮುತ್ತಮ್ಮನವರೇ – ಮಗು ವನ್ನು ಹೇಗೆ ಬಿಡಲಿ."

" ಹುಚ್ಚಿ ! ಬಿಟ್ಟು ಎಷ್ಟು ಸಾವಿರ ಮೈಲಿ ನೀನು ಹೋಗಬೇಕು ? ಸಂಜೆ ಸಾಗರದಲ್ಲಿ ರೈಲು ಹತ್ತಿದರೆ ಬೆಳಿಗ್ಗೆ ಬೆಂಗಳೂರಿಗೆ ಬರುತ್ತೀ – ಬೇಕಾ ದಾಗ ಬಂದು ನೋಡಿಕೊಂಡು ಹೋಗು. ಇನ್ನೊಂದು ಮಾತು – ಒಳ್ಳೆಯ ಕಡೆ ಹೋಗುತ್ತಿರುವೆ. ಆಯಪ್ಪನ ಮನಸ್ಸಿಗೆ ಬೇಜಾರು ಆಗದ ಹಾಗೆ ನೋಡಿಕೋ "

" ಹಾಗೇ ಮಾಡು ಅಚ್ಚ. ಮುತ್ತಮ್ಮ ಮಗುವನ್ನು ಸಾಕಿಕೊಳ್ಳಲಿ. ಬೇಕಾದಾಗ ಬಂದು ನೋಡಿಕೊಂಡು ಹೋಗುವೆಯಂತೆ."

ಅಚ್ಚಮ್ಮನ ಹೃದಯ ಕಲಕಿಹೋಯಿತು. ಬಾಯಲ್ಲಿ ದ್ರವವಾಗಿ ಮಾತೇ ಹೊರಡದಂತಾಯಿತು.

ಶಿವರಾಯ ಕೋಟು ಧರಿಸಲು ಎದ್ದು ರೂಮಿಗೆ ಹೋದ. ಅವನನ್ನನು ಸರಿಸಿ ಅಚ್ಚಮ್ಮ ಬಂದಳು. ಶಿವರಾಯ ಅವಳ ಗಲ್ಲ ಹಿಡಿದು

" ನಾನಿಲ್ಲವೇ – ಏಕೆ ದುಃಖಪಡುತ್ತೀ. ಈಗ ಮುತ್ತಮ್ಮ ಹೇಳುವ ಹಾಗೆ ಮಾಡು. ಮುಂದಕ್ಕೆ ಮಗುವನ್ನು ಬಿಟ್ಟಿರಲು ಸಾಧ್ಯವಾಗದೇ ಇದ್ದರೆ ನಾನು ಮುತ್ತಮ್ಮನನ್ನು ಒಪ್ಪಿಸಿ ಮಗುವನ್ನು ಕರೆದುಕೊಂಡು ಬಂದು ಕೊಡು ತ್ತೇನೆ."

ಎಂದು ಸಮಾಧಾನ ಹೇಳಿದ.

ಅಚ್ಚಮ್ಮ ಸಮಾಧಾನ ತಂದುಕೊಂಡು, ಶಿವರಾಯನ ಅಂಗಿಯ ಗುಂಡಿ ಹಾಕುತ್ತ

" ಹೊರಡುವ ಮುನ್ನ ನಾನು ಸ್ವಲ್ಪ ಋಣ ಬಗೆಹರಿಸಿಕೊಳ್ಳಬೇಕಾ ಗಿದೆ."

" ದುಡ್ಡು ಬೇಕಾಗಿತ್ತೇ ?"

" ಈಗಲೇ ದುಡ್ಡು ಕೇಳುತ್ತೇನೆಂದು ಬೇಸರಪಟ್ಟುಕೊಳ್ಳುವಿರೇನೋ ?"

"ಛೆ; ಇನ್ನು ಮೇಲೆ ನನ್ನ ದುಡ್ಡು ನಿನ್ನದಲ್ಲವೇನು? ಈಗ ಹೆಚ್ಚು ಹಣವಿಲ್ಲ. ಹೋಟೇಲಿನಲ್ಲಿ ಕೊಡುತ್ತೇನೆ."

ಎಂದು ಹೇಳಿ

"ನಿನಗೆ ಸಾಕಷ್ಟು ಬಟ್ಟೆಬರೆ ಇದೆಯೇ?"

"ಇದೆ."

"ಇಲ್ಲದ್ದು ಹೇಳಬೇಡ. ಸಾಸೀಗ ನಾಗರಾಜನನ್ನು ಜತೆಯಲ್ಲಿ ಕರೆದು ಕೊಂಡು ಹೋಗುತ್ತೇನೆ. ಒಂದು ಟ್ಯಾಕ್ಸಿಕೊಟ್ಟು ಅವನನ್ನು ಕಳಿಸುತ್ತೇನೆ. ನೀನು ಅವನ ಜತೆ ಬಾ. ಅಂಗಡಿಗೆ ಹೋಗಿ ನಿನಗೆ ಬೇಕಾದ ಬಟ್ಟೆಬರೆ ತೆಗೆದು ಕೊಳ್ಳೋಣ."

ಅಚ್ಚಮ್ಮನಿಗೆ ಏನು ಹೇಳಬೇಕೋ ತೋರಲಿಲ್ಲ. ಶಿವರಾಯನ ಎರಡು ಪಾದಗಳನ್ನು ಮುಟ್ಟಿ ನಮಸ್ಕಾರಮಾಡಿದಳು.

ಶಿವರಾಯ ಹೊರಗೆ ಬಂದು

"ಮುತ್ತಮ್ಮ....ನಾಗರಾಜನನ್ನು ನಾನು ಜತೆಯಲ್ಲಿ ಕರೆದುಕೊಂಡು ಹೋಗಿ ಟ್ಯಾಕ್ಸಿಕೊಟ್ಟು ಕಳಿಸುತ್ತೇನೆ. ನೀನೂ, ಅಚ್ಚಮ್ಮ ಅವನ ಜತೆಯಲ್ಲಿ ಬನ್ನಿ."

"ನಾನು ಏಕಪ್ಪಾ?"

"ಅವಳಿಗೆ ಸ್ವಲ್ಪ ಬಟ್ಟೆ ತೆಗೆದುಕೊಳ್ಳೋಣ."

"ಅವಳನ್ನು ನಾಗರಾಜನನ್ನು ಕಳಿಸಿಕೊಡುತ್ತೇನೆ. ಇವತ್ತು ಹೊರಟು ಹೋಗುತ್ತಾಳೆ. ಮನೆಯಲ್ಲಿದ್ದು ಒಂದು ಪಾಯಿಸವಾದರೂ ಮಾಡುತ್ತೇನೆ. ನೀನೂ ಇಲ್ಲೇ ಊಟಕ್ಕೆ ಬಂದುಬಿಡಪ್ಪ."

"ನನಗೆ ತುಂಬ ಕೆಲಸವಿದೆ. ಬರುವುದಕ್ಕಾಗುತ್ತದೆಯೋ ಇಲ್ಲವೋ.?"

"ನೀನು ಬರುವುದು?"

"ಈಗ ಇವರು ಬಂದಕೂಡಲೆ ಪೇಟೆಕೆಲಸ ಮುಗಿಸಿ ಕಳಿಸಿಕೊಡು ತ್ತೇನೆ – ಸಂಜೆ ನಾನು ಬಂದು ಅಚ್ಚಮ್ಮನನ್ನು ರೈಲಿಗೆ ಕರೆದುಕೊಂಡು ಹೋಗುತ್ತೇನೆ."

"ಹಾಗೇ ಆಗಲಿ"

ಎಂದು ಮುತ್ತಮ್ಮ ಒಪ್ಪಿದಳು.

ಶಿವರಾಯ, ನಾಗರಾಜನೊಂದಿಗೆ ಹೊಟೇಲಿಗೆ ಹೊರಟ.

ಅಚ್ಚಮ್ಮ ತನ್ನ ಮಗುವನ್ನೆತ್ತಿಕೊಂಡು ಅಪ್ಪಿ, ಮುದ್ದಿಟ್ಟು, ಕಣ್ಣೀರು ಸುರಿಸತೊಡಗಿದಳು. ಅವಳ ಉದ್ವೇಗ ಕಂಡ ಮುತ್ತಮ್ಮ ಒಳಗೆ ಬಂದು

"ನೀನು ಶುದ್ಧ ಪೆಚ್ಚಿಕಣೇ ಅಚ್ಚಮ್ಮ. ನಿನಗೆ ಸ್ವಲ್ಪವೂ ವಿವೇಕವಿಲ್ಲ."

"ಏಕಮ್ಮ."

"ಮಗೂನ ಈಗ ನೀನು ಜತೆಯಲ್ಲಿ ಕರೆದುಕೊಂಡು ಹೋದರೆ ನಿನ್ನ ಸಂಸಾರ ನೆಟ್ಟಗಾಗುತ್ತದೆಯೋ ಹೇಳು. ಆಯಪ್ಪ ನೀನೂ ಜತೆಯಲ್ಲಿ ಮಾತ ನಾಡುತ್ತ ಕುಳಿತಿರುವಾಗ ಮಗು 'ಹೋ' ಎಂದು ಆರಂಭಿಸಿದರೆ ಆಯಪ್ಪನಿಗೆ ಎಷ್ಟು ಬೇಸರವಾಗುತ್ತದೆ."

"ನನ್ನ ಮಗು ಬಿಟ್ಟು ನನಗಿನ್ನೇನಿದೆ ಮುತ್ತಮ್ಮನವರೇ. ಇನ್ನು ನಾನು ಬಾಳಿ ಬದುಕಬೇಕಾದುದೆಲ್ಲಾ ಈ ಕಂದನಿಗಾಗಿ ಅಲ್ಲವೇ ?"

"ನಿನಗೇನೇ ಆಗಿರುವುದು ಧಾಡಿ. ಇನ್ನೂ ಚಿಕ್ಕಪುಟ್ಟನಳು ಮಕ್ಕ ಳಾಗುವ ವಯಸ್ಸು ಮಾರಿತೇನು–ಒಂದಲ್ಲ ನಾಲ್ಕಾಗುತ್ತದೆ ಯೋಚನೆ ಬಿಡು."

"ಅಮ್ಮ, ನೀವು ನಿಜವಾಗಿಯೂ ನನ್ನ ಭಾಗದ ದೇವರು. ನನಗೆ ಅನ್ನಬಟ್ಟೆ ಕೊಟ್ಟು, ರಕ್ಷಿಸಿ ಕಾಪಾಡಿದಿರಿ. ನೀವು ಆಶ್ರಯ ಕೊಡದಿದ್ದರೆ ನಾನು ಕೆರೆಯೋ ಭಾವಿಯೋ ಪಾಡುಕಿಕೊಳ್ಳಬೇಕಾಗಿತ್ತು. ಜನ್ಮಜನ್ಮಾಂ ತರಕ್ಕೂ ನಿಮ್ಮ ಉಪಕಾರ ತೀರಿಸಲಾರೆ."

"ಕಷ್ಟದಲ್ಲಿರೋ ಹೆಂಗಸಿಗೆ ಕಷ್ಟಕಂಡ ಹೆಂಗಸು ಸಹಾಯಮಾಡುವುದು ಯಾವ ದೊಡ್ಡ ವಿಷಯ. ಮನುಷ್ಯಜನ್ಮ ಹೊತ್ತದ್ದಕ್ಕೆ ಅಷ್ಟಾದರೂ ಮಾಡ ಬೇಡವೇ ?"

"ನನಗೊಂದು ದೊಡ್ಡ ಉಪಕಾರ ಮಾಡಬೇಕು."

"ಏನು ಹೇಳು."

"ನನ್ನ ಮಗುವಿಗೆ ವಿದ್ಯೆಕಲಿಸಿ. ತಿಂಗಳಿಗೆ ನಾನು ಕೈಯಲ್ಲಾದಷ್ಟು ಹಣ ಕಳಿಸುತ್ತ ಬರುತ್ತೇನೆ. ಅವಳು ದೊಡ್ಡವಳಾದ ಮೇಲೆ....ಈ ಬಾಳಿಗೆ ಮಾತ್ರ ನೂಕಬೇಡಿ. ಯಾವನಾದರೂ ಯೋಗ್ಯನನ್ನು ನೋಡಿ ಮದುವೆ ಮಾಡಿಕೊಡಿ."

"ನಾನು ಅದೇ ಯೋಚಿಸಿದ್ದೀನಿ ಅಚ್ಚಮ್ಮ. ಇದು ನಿನ್ನ ಮಗುವಲ್ಲ –

ನನ್ನ ಮಗು. ಇದರ ಬಾಳು ನೇರವಾಗುವುದಕ್ಕೆ ನಾನು ಸರ್ವಪ್ರಯತ್ನ ಮಾಡುತ್ತೇನೆ."

"ಖಂಡಿತವೇ ?"

"ಶ್ರೀ ರಾಮದೇವರ ಪಾದದಾಣೆ"

ಎಂದು ಮುತ್ತಮ್ಮ ಪ್ರಮಾಣಮಾಡಿದಳು.

"ಏಳು – ನಾಗರಾಜ ಬಂದುಬಿಡುತ್ತಾನೆ. ತಲೆಬಾಚಿಕೊಂಡು ಹೊರಡಲು ಸಿದ್ಧಳಾಗು"

ಎಂದು ಮುತ್ತಮ್ಮ ಎಚ್ಚರಿಸಿದಳು.

ಅಚ್ಚಮ್ಮ ಹೊರಗೆ ಹೊರಡುವ ಸಿದ್ಧತೆ ಮಾಡಿಕೊಳ್ಳುತ್ತಿರುವಲ್ಲಿ ನಾಗಿ, ವೆಂಕಟಿ ಇಬ್ಬರೂ ಬಂದರು. ಜತೆಯಲ್ಲಿ ಒಬ್ಬಳು ಹೊಸಬಳನ್ನು ಕರೆದು ಕೊಂಡು ಬಂದಿದ್ದರು. ಅವರು ಮುತ್ತಮ್ಮನನ್ನು ಮಾತನಾಡಿಸಿ ಅಚ್ಚಮ್ಮನ ರೂಮಿಗೆ ಬಂದು

"ಇದೇನೇ ಅಕ್ಕ – ಹೊರಟಿರುವೆ."

"ಸ್ವಲ್ಪ ಹೊರಗೆ ಹೋಗಬೇಕಾಗಿದೆ ನಾಗೂ....ಇವಳು ಯಾರು ?"

"ಬಾಲು – ನಮ್ಮ ಮನೆ ಮಗ್ಗುಲಮನೆಗೆ ಹೊಸದಾಗಿ ಬಾಡಿಗೆಗೆ ಬಂದಿದ್ದಾಳೆ."

"ಗಂಡ ಇದ್ದಾನೆಯೇ ?"

"ಇದ್ದಾನೆ"

"ಇಲ್ಲಿಗೇಕೆ ಕರೆದುಕೊಂಡು ಬಂದೆ."

"ತಿಳಿದೇ ಇದೆಯಲ್ಲಾ – ಗಂಡ ತಂದು ಹಾಕುವುದು ಸಾಲದು."

ಅಚ್ಚಮ್ಮ ದೀರ್ಘವಾದ ನಿಟ್ಟುಸಿರೊಂದನ್ನು ಬಿಟ್ಟಳು. ಹೆಚ್ಚು ಮಾತಿಗೆ ಹೋಗಲಿಲ್ಲ

ಮುತ್ತಮ್ಮ ಒಳಗೆ ಬಂದವಳು ವೆಂಕಟಿ, ನಾಗೂಗೆ

"ಅಚ್ಚಮ್ಮ ಎಲ್ಲೀಗೆ ಹೊರಟಿದ್ದಾಳೆ ಕೇಳಿದ್ರೇನೇ ?"

"ಎಲ್ಲೀಗೆ ಅಚ್ಚಮ್ಮ."

"ಯಜಮಾನರ ಮನೆಗೆ – ಸಾಗರಕ್ಕೆ"

ವೆಂಕಟಿ, ನಾಗು ಒಬ್ಬರ ಮುಖ ಒಬ್ಬರು ನೋಡಿಕೊಂಡರು.

"ಈಗವಳಿಗೇನಮ್ಮ ಕಡಿಮೆ – ಸಾಹುಕಾರಿತಿ."

"ಅಕ್ಕಾ – ನಿನ್ನ ಗುರುತಾಗಿ ನಮಗೇನೂ ಕೊಡುವುದಿಲ್ಲವೇನೇ ?"

ಎಂದು ವೆಂಕಟಿ, ನಾಗೂ ಅಂಗಲಾಚಿದರು.

"ಇಲ್ಲೇ ಇರುತ್ತೀರಲ್ಲಾ – ನಾನು ಪೇಟೆಗೆ ಹೋಗಿ ಬರುತ್ತೇನೆ."

ಎಂದು ಅಚ್ಚಮ್ಮ ಹೇಳಿದಳು.

ನಾಗರಾಜ ಟ್ಯಾಕ್ಸಿ ತೆಗೆದುಕೊಂಡು ಬಂದ. ಅಚ್ಚಮ್ಮ ಅವನ ಜತೆ ಟ್ಯಾಕ್ಸಿಯಲ್ಲಿ ಹೋದುದನ್ನು ಕಂಡು ವೆಂಕಟಿ, ನಾಗೂ ಹೊಟ್ಟೆಯಲ್ಲಿ ತಳಮಳ ವಾಯಿತು. ವೆಂಕಟಿ ಮುತ್ತಮ್ಮನನ್ನು

"ಅಮ್ಮ – ನನಗೂ ಅಂಥದು ಏನಾದರೂ ಮಾಡಬಾರದೇ ?"

"ನಿನಗೆ ! ನಿನ್ನ ಮೂತಿ ಯಾರು ಕಟ್ಟಿಕೊಳ್ಳುತ್ತಾರೆಯೋ ?"

ಎಂದು ಮುತ್ತಮ್ಮ ನಗುನಗುತ್ತಲೇ ಕಟುವಾಗಿ ನುಡಿದಳು. ವೆಂಕಟಿ, ನಾಗೂ ಅವಳ ಜತೆ ತಾವೂ ನಕ್ಕುಬಿಟ್ಟರು.

ಟ್ಯಾಕ್ಸಿ 'ನ್ಯೂ ಹಿಂದೂ ಹೋಟೆಲಿ'ನ ಮುಂದೆ ನಿಂತಿತು. ನಾಗರಾಜ ಅವಳನ್ನು ಶಿವರಾಯನ ರೂಮಿಗೆ ಕರೆದುಕೊಂಡು ಹೋದಾಗ, ಶಿವರಾಯ ಬಟ್ಟೆ ಹಾಕಿಕೊಳ್ಳುತ್ತಿದ್ದ.

ಅಚ್ಚಮ್ಮನಿಗೆ ಹಾರ್ದಿಕ ಸ್ವಾಗತ ಸಿಕ್ಕಿತು. ಶಿವರಾಯ ಹೋಟಲ್ ಮಾಣಿಯನ್ನು ಕರೆದು ಎಲ್ಲರಿಗೂ ಕಾಫಿ ತರಿಸಿದ. ನಾಗರಾಜ ಕಾಫಿ ಕುಡಿದು ಹೊರಗೆ ಎದ್ದುಹೋಗಿ ಬಾಗಿಲು ಮುಂದಕ್ಕೆ ಮಾಡಿಕೊಂಡ.

ಶಿವರಾಯ ಅಚ್ಚಮ್ಮನ ಬಳಿ ಬಂದು ಕುಳಿತು

"ದುಡ್ಡು ಬೇಕೆಂದೆಯಲ್ಲಾ, ಎಷ್ಟು ಬೇಕಾಗಿತ್ತು ?"

"ಸ್ವಲ್ಪ ಸೀರೆ, ಕುಪ್ಪಸ ತೆಗೆದುಕೊಳ್ಳಬೇಕಾಗಿತ್ತು."

"ಈಗ ನಿನಗೆ ಬೇಕಾದದ್ದು ನಾನು ತೆಗೆದುಕೊಡುತ್ತೇನಲ್ಲಾ."

"ನನಗಲ್ಲ....ಮುತ್ತಮ್ಮನ ಮನೆಯಲ್ಲಿ ಕೆಲವರ ಪರಿಚಯವಾಗಿದೆ – ನನ್ನಂಥ ನಿರ್ಭಾಗ್ಯರದು, ಅವರಿಗೆ."

"ಏನು ಬಟ್ಟೆಬರೆ ಬೇಕೋ ಈಗ ತೆಗೆದುಕೋ. ಹಿಡಿ, ಈ ಇನ್ನೂ ರೈವತ್ತು ಕೈಯಲ್ಲಿಟ್ಟುಕೊಂಡಿರು. ಬೇಕಾದ ಹಾಗೆ ಖರ್ಚುಮಾಡಿಕೋ. ನನಗೆ ಲೆಕ್ಕ ಒಪ್ಪಿಸಬೇಕಾಗಿಲ್ಲ."

"ಮುತ್ತಮ್ಮನಿಗೆ ಏನಾದರೂ ಕೊಡಬೇಕು."

"ಅದರ ಚಿಂತೆ ಬಿಡು. ನಾನು ಒಂದು ಸಾವಿರ ರೂಪಾಯಿ ಕೊಡಲು ಒಪ್ಪಿಕೊಂಡಿದ್ದೇನೆ."

"ಸಾವಿರ ರೂಪಾಯಿ! ನನ್ನಿಂದ ನಿಮಗೆಷ್ಟು ಖರ್ಚು."

"ಖರ್ಚು ಮಾಡುವಾಗ ಮಾಡಲೇಬೇಕು. ಹಣದ ಮುಖ ನೋಡುವುದಕ್ಕಾಗುತ್ತದೆಯೇ? ಸಾಯುವಾಗ ಹಣವನ್ನು ನಾವು ಜತೆಯಲ್ಲಿ ಹೊತ್ತು ಕೊಂಡು ಹೋಗುತ್ತೇವೆಯೇ?"

"ನೀವು ಮಾಡಿರುವ ಉಪಕಾರಕ್ಕೆ ನನ್ನ ಮೈಯ ಚರ್ಮ ತೆಗೆದು ಚಪ್ಪಲಿಮಾಡಿ ನಿಮ್ಮ ಪಾದಕ್ಕೆ ತೊಡಿಸಿದರೂ ಸಾಲದು."

"ಅಷ್ಟು ದೊಡ್ಡ ಮಾತು ನೀನು ಆಡಿದರೆ ನನಗೆ ವ್ಯಸನವಾಗುತ್ತದೆ."

"ನಾನು ಮಿತವಾಗಿ ಸಂಸಾರಮಾಡಿ ಖರ್ಚು ಮಿಗಿಸುತ್ತೇನೆ – ನನಗೆ ತಿಂಗಳಿಗೆ ಸ್ವಲ್ಪ ಹಣಕೊಡಲು ಸಾಧ್ಯವೇ?"

"ಎಷ್ಟು ಬೇಕಾದರೂ ತೆಗೆದುಕೋ."

"ನನ್ನ ಖರ್ಚು ಏನೂ ಇಲ್ಲ. ಮಗುವಿನ ಖರ್ಚಿಗೆ ತಿಂಗಳಿಗೆ ಸ್ವಲ್ಪ ಹಣ ಕಳಿಸಬೇಕೆಂದು ಆಸೆ."

"ಎಷ್ಟು ಕಳಿಸಬೇಕು ಹೇಳು – ನಾನೇ ಕಳಿಸಿಕೊಡುತ್ತೇನೆ. ನೀನು ಸಂತೋಷವಾಗಿದ್ದರೆ ಸಾಕು."

ಅಚ್ಚಮ್ಮ ಶಿವರಾಯನಿಗೆ ಮನಸ್ಸಿನಲ್ಲಿಯೇ ಸಹಸ್ರಾರು ವಂದನೆಗಳನ್ನ ರ್ಪಿಸಿದಳು.

ಶಿವರಾಯ ನಾಗರಾಜನನ್ನು ಕರೆದು 'ಡ್ರೈವರಿಗೆ ಕಾರ್ ಸ್ಟಾರ್ಟ್ ಮಾಡೆಂದು ಹೇಳು' ಎಂದು ತಿಳಿಸಿದ.

ಮೂವ್ವರೂ ಚಿಕ್ಕಪೇಟೆಗೆ 'ಧನಲಕ್ಷ್ಮೀ ಸಿಲ್ಕ್ ಮಾರ್ಟ'ನ ಬಳಿಗೆ ಬಂದರು.

ಶಿವರಾಯನ ಇಚ್ಛೆಯಂತೆ ಅಂಗಡಿಯವರು ನಾನಾ ಬಗೆಯ ಸೀರೆಗಳನ್ನು ತೆಗೆದು ಹರಡಿದರು. ಶಿವರಾಯ ನಾಲ್ಕು ಧರ್ಮಾವರದ ಸೀರೆಗಳನ್ನಾಯ್ದ.

"ಎಲ್ಲಾ ಭಾರಿ ಆಯಿತಲ್ಲಾ. ನಿತ್ಯ ಉಡುವುದಕ್ಕೆ ಮಡಿಸೀರೆ ಮುಖ್ಯ ವಾಗಿ ಬೇಕಾಗಿತ್ತು."

ಅಂಗಡಿಯವರು ವಾಯಿಲ್ ಸೀರೆಗಳನ್ನು ತೋರಿಸಿದರು. ಅಚ್ಚಮ್ಮ ನಾಲ್ಕು ಸೀರೆ ಆರಿಸಿಕೊಂಡಳು. ಧರ್ಮಾವರದ ಸೀರೆಗಳಿಗೊಪ್ಪುವ ಕಣಗಳೂ, ವಾಯಿಲ್ ಸೀರೆಗಳಿಗೊಪ್ಪುವ ಚೀಟಿಗಳೂ ಆರಿಸಿದ್ದಾಯಿತು.

ಅಚ್ಚಮ್ಮ ಎಂಟು ಗಜದ ಧರ್ಮಾವರದ ಸೀರೆಯೊಂದನ್ನೂ ಸಾಧಾರಣದ ಎರಡು ಧರ್ಮಾವರದ ಸೀರೆಗಳನ್ನೂ ಅವುಗಳಿಗೊಪ್ಪುವ ಕಣಗಳನ್ನೂ ಆಯ್ದಳು.

ಶಿವರಾಯ ನಾಗರಾಜನನ್ನು ಕರೆದು

"ನಿನಗೇನು ಬೇಕು ತೆಗೆದುಕೋ"

ಎಂದರು. ನಾಗರಾಜ ಕೋಟಿಗೆ ಎರಡು ಸರ್ಜ್ ತುಂಡುಗಳನ್ನು ಹರಿಸಿ, ಎರಡು ಜತೆ ಫಿನ್ಲೆ ಪಂಚೆಗಳನ್ನೂ, ನಾಲ್ಕು ಷರಟಿನ ತುಂಡುಗಳನ್ನೂ ಆರಿಸಿದ.

ಶಿವರಾಯ ಎರಡು ಜತೆ ಕಲ್ಲೀಕೋಟೆಯ ಮಗ್ಗಲು ಹಾಸಿಗೆಯನ್ನೂ, ಎರಡು ಜತೆ ಬಿಳಿ ಟ್ವಿಲ್ ಮಗ್ಗಲು ಹಾಸಿಗೆಯನ್ನೂ ಆರಿಸಿದ.

ಮಗುವಿಗೆ ಕೆಲವು ಸಿಲ್ಕ್ ತುಂಡುಗಳನ್ನು ಅಚ್ಚಮ್ಮ ಹರಿಸಿದಳು.

"ಇನ್ನೇನಾದರೂ ಬೇಕಾಗಿತ್ತೇನು"

ಎಂದು ಶಿವರಾಯ ಕೇಳಿದ.

'ಏನೂ ಬೇಡ' ವೆಂದು ಅಚ್ಚಮ್ಮ ಹೇಳಲು ಅಂಗಡಿಯವರಿಗೆ ಬಿಲ್ ಹಾಕಲು ಶಿವರಾಯ ಅಪ್ಪಣೆಕೊಟ್ಟ. ಅಂಗಡಿಯವರು ಬಟ್ಟೆಯ ಗಂಟು ಕಟ್ಟಿ, ಒಂಭೈನೂರ ಅರವತ್ತು ನಾಲ್ಕು ರೂಪಾಯಿಗೆ ಒಂದು ಬಿಲ್ ಕೊಟ್ಟರು.

ಶಿವರಾಯ ಹಣಕೊಟ್ಟ. ಅಂಗಡಿಯವರು ಕಾರಿಗೆ ಬಟ್ಟೆಯ ಮೂಟೆ ಕಳಿಸಿಕೊಟ್ಟರು.

ಕಾರಿನಲ್ಲಿ ಬಂದು ಕುಳಿತಮೇಲೆ ಶಿವರಾಯ

"ಇನ್ನೇನಾದರೂ ಬೇಕಾಗಿತ್ತೇನು?"

ಎಂದು ಕೇಳಿದ.

"ಸ್ವಲ್ಪ ಬೆಳ್ಳಿಯ ಸಾಮಾನು ಬೇಕಾಗಿತ್ತು"

ಎಂದು ಅಚ್ಚಮ್ಮ ಹೇಳಿದಳು.

ಎವರಾಯ ಡ್ರೈವರಿಗೆ

"'ರಾಜರಾಜೇಶ್ವರಿ ಜ್ಯೂಯಲರಿ ಮಾರ್ಟ'ನ ಬಳಿ ಹೋಗಪ್ಪ"

ಎಂದ.

ಬೆಳ್ಳಿಯ ಅಂಗಡಿಯಲ್ಲಿ ಅಚ್ಚಮ್ಮ ಒಂದು ತಟ್ಟೆ, ಅದಕ್ಕೆರಡು ಬಟ್ಟಲು ವ್ಯಾಪಾರಮಾಡಿದಳು. ಅಂಗಡಿಯವರು ತೂಕಮಾಡಿ ನೂರೈವತ್ತು ರೂಪಾಯಿಗೆ ಬಿಲ್ ಹಾಕಿದರು. ಅಚ್ಚಮ್ಮ ತನ್ನಲ್ಲಿದ್ದ ಹಣ ಕೊಡಹೋದಳು. ಶಿವರಾಯ ಅದಕ್ಕೆ ಅವಕಾಶಕೊಡದೆ ಆ ಬಿಲ್ ಹಣವನ್ನೂ ತಾನೇ ಕೊಟ್ಟ.

ವ್ಯಾಪಾರ ಮುಗಿದಂತಾಯಿತು. ಕಾರು ಬಂದು ಹೊಟೇಲಿನ ಬಳಿ ನಿಂತಿತು. ಮೂವರೂ ಬಂದು ಶಿವರಾಯನ ರೂಮಿನಲ್ಲಿ ಕುಳಿತರು. ಶಿವರಾಯ ಮತ್ತೆ ಕಾಫಿ ತರಿಸಿ ಎಲ್ಲರಿಗೂ ಕೊಟ್ಟು ತಾನೂ ಕುಡಿದ.

"ನೀವು ಈಗ ನನ್ನ ಜತೆ ಬರುವುದಿಲ್ಲವೇ?"

ಎಂದು ಅಚ್ಚಮ್ಮ ಕೇಳಿದಳು.

"ಇಲ್ಲ – ನೀನು ಹೋಗು. ಗಂಟೆ ಈಗಲೆ ಒಂದಾಯಿತು. ನಾನು ನಾಲ್ಕು ಗಂಟೆಗೆ ಬರುತ್ತೇನೆ. ನನ್ನ ಜತೆ ಹೊರಟುಬಿಡುವೆಯಂತೆ."

"ಬಟ್ಟೆಯ ಗಂಟು ಇಲ್ಲೇ ಇರಲಿ. ನೀವು ಬರುವಾಗ ತೆಗೆದುಕೊಂಡು ಬನ್ನಿ."

"ಬೇಡ – ಜತೆಯಲ್ಲಿ ತೆಗೆದುಕೊಂಡು ಹೋಗು"

ಎಂದು ಶಿವರಾಯ ಅಚ್ಚಮ್ಮ, ನಾಗರಾಜನನ್ನು ಟ್ಯಾಕ್ಸಿಯಲ್ಲಿ ಬಟ್ಟೆ ಗಂಟನೊಂದಿಗೆ ಕಳಿಸಿಕೊಟ್ಟ.

ಅಚ್ಚಮ್ಮ ಮನೆಯೊಳಗೆ ಕಾಲಿಟ್ಟಕೂಡಲೆ ಮುತ್ತಮ್ಮ, ನಾಗು, ವೆಂಕಟ ಅವಳನ್ನು ಮುತ್ತಿಕೊಂಡರು. ನಾಗರಾಜ ಕಾರಿನಿಂದ ಗಂಟುತಂದು ಅಚ್ಚಮ್ಮನ ರೂಮಿನಲ್ಲಿಟ್ಟ.

"ಏನು ತಂದೆಯಮ್ಮ"

ಎಂದು ಮುತ್ತಮ್ಮ ಕೇಳಿದಳು.

"ಅವರು ನಾಲ್ಕು ಗಂಟೆಗೆ ಬರುತ್ತಾರೆ. ಆಗ ಅವರೇ ಹೇಳುತ್ತಾರೆ. ಅಲ್ಲಿಯವರೆಗೆ ಗಂಟು ಬಿಚ್ಚುವುದು ಬೇಡ"

"ಹಾಗೇ ಆಗಲಿ"

ಎಂದು ಮುತ್ತಮ್ಮ ಒಪ್ಪಿಕೊಂಡಳು.

ಎಲ್ಲರ ಊಟವಾಯಿತು. ಮುತ್ತಮ್ಮ ಸಣ್ಣ ಪ್ರಮಾಣದ ಔತಣದ ಅಡಿಗೆ ಮಾಡಿದ್ದಳು. ಶಾವಿಗೆ ಖೀರು, ನಿಂಬೇಕಾಯಿ ಅನ್ನ, ಆಂಬೊಡೆ. ಊಟ ಮುಗಿದ ಮೇಲೆ ಎಲ್ಲರೂ ತಾಂಬೂಲ ಹಾಕಿಕೊಂಡು ಕುಳಿತಿದ್ದಲ್ಲಿಯೇ ತೋಳನ್ನು ತಲೆದಿಂಬು ಮಾಡಿಕೊಂಡು ಮಲಗಿದರು.

ಅಚ್ಚಮ್ಮ ಮಗುವನ್ನು ಪಕ್ಕದಲ್ಲಿ ಮಲಗಿಸಿಕೊಂಡು ಮಲಗಿದಳು. ದುಃಖ ಉಮ್ಮಳಿಸಿ ಬಂತು. ಗಟ್ಟಿಯಾಗಿ ಅತ್ತರೆ ಮುತ್ತಮ್ಮನಿಗೆ ಎಚ್ಚರ ವಾಗುವುದೆಂದು ದುಃಖವನ್ನು ಅಡಗಿಸಿಕೊಂಡಳು.

ಎಲ್ಲರೂ ಏಳುವ ಹೊತ್ತಿಗೆ ನಾಲ್ಕು ಗಂಟೆಯಾಯಿತು. ನಾಗರಾಜ ಹೊಟೇಲಿನಿಂದ ಕಾಫಿ ತಂದುಕೊಟ್ಟ. ಎಲ್ಲರೂ ತಲೆಬಾಚಿಕೊಂಡು, ಮುಖ ತೊಳೆದುಕೊಂಡು, ಹಣೆಗಿಟ್ಟುಕೊಂಡರು.

ಸುಮಾರು ನಾಲ್ಕೂವರೆ ಗಂಟೆಗೆ ಶಿವರಾಯ ಬಂದ. ಮನೆತುಂಬ ಜನವಿದ್ದುದನ್ನು ನೋಡಿ ಶಿವರಾಯ, ಅಚ್ಚಮ್ಮನಿಗೆ

"ಯಾರು ಯಾರೋ ಬಂದಿದ್ದಾರೆ !"

"ಅವರೆಲ್ಲಾ ಈ ಮನೆಗೆ ಸಂಬಂಧಪಟ್ಟವರೇ"

ಮುತ್ತಮ್ಮ ಒಳಗೆ ಬಂದು ಕೇಳಿದಳು.

"ಊಟಕ್ಕೆ ಬರಲೇ ಇಲ್ಲವಲ್ಲಪ್ಪಾ. ಬಡವರ ಮನೆಯಲ್ಲಿ ಊಟ ಮಾಡಬಾರದೇನು ?"

"ಇಲ್ಲಮ್ಮ. ರಾತ್ರೀಗೆ ಹೊರಡಬೇಕು. ಕೈತುಂಬ ಕೆಲಸ."

ಶಿವರಾಯನ ದೃಷ್ಟಿ ಮೂಲೆಯಲ್ಲಿದ್ದ ಗಂಟಿನಕಡೆ ಹೋಯಿತು.

"ಗಂಟು ಹಾಗೇ ಇಟ್ಟಿದ್ದೀಯಲ್ಲಾ ಅಚ್ಚಾ"

"ನೀವು ಬರಲಿ ಎಂದು ಸುಮ್ಮನಿದ್ದೆ."

"ನಾನೇಕೆ ಬರಬೇಕು ಇದಕ್ಕೆ. ಅವರವರದು ಅವರವರಿಗೆ ಕೊಡ ಬೇಕಾಗಿತ್ತು."

ಅಚ್ಚಮ್ಮ ಗಂಟನ್ನೆತ್ತಿ ಶಿವರಾಯನ ಮುಂದಿಟ್ಟು ಬಿಚ್ಚಿದಳು. ಕೈಗೆ ಮುತ್ತಮ್ಮನಿಗಾಗಿ ತಂದಿದ್ದ ಸೀರೆ, ಕಣ ಎತ್ತಿಕೊಂಡು

"ನಾಗರಾಜ, ಒಂದು ತಟ್ಟೆ ತೆಗೆದುಕೊಂಡು ಬಾ"

ಎಂದಳು. ನಾಗರಾಜ ಒಳಗಿನಿಂದ ಒಂದು ಬೆಳ್ಳಿ ತಟ್ಟೆ ತಂದು ಅಚ್ಚಮ್ಮನ ಕೈಗಿತ್ತ. ಅಚ್ಚಮ್ಮ ಅದರಲ್ಲಿ ಸೀರೆ, ಕಣ ಇಟ್ಟು ಶಿವರಾಯನ ಕೈಗಿತ್ತಳು. ಶಿವರಾಯ ತೆಗೆದುಕೊಂಡು, ಪರ್ಸ್ ತೆಗೆದು ನೂರು ರೂಪಾಯಿಯ ಹತ್ತುನೋಟು ಅದರ ಮೇಲಿಟ್ಟು

"ಮುತ್ತಮ್ಮ – ತೆಗೆದುಕೋ"

ಎಂದ. ಮುತ್ತಮ್ಮ ಕೃತಜ್ಞತೆಯಿಂದ ಸ್ವೀಕರಿಸಿದಳು. ಶಿವರಾಯ

"ಸೀರೆ ಉಟ್ಟುಕೊಂಡು ಬಿಡು"

ಎಂದ. ಮುತ್ತಮ್ಮ ಸೀರೆ – ಹಣ ತೆಗೆದುಕೊಂಡು ಒಳಗೆ ಹೋದಳು. ಅಚ್ಚಮ್ಮ ನಾಗು, ವೆಂಕಟೆಯನ್ನು ಕರೆದು ಶಿವರಾಯನ ಕೈಯಿಂದಲೇ ಅವರಿಗೆ ಸೀರೆ, ಕುಪ್ಪಸ ಕೊಡಿಸಿದಳು. ಅವರಿಬ್ಬರೂ ಶಿವರಾಯನಿಗೆ ಕಾಲು ಮುಟ್ಟಿ ನಮಸ್ಕಾರಮಾಡಿದರು. ನಾಗರಾಜನಿಗೆ ತಂದಿದ್ದ ಬಟ್ಟೆಯನ್ನು ಅವನಿಗೆ ಕೊಟ್ಟದ್ದೂ ಆಯಿತು. ಅಚ್ಚಮ್ಮನಿಗೆ ಥಟ್ಟನೆ ಏನೋ ನೆನಪಾಯಿತು. ಶಿವರಾಯನ ಕೈಗೆ ತನ್ನ ಒಂದು ಹೊಸ ವಾಯಿಲ್ ಸೀರೆ, ಒಂದು ರೇಷ್ಮೆ ಕಣ ಕೊಟ್ಟು ಹೊರಗೆಹೋಗಿ ಬಾಲುವನ್ನು ಕರೆದುಕೊಂಡು ಬಂದು ಅವಳಿಗೆ ಕೊಡಿಸಿದಳು. ಬಾಲು ಆಶ್ಚರ್ಯದಿಂದ ಇಬ್ಬರ ಮುಖನೋಡಿ, ಇಬ್ಬರಿಗೂ ಕಾಲುಮುಟ್ಟಿ ನಮಸ್ಕಾರಮಾಡಿದಳು.

ಈ ವೇಳೆಗೆ ಮುತ್ತಮ್ಮ ತನ್ನ ಹೊಸ ಸೀರೆ ಧರಿಸಿ ಬಂದಳು.

"ಸೀರೆ ಒಪ್ಪಿಗೆಯಾಯಿತೇ ಮುತ್ತಮ್ಮ" ಎಂದು ಶಿವರಾಯ ಕೇಳಿದ.

"ಇಷ್ಟು ಭಾರಿ ಏಕಪ್ಪಾ. ಸಾಧಾರಣವಾದದ್ದು ತಂದಿದ್ದರೆ ಸಾಕಾಗಿತ್ತು."

"ನನಗೇನು ತಿಳಿಯುತ್ತದಮ್ಮ. ಎಲ್ಲಾ ಅಚ್ಚಮ್ಮನ ಆಯ್ಕೆ."

ಅಚ್ಚಮ್ಮ ಬೆಳ್ಳಿಯ ತಟ್ಟೆ, ಬಟ್ಟಲು, ಸಿಲ್ಕ್ ಪೀಸುಗಳನ್ನು ಮುತ್ತಮ್ಮನ ಕೈಯಲ್ಲಿಟ್ಟು

"ಇವು – ಮಗುವಿಗೆ"

ಎಂದಳು.

ಬಾಲೂ ಹೊತ್ತಾಯಿತೆಂದು ಚಡಪಡಿಸಿದಳು. ಮುತ್ತಮ್ಮ ಹೊರಗೆ ಹೋಗಿ 'ನಾಳೆ ಖಂಡಿತ ಬಾ' ಎಂದು ಅವಳಿಗೆ ಹೇಳಿದಳು. ಅಚ್ಚಮ್ಮ ವೆಂಕಟೆ, ನಾಗು, ಬಾಲುವನ್ನು ಕಳಿಸಿಬಂದಳು.

" ನಿನ್ನ ಬಟ್ಟೆಬರೆ ಎಲ್ಲಾ ಕಟ್ಟಿಕೊಂಡೆಯಾ ? "

ಎಂದು ಶಿವರಾಯ ಕೇಳಿದ.

" ನನ್ನದೇನಿದೆ. ನಾಲ್ಕು ಹಳೆಯ ತುಂಡುಗಳು."

ಎಂದು ಹೇಳಿ ಅಚ್ಚಮ್ಮ ತನ್ನ ಬಟ್ಟೆಗಳನ್ನು ಕಟ್ಟಿಕೊಂಡಳು. ಹೊಸ ಬಟ್ಟೆಗಳನ್ನೂ ಗಂಟಿಗೆ ಸೇರಿಸುತ್ತಿರುವುದನ್ನು ಕಂಡು ಶಿವರಾಯ

" ನೀನೂ ಹೊಸಸೀರೆ ಉಟ್ಕೊಕೋ "

ಎಂದ.

" ಊರಿನಲ್ಲಿ ಉಟ್ಕೊಕೊಂಡರೆ ಆಗದೇ ? "

" ಪ್ರಯಾಣ ಮಾಡಬೇಕು. ಇಲ್ಲೇ ಉಟ್ಕೊಕೋ "

ಎಂದು ಹೇಳಿದ. ಅವನ ಇಚ್ಛಾನುಸಾರ ಅಚ್ಚಮ್ಮ ಹೊಸಸೀರೆ ಯೊಂದನ್ನುಟ್ಟು ಬಂದಳು.

ಶಿವರಾಯ ಮುತ್ತಮ್ಮನನ್ನುದ್ದೇಶಿಸಿ

" ಇನ್ನೇನು ಮುತ್ತಮ್ಮ. ಎಲ್ಲಾ ಮನಸ್ಸಿಗೆ ಸಮರ್ಪಕವಾಗಿ ಆಯಿತೋ ? " ಎಂದು ಕೇಳಿದ.

" ಯಾವ ಬಾಯಲ್ಲಿ ಇಲ್ಲವೆಂದು ಹೇಳಲಪ್ಪಾ. ನೀನು ಧರ್ಮರಾಯ."

" ಕಾಗದ ಬರೆಸುತ್ತಿರು. ಮಗುವಿನ ಯೋಗಕ್ಷೇಮ ತಿಳಿಸುತ್ತಿರು."

" ಖಂಡಿತವಾಗಿ ಬರೆಸುತ್ತೇನೆ."

" ಮಗುವಿನ ಖರ್ಚಿಗೆ ಪ್ರತಿತಿಂಗಳೂ ನಾನು ಸ್ವಲ್ಪ ಹಣ ಕಳಿಸಿ ಕೊಡುತ್ತೇನೆ."

" ಹಾಗೇ ಆಗಲಪ್ಪಾ."

ಎಂದಳು.

ಹೊರಡುವ ವೇಳೆ ಸಮೀಪಿಸಿತೆಂದು ಶಿವರಾಯ ಸೂಚಿಸಿದ. ನಾಗರಾಜ ಅಚ್ಚಮ್ಮನ ಬಟ್ಟೆಯ ಗಂಟನ್ನು ತೆಗೆದುಕೊಂಡು ಹೋಗಿ ಟ್ಯಾಕ್ಸಿಯಲ್ಲಿಟ್ಟು ಬಂದ.

ಅಚ್ಚಮ್ಮನ ದುಃಖದ ಕಟ್ಟೆಯೊಡೆಯಿತು. ಮುತ್ತಮ್ಮ ಅವಳನ್ನಪ್ಪಿ ಬಿಕ್ಕಿಬಿಕ್ಕಿ ಅತ್ತುಬಿಟ್ಟಳು. ಅಚ್ಚಮ್ಮ ಮಗುವನ್ನೆತ್ತಿಕೊಂಡು ಅಪ್ಪಿ, ಮುದ್ದಾಡಿ ಮುತ್ತಮ್ಮನ ಕೈಯಲ್ಲಿಟ್ಟಳು.

ಟ್ಯಾಕ್ಸಿ ನಿಂತಿದ್ದಲ್ಲಿಗೆ ಮುತ್ತಮ್ಮ ಹೋಗಿ ಅಚ್ಚಮ್ಮನನ್ನು ಕಳಿಸಿ ಬಂದಳು. ನಾಗರಾಜನೂ ಜತೆಯಲ್ಲಿ ಹೋದ.

ಮುತ್ತಮ್ಮ, ಮಗು ಕಣ್ಣಿಗೆ ಕಾಣುವವರೆಗೆ ಅಚ್ಚಮ್ಮ ಅವರನ್ನು ನೋಡುತ್ತಿದ್ದಳು. ಕಾರು ಒಂದು ತಿರುವಿನಲ್ಲಿ ತಿರುಗಲು ಅವರು ಕಾಣದಾದರು. ಹಿಂದಿನ ನೋಟ ಬಿಟ್ಟು ಮುಂದೆ ನೋಡಿದಳು. ಒಂದು ಬಾಳು ಕಳೆದು ಹೋಯಿತು. ಅದರಲ್ಲಿದ್ದ ಸುವರ್ಣ ರೇಖೆಯೆಂದರೆ ಮಗು. ಅದೂ ತನ್ನ ಪಾಲಿಗೆ ಇಲ್ಲವಾಯಿತು. ಮುಂದೆ — ಮುಂದೆ ಹೊಸಬಾಳು ಕಾದಿದೆ. ಅದೆಂತೋ? ಹೇಗೋ?

ಹೊಟೇಲಿನ ತನ್ನ ರೂಮಿನಲ್ಲಿ ನಾಗರಾಜ, ಅಚ್ಚಮ್ಮನನ್ನು ಕೂಡಿಸಿ ಶಿವರಾಯ ಹೊಟೇಲ್ ಲೆಕ್ಕ ಮುಗಿಸಿಬರಲು ಮ್ಯಾನೇಜರ ಕಛೇರಿಯ ಕಡೆಗೆ ಹೋದ.

ನಾಗರಾಜ ಸಪ್ಪೆ ಮುಖ ಹಾಕಿಕೊಂಡು ಕುಳಿತಿದ್ದ. ಪ್ರಬಲ ಚಿಂತೆ ಅವನ ಮನಸ್ಸನ್ನು ಮುತ್ತಿದಂತೆ ಕಾಣಬರುತ್ತಿತ್ತು. ಅಚ್ಚಮ್ಮ ಅವನನ್ನೇ ದಿಟ್ಟಿಸಿ ನೋಡಿ

"ಏನು ಚಿಂತೆ ನಾಗರಾಜ?"

ಎಂದು ಕೇಳಿದಳು.

"ಏನೋ ಬಿಡಮ್ಮ. ನೀನಂತೂ ಹೊರಟು ನಿಂತಿರುವೆ."

"ಹೋಗಬೇಕಲ್ಲಪ್ಪಾ. ಎಷ್ಟು ದಿನ ಅಮ್ಮನ ಕುತ್ತಿಗೆಗೆ ಗಂಟುಬಿದ್ದು ಅವಳಿಗೆ ಭಾರವಾಗಿರಬೇಕು."

"ನೀನೇನೂ ಭಾರವಾಗಿರಲಿಲ್ಲಮ್ಮ. ನೀನು ದುಡಿಯುತ್ತಿದ್ದದ್ದಕ್ಕೇ ನಾವೆಲ್ಲಾ ಅನ್ನ ಕಾಣುತ್ತಿದ್ದುದು."

"ನಾನು ಮಾಡಿದ್ದೇನು ಮಹಾ! ನನ್ನ ಸಂಕಟಸಮಯದಲ್ಲಿ ಅಮ್ಮ ಆಶ್ರಯಕೊಡದಿದ್ದರೆ ನನ್ನ ಗತಿ ಏನಾಗುತ್ತಿತ್ತು. ಅವಳ ಉಪಕಾರ ಎಂಟೆಂಟು ಜನ್ಮಕ್ಕೂ ಮರೆಯಲಾರೆ. ನೀನು ಮುಂದೇನು ಮಾಡುತ್ತೀ ನಾಗರಾಜ. ಹೀಗೇ ಎಷ್ಟು ದಿವಸ ಕಾಲ ತಳ್ಳುವೆ?"

"ಏನು ಮಾಡಬೇಕೋ ಒಂದೂ ತಿಳಿಯದು. ಕೈಯಲ್ಲಿ ಮೂರು ಕಾಸಿಲ್ಲ. ಏನು ಮಾಡುವುದು ಸಾಧ್ಯ?"

" ಈಗ ಅಮ್ಮನ ಹತ್ತಿರ ದುಡ್ಡಿದೆ. ತೆಗೆದುಕೊಂಡು ಒಂದು ಅಂಗಡಿ ಹಾಕಬಾರದೇ ? "

" ಅವಳು ಕಾಸಿನ ಮೇಲಿನ ಕಿಲುಬನ್ನೂ ನನಗೆ ತೋರಿಸುವುದಿಲ್ಲ. ಬೀಡಿಗೆ ಎರಡಾಣೆ ಬೇಕಾದರೆ ಅವಳ ಮುಂದೆ ನಾನು ಹಲ್ಲುಗಿಂಜಬೇಕು."

ಅಚ್ಚಮ್ಮ ಮರುಮಾತನಾಡದೆ ತನ್ನ ಉಡಿಯಲ್ಲಿದ್ದ ಇನ್ನೂರೈವತ್ತು ರೂಪಾಯಿಗಳನ್ನು ನಾಗರಾಜನ ಕೈಯಲ್ಲಿಟ್ಟಳು. ಅವನು ತನ್ನ ಕಣ್ಣನ್ನು ತಾನೇ ನಂಬದಾದ.

" ಇಷ್ಟುದುಡ್ಡು ನನಗೆ.... ಅವರು ಏನಾದರೂ ಅಂದರೆ ! "

" ನಾನು ಸಮಾಧಾನ ಹೇಳುತ್ತೇನೆ. ಯೋಚನೆಮಾಡಬೇಡ. ನನಗೊಂದು ಉಪಕಾರ ಮಾಡುವೆಯಾ ? "

" ಏನು ಹೇಳು. ಅಗತ್ಯವಾಗಿ ಮಾಡುತ್ತೇನೆ."

" ಪುಟ್ಟನನ್ನು ಸ್ವಲ್ಪ ನೋಡಿಕೋ. ಆಗಾಗ್ಗೆ ಅವಳ ಯೋಗಕ್ಷೇಮಕ್ಕೆ ಕಾಗದ ಬರೆಯುತ್ತಿರು. ನಾನು ಊರಿನಿಂದ ಆಗಾಗ್ಗೆ ಹಣ ಕಳಿಸುತ್ತಿರುತ್ತೇನೆ. ಅವಳಿಗೇನು ಬೇಕಾದರೂ ಕೊಡಿಸು."

" ಸಂತೋಷವಾಗಿ ಮಾಡುತ್ತೇನೆ – ಪುಟ್ಟನ ವಿಷಯ ನೀನೇನೂ ಯೋಚನೆ ಇಟ್ಟುಕೊಳ್ಳಬೇಡ."

ಶಿವರಾಯ ಹೊಟೇಲ್ ಲೆಕ್ಕ ಬಗೆಹರಿಸಿಕೊಂಡು ಬಂದ.

" ಊಟಮಾಡುವುದಿಲ್ಲವೇ " ಎಂದು ಕೇಳಿದ.

" ನನಗೆ ಹಸಿವಿಲ್ಲ – ನೀವು ಮಾಡಿ " ಎಂದಳು.

" ನನಗೂ ಹಸಿವಿಲ್ಲ. ನೀನು ಮಾಡುತ್ತೀಯೇನೋ ನಾಗರಾಜ."

" ಬೇಡಿ ಸ್ವಾಮಿ. ಮನೆಗೆ ಹೋಗುತ್ತೇನೆ "

ಎಂದು ಹೇಳಿದ.

" ಸಾಮಾನು ಟ್ಯಾಕ್ಸಿಗೆ ಹಾಕು "

ಎಂದು ಶಿವರಾಯ ಹೇಳಿದ.

ಶಿವರಾಯ, ಅಚ್ಚಮ್ಮ, ನಾಗರಾಜ ಮೂವ್ವರೂ ಸ್ಟೇಷನ್ನಿಗೆ ಬಂದರು. ಮೊದಲೇ ರಿಸರ್ವ್ ಆಗಿದ್ದ ತಾಳಗುಪ್ಪ ಬಂಡಿಯಲ್ಲಿ ಶಿವರಾಯ, ಅಚ್ಚಮ್ಮ ಕುಳಿತರು. ರೈಲು ಹೊರಟಿತು.

ಬೆಳಿಗ್ಗೆ ಹನ್ನೊಂದು ಗಂಟೆಗೆ ರೈಲು ಸಾಗರದ ನಿಲ್ದಾಣಕ್ಕೆ ಬಂದು ನಿಂತಿತು. ಶಿವರಾಯನ ಆಳು ಗಂಗ ಬಂದು ಸಾಮಾನು ಇಳಿಸಿಕೊಂಡು ಗಾಡಿಗೆ ಹಾಕಿದ.

ಶಿವರಾಯ ಅಚ್ಚಮ್ಮನೊಂದಿಗೆ ತನ್ನ ತೋಟದ ಮನೆಗೆ ಹೋದ.

ಮನೆಯೊಳಗೆ ಕಾಲಿಟ್ಟೊಡನೆಯೇ ಶಿವರಾಯ ಅಡಿಗೆ ಚೆನ್ನಮ್ಮನಿಗೂ, ಗಂಗನಿಗೂ ಅಚ್ಚಮ್ಮನ ಪರಿಚಯಮಾಡಿಕೊಟ್ಟ.

ಶಿವರಾಯನ ಮನೆ ಹಳೆಯಕಾಲದ ಹಳ್ಳಿಯ ಮನೆಯಾದರೂ ಭವ್ಯವಾಗಿತ್ತು. ಅಚ್ಚಮ್ಮನನ್ನು ಕರೆದೊಯ್ದು ಮನೆಯ ಪರಿಚಯಮಾಡಿಕೊಟ್ಟ.

ಅಚ್ಚಮ್ಮನ ಮನಸ್ಸಿಗೆ ವಿಶೇಷ ತೃಪ್ತಿ, ದುಃಖಗಳೆರಡೂ ಆಗಿದ್ದವು. ಶಿವರಾಯನ ಮನೆಯವರು, ಆಳುಕಾಳು ತನ್ನನ್ನು ಒಪ್ಪಿಕೊಳ್ಳುವರೇ – ತನ್ನ ಬಗ್ಗೆ ಗೌರವಾದರ ತೋರಿಸುವರೇ ಎಂದು ಅಚ್ಚಮ್ಮ ಚಿಂತೆ ಮಾಡಿದಳು.

ಸಾಗರ ಸೇರಿದ ಕೆಲವು ದಿವಸಗಳಲ್ಲಿ ಅಚ್ಚಮ್ಮ ಚೆನ್ನಮ್ಮನ ವಿಶ್ವಾಸ ಸಂಪಾದಿಸಿದಳು. ಗಂಗನ ಮನಸ್ಸನ್ನೂ ಚೆನ್ನಮ್ಮ ತಿದ್ದಿ ಅವನು ಅಚ್ಚಮ್ಮನ ವಿಷಯದಲ್ಲಿ ಗೌರವದಿಂದ ನಡೆಯುವಂತೆ ಮಾಡಿದಳು.

ಒಂದು ತಿಂಗಳು ಕಳೆಯಿತು. ಬೆಳಿಗ್ಗೆ ಎದ್ದು ತೋಟದ ಕಡೆ ಹೋಗಿದ್ದ ಶಿವರಾಯ ಹನ್ನೊಂದು ಗಂಟೆ ವೇಳೆಗೆ ಮನೆಗೆ ಬಂದ. ಅದೇ ತೈಲಾಭ್ಯಂಜನ ಮುಗಿಸಿ ಅಚ್ಚಮ್ಮ ಎಣ್ಣೆಗಂಟು ಹಾಕಿಕೊಂಡಿದ್ದಳು. ಪದ್ಧತಿಯಂತೆ ಹಣೆಗೆ ಏನನ್ನೂ ಇಟ್ಟುಕೊಂಡಿರಲಿಲ್ಲ.

ಶಿವರಾಯ ಬಂದು ಕುಳಿತುಕೊಂಡು ಕ್ಷಣಕಾಲ ಯೋಚಿಸಿ ತನ್ನ ಗಾಡ್ರೆಜ್ ಸೇಫ್ ತೆಗೆದು ಒಂದು ಸಣ್ಣ ಪೆಟ್ಟಿಗೆಯನ್ನೆತ್ತಿಕೊಂಡು ಅಚ್ಚಮ್ಮನನ್ನು ಕೂಗಿದ.

ಅಚ್ಚಮ್ಮ ಬಂದು ಎದುರಿಗೆ ನಿಂತಳು. ಶಿವರಾಯ ಅವಳಿಗೆ

"ಒಳಗೆ ಹೋಗಿ ಕುಂಕುಮದ ಭರಣಿ ತೆಗೆದುಕೊಂಡು ಬಾ"

ಎಂದು ಹೇಳಿದ. ಅಚ್ಚಮ್ಮ ದೇವರ ಮುಂದಿದ್ದ ಪಂಚವಾಳ ತಂದು ಶಿವರಾಯನ ಪಕ್ಕದಲ್ಲಿದ್ದ ಮೇಜಿನ ಮೇಲಿಟ್ಟಳು. ಶಿವರಾಯ ಕೈಗೆ ಕುಂಕುಮ ತೆಗೆದುಕೊಂಡು ಅಚ್ಚಮ್ಮನನ್ನು ಹತ್ತಿರ ಕರೆದು ಅವಳ ಹಣೆಗೆ ಕುಂಕುಮಹಚ್ಚಿ

"ಇನ್ನು ಮೇಲೆ ಎಂದಿಗೂ ಬರೀ ಹಣೆಯಲ್ಲಿರಬೇಡ. ನನಗೆ ಮಂಗಳ ವಲ್ಲ" ಎಂದ.

"ಏನು ಮಾಡಿಬಿಟ್ಟರಿ !"

"ಏನೂ ಇಲ್ಲ. ನಿನ್ನ ಕೈಹಿಡಿದ ಮೇಲೆ ಕುಂಕುಮವಿಡದಿದ್ದರಾಗುತ್ತ ದೆಯೇ ? ಇನ್ನು ಮೇಲೆ ಅರಶಿನ, ಕುಂಕುಮ, ಹೂವು ನೀನು ಧರಿಸಬೇಕು."

ಶಿವರಾಯನ ಸಲಹೆ ಕೇಳಿ ಅಚ್ಚಮ್ಮ ಬೆಚ್ಚಿಬಿದ್ದಳು. ಶಿವರಾಯ ತನ್ನ ಬಳಿಯಿದ್ದ ಸಣ್ಣ ಪೆಟ್ಟಿಗೆ ತೆಗೆದು ಅಚ್ಚಮ್ಮನ ಮುಂದೆ ಹಿಡಿದ.

"ಏನಿದು ?"

"ಕೈಗೆ ತೆಗೆದುಕೋ"

ಅಚ್ಚಮ್ಮ ಕೈಗೆ ತೆಗೆದುಕೊಂಡು ನೋಡಿದಳು. ಅದರಲ್ಲಿ ಒಂದು ಜತೆ ವಜ್ರದ ಬೆಂಡೋಲೆ, ಎರಡು ಚಿನ್ನದ ಸರ, ನಾಲ್ಕು ಜತೆ ಚಿನ್ನದ ಬಳೆ, ಒಂದು ವಜ್ರಕೆಂಪಿನ ಜಡೆಬಿಲ್ಲೆ ಇದ್ದವು.

"ಇವುಗಳನ್ನು ಧರಿಸಿಕೋ" ಎಂದ.

"ಯಾರದಿವು ?"

"ಯಾರದು – ನನ್ನದು !"

"ಇವುಗಳನ್ನು ಯಾರು ಹಾಕಿಕೊಳ್ಳುತ್ತಿದ್ದರು ?"

"ತೀರಿಕೊಂಡ ನನ್ನ ಹೆಂಡತಿ"

ಅಚ್ಚಮ್ಮ ಪೆಟ್ಟಿಗೆಯ ಮುಚ್ಚಳಮುಚ್ಚಿ ಅದನ್ನು ಕಣ್ಣಿಗೊತ್ತಿಕೊಂಡು ಶಿವರಾಯನ ಕೈಯಲ್ಲಿಟ್ಟು

"ಇವುಗಳನ್ನು ಧರಿಸುವ ಮಾತು ಹಾಗಿರಲಿ. ಮುಟ್ಟುವ ಯೋಗ್ಯ ತೆಯೂ ನನಗಿಲ್ಲ. ಇವು ನಿಮ್ಮ ಮಕ್ಕಳಿಗೆ ಸೇರಬೇಕಾದವು ನಿಮ್ಮ ಸೊಸೆಯರಿಗೆ ತಲುಪಿಸಿಬಿಡಿ. ಮಹಾ ಪತಿವ್ರತೆ ಧರಿಸುತ್ತಿದ್ದ ಆಭರಣ ನನ್ನಂಥ ಪಾಪಿಷ್ಠೆ ಮುಟ್ಟಬಾರದು. ನನಗೆ ಒಡವೆ ವಸ್ತ್ರ ಬೇಕಿಲ್ಲ – ನಿಮ್ಮ ವಿಶ್ವಾಸವೊಂದು ಶಾಶ್ವತವಾಗಿರಲಿ. ನಿಮ್ಮ ಪಾದ ಶಿಶ್ರೂಷೆ ಮಾಡಿಕೊಂಡು ಈ ಪಾಪಿಜನ್ಮ ಮುಗಿಸುತ್ತೇನೆ"

ಎಂದು ಶಿವರಾಯನ ಪಾದದ ಬಳಿ ಕುಳಿತು, ಅದನ್ನು ಮುಟ್ಟಿ ಕಣ್ಣಿಗೊತ್ತಿಕೊಂಡಳು. ಶಿವರಾಯನ ಕಣ್ಣಲ್ಲಿ ನೀರೂರಿತು. ಶಿವರಾಯ

ವಾದಮಾಡದೆ ಸಣ್ಣ ಪೆಟ್ಟಿಗೆಯನ್ನು ಮತ್ತೆ ತನ್ನ ಸೇಫಿನಲ್ಲಿಟ್ಟು ಬೀಗ ಹಾಕಿದ.

ಮತ್ತೆ ಒಂದು ತಿಂಗಳು ಕಳೆಯಿತು.

ಒಂದು ದಿನ ಶಿವರಾಯನಿಗೆ ಬೆಂಗಳೂರಿನಿಂದ ಒಂದು ಥಾಂಗಿ ಬಂತು. ಅದನ್ನು ಸ್ವೀಕರಿಸಿ, ಒಡೆದು, ಅಚ್ಚಮ್ಮನನ್ನು ಕರೆದು, ಅವಳ ಕೈಯಲ್ಲಿ ಥಾಂಗಿಯಲ್ಲಿದ್ದ ಸಣ್ಣ ಪೆಟ್ಟಿಗೆಯನ್ನಿಟ್ಟು

"ನೀನು ಹೇಳಿದ ಹಾಗೇ ಮಾಡಿದೆ. ಅವಳ ಒಡವೆ ಅವಳ ಸೊಸೆ ಮರಿಗೇ ತಲುಪಿಸಿದೆ. ಇವು ನಿನಗೆ"

ಎಂದು ಹೇಳಿದ.

ಅಚ್ಚಮ್ಮ ಪೆಟ್ಟಿಗೆ ಮುಚ್ಚಳ ತೆಗೆದು ನೋಡಿದಳು. ಅದರಲ್ಲಿ ಒಂದು ಜತೆ ವಜ್ರದೋಲೆ, ಎರಡು ಜತೆ ಚಿನ್ನದ ಬಳೆ, ಒಂದು ಅವಲಕ್ಕೀ ಸರ ಇದ್ದವು. ಅಚ್ಚಮ್ಮ ಅವುಗಳನ್ನು ಕೃತಜ್ಞತೆಯಿಂದ ಸ್ವೀಕರಿಸಿದಳು.

೪

ಶ್ರೀನಾಥನ ಕಾಗದಕ್ಕೆ ಮರುಟಪಾಲಿಗೇ ಉತ್ತರ ಬರಲಿಲ್ಲ. ಮೂರು ದಿವಸ ತಡವಾಗಿ ಬಂತು. ಕಮಲ ಏಕೆ ಉತ್ತರ ಬರೆಯಲಿಲ್ಲ – ಅವಳಿಗೆ ಮೈಯಲ್ಲಿ ಚೆನ್ನಾಗಿಲ್ಲವೇ – ಮನೆಯಲ್ಲಿ ಮತ್ತೇನಾದರೂ ಹಗರಣವಾಯಿತೇ ಎಂದು ಶ್ರೀನಾಥ ತರ್ಕಮಾಡಿದ. ಯಾವದಕ್ಕೂ ಸಮಾಧಾನ ಸಿಗಲಿಲ್ಲ.

ಕಾಗದಕ್ಕೆ ಕಾದ ಆವೇಗದಲ್ಲಿ ಶ್ರೀನಾಥನ ಮೈ ಬೆಚ್ಚಗಾಯಿತು. ಎರಡನೆಯ ದಿನ ರಾತ್ರಿ ಚೆನ್ನಾಗಿ ಜ್ವರವೇ ಬಂದುಬಿಟ್ಟಿತು.

ಜ್ವರತಪ್ತನಾಗಿ ಮಲಗಿ ತನ್ನ ಪರಿಸ್ಥಿತಿಯನ್ನು ಆಲೋಚನೆಮಾಡಿದ. ರತ್ನಂ ಅಂದು ಅಲ್ಲಿಯೇ ಮಲಗಿದ್ದ. ಶ್ರೀನಾಥ ರಾತ್ರಿಯೆಲ್ಲಾ ಬಡಬಡಿಸುವುದನ್ನು ಕಂಡು ರತ್ನಂಗೆ ಭಯವಾಯಿತು.

ರಾತ್ರಿ ನಡೆದುದನ್ನು ಶ್ರೀನಾಥನಿಗೆ ಮಾರನೆಯ ಬೆಳಿಗ್ಗೆ ರತ್ನಂ

ವಿವರಿಸಿದ. ಶ್ರೀನಾಥನಿಗೆ ತುಂಬ ನಾಚಿಕೆಯಾಯಿತು. ತನ್ನ ದೌರ್ಬಲ್ಯ ಕಂಡು ಮನಸ್ಸಿಗೆ ತುಂಬ ಪರಿತಾಪವಾಯಿತು.

'ನಾನು ಕಲಾವಿದನಲ್ಲವೇ? ಸರಸ್ವತೀ ಆರಾಧಕನಲ್ಲವೇ? ಯಾರಿಗೂ ಅನುಗ್ರಹಿಸದಿರುವ ಒಂದು ಘನವಾದ ವರವನ್ನು ವಾಗ್ದೇವಿ ನನಗೆ ಅನುಗ್ರಹಿಸಿದ್ದಾಳಲ್ಲಾ. ಆಕೆಯನ್ನು ಮರೆತು – ಆಕೆಯ ಸೇವೆಯನ್ನು ಮರೆತು ಒಂದು ಸಾಮಾನ್ಯ ಹೆಣ್ಣಿಗೆ ಹಲುಬುತ್ತಿರುವೆನಲ್ಲಾ. ನನ್ನ ಸಮಸ್ತ ಸುಖ – ಪ್ರಗತಿ – ಪ್ರತಿಭೆಯೆಲ್ಲಾ ಕಮಲಳ ಪಾದತಲದಲ್ಲಿ ನಿಂತು ಗೋಳಾಡಬೇಕೆ? ಒಂದು ಸಾಮಾನ್ಯ ಹೆಣ್ಣಿನ ವಿಷಯಾಸಕ್ತಿಗೆ ನನ್ನ ತಪಸ್ಸು, ವಿದ್ಯೆ, ಕ್ರಿಯಾಚೇತನವನ್ನು ಬಲಿಗೊಡಬೇಕೇ? ಭವ್ಯ ವಿಚಾರಗಳು ಈಸಾಡುವ ಮನಸ್ಸಿನ ತಿಳಿಗೊಳವನ್ನು ಲಂಪಟತನ ಕದಡಿ ಬೊಗ್ಗಡಮಾಡುತ್ತಿದೆಯಲ್ಲಾ! – ಅವಳಿಗಾಗಿ ಮನೆಬಿಟ್ಟೆ – ಆತ್ಮೀಯ ಗೆಳೆಯರನ್ನು ದೂರಮಾಡಿದೆ – ನನ್ನ ಸುಖ ಸಂತೋಷವನ್ನು ತ್ಯಾಗಮಾಡಿದೆ – ಹುಟ್ಟಿದೂರನ್ನೂ ಬಿಟ್ಟೆ. – ಇಷ್ಟು ಬಲಿದಾನ ಸಾಲದೇ? ನನ್ನ ಆತ್ಮವಿನಾಶವೂ ಆಗಬೇಕೇ? ನಾನು ಎದುರಿಗಿದ್ದಾಗ ಅಷ್ಟು ನಲಿದು, ನಕ್ಕು ನನ್ನನ್ನು ರಮಿಸುವ ಕಮಲ, ನಾನು ಬೆನ್ನುತಿರುಗಿಸಿದೊಡನೆಯೇ ಹಾಗೆಯೇ ಇನ್ನೊಬ್ಬನ ಜತೆಯಲ್ಲಿ ಇರುವುದಿಲ್ಲವೆಂದು ಹೇಗೆ ನಂಬಲಿ?'

ಶ್ರೀನಾಥನಿಗೆ ನಾಗರಾಜನ ಮಾತು ಜ್ಞಾಪಕಕ್ಕೆ ಬಂತು – ಅಂದು ರಾತ್ರಿ ಅವಳ ಬಾಯಲ್ಲಿ ಬಂದ ಬ್ರ್ಯಾಂದಿ ವಾಸನೆಗೆ ಅವಳು ಕೊಟ್ಟ ಉತ್ತರದ ನೆನಪು ಬಂತು. ಬೆಂಕಿಗೆ ಬಿದ್ದ ಪತಂಗದಂತೆ ಲಿಬಿಲಿಬಿ ಒದ್ದಾಡಿದ.

ಮಾರನೆಯ ದಿವಸವೂ ಕಮಲಳ ಕಾಗದ ಬರಲಿಲ್ಲ. ಶ್ರೀನಾಥನ ಮನಸ್ಸು ಭಯ, ಸಂಶಯಗಳ ರುದ್ರರಂಗವಾಯಿತು. ಜ್ವರ ಏರಿ, ಅವನ ಜೀವವನ್ನು ಹಣ್ಣುಮಾಡಿತು.

ನಾಲ್ಕನೆಯ ದಿವಸ ಅಂಚೆಯಾಳು ತಂದುಕೊಟ್ಟ ಕಾಗದವನ್ನು ಒಡೆದು ನೋಡುವುದಕ್ಕೂ ಅವನಿಗೆ ಧೈರ್ಯ ಸಾಲದಾಯಿತು. ಪತ್ರವನ್ನು ಹಾಗೇ ತಿರುಗಿಸಿ ನೋಡಿದ. ಯಥಾಪ್ರಕಾರ ವಿಳಾಸ ಕಮಲಳ ಅಕ್ಷರವಾಗಿರಲಿಲ್ಲ – ಬೇರೆ ಯಾರದೋ ಅಕ್ಷರ – ಮೊದಲು ವಿಳಾಸ ಬರೆಯುತ್ತಿದ್ದವರ ಅಕ್ಷರವಲ್ಲ.

ಶ್ರೀನಾಥನ ಕೈ ನಡುಗುತ್ತಿತ್ತು. ಕಾಗದ ಒಡೆದು ನೋಡಿದ. ಕಾಗದದ ತೆ ನಾಲ್ಕೈದು ಸಂಪಿಗೆ ಎಸಳು ಲಕೋಟೆಯಿಂದ ಹೊರಗೆಬಿದ್ದವು.

"ದೇವರ ಸಮನರಾದಂಥವರಿಗೆ ನಮಸ್ಕಾರಗಳು,

ನಿಮ್ಮ ಕಾಗದ ಬಂತು. ಕೂಡಲೆ ಉತ್ತರ ಬರೆಯಲು ಸಾಧ್ಯವಾಗ ಲ್ಲ. ನೀವು ಹೊರಟು ಹೋದ ದಿನದಿಂದ ಮೈಯಲ್ಲಿ ಚೆನ್ನಾಗಿಲ್ಲ. ಮನಸ್ಸಿಗೆ ತುಂಬ ವ್ಯಥೆ. ನಿಮ್ಮ ಮದರಾಸು ಕೆಲಸ ಮುಗಿಸಿಕೊಂಡು ಬೇಗ ಂದುಬಿಡಿ.

ನಿಮ್ಮ ಚರಣದಾಸಿ 'ಕಮಲ'"

ಕಾಗದ ಪುಸ್ತವಾಗಿತ್ತು. ಅದರಲ್ಲಿ ಹಾರ್ದಿಕವಾದ ಒಂದು ಶಬ್ದವೂ ರಲಿಲ್ಲ. ಮೈಯಲ್ಲಿ ಸರಿಯಿಲ್ಲ ಎಂದು ಕಮಲ ಬರೆದಿದ್ದುದು ಶ್ರೀನಾಥನ ಮನಸ್ಸಿಗೆ ನಂಬಿಕೆ ತರಲಿಲ್ಲ.

'ಎಷ್ಟು ಬೇಗ ಎಂಥ ಪರಿವರ್ತನೆ'

ಕೊಂಡು ಎಂದ. ಮರುಕ್ಷಣವೇ

'ಅವಳು ಬರೆದಿರುವುದು ಸತ್ಯವೇಕಾಗಿರಬಾರದು. ನಾನು ಹೊರಟು ಂದ ದುಃಖದ ತಾಪದಿಂದಲೇ ಅವಳೇಕೆ ಹಾಸಿಗೆ ಹಿಡಿದು ಮಲಗಿರಬಾರದು'

ಎಂಬ ವಿಚಾರಮೂಡಿತು. ಕೂಡಲೆ ಕುಳಿತು ಕಮಲನಿಗೆ ದೀರ್ಘವಾಗಿ ಪತ್ರ ಬರೆದ.

ಶ್ರೀನಾಥ ವಿಶ್ರಾಂತಿಗಾಗಿ ಹೆಚ್ಚು ದಿನ ಮಲಗಲು ಸಾಧ್ಯವಿರಲಿಲ್ಲ. ತುಂಬ ಕೆಲಸ – ಪ್ರದರ್ಶನ ಸಮೀಪಕ್ಕೆ ಬರುತ್ತಿತ್ತು. ತನ್ನ ದೇಹಸ್ಥಿತಿ ಯನ್ನು ನಿರ್ಲಕ್ಷಿಸಿ ದುಡಿಯುವುದಕ್ಕಾರಂಭಿಸಿದ.

ಶ್ರೀನಾಥನ ಕಾಗದಗಳನ್ನು ತಾನು ಮಲಗುವ ಹಾಸಿಗೆಯ ದಿಂಬಿನ ಳಗೆ ಇಡುವುದು ಕಮಲನ ಪದ್ಧತಿಯಾಗಿತ್ತು. ಒಂದು ದಿನ ಗವಿಯಪ್ಪ ವಲಿಗೆ ದಿಂಬಿನ ಕೆಳಗೆ ಕೈಯಿಟ್ಟಾಗ ಶ್ರೀನಾಥನ ಎರಡು ಪತ್ರಗಳು ಸಿಕ್ಕಿ ವು. ಕಮಲ ಹೊರಗೆ ಹೋಗಲು ಅವುಗಳನ್ನೋದಿ ಅದೇ ಸ್ಥಳದಲ್ಲಿ ಮತ್ತೆ ಟ್ಟು ಕುಳಿತ. ಕಮಲ ಒಳಗೆ ಬಂದಾಗ

"ಮದರಾಸಿನಿಂದ ಕಾಗದಗಳು ಬರುತ್ತಿವೆಯೋ"

ಎಂದು ಕೇಳಿದ.

“ಬರುತ್ತಿವೆ.”

“ಯಾವಾಗ ಬರುತ್ತಾರಂತೆ !”

“ಇನ್ನೂ ಒಂದು, ಒಂದೂವರೆ ತಿಂಗಳಾಗಬಹುದು.”

“ಅವರು ಹಿಂದಿರುಗಿದ ಮೇಲೆ ನನಗೆ ಗೇಟ್ ಪಾಸೋ ?”

“ನಾನು ಹಾಗೆ ಹೇಳಿದೆನೇ ?”

“ನೀನು ಬಾಯಿಬಿಟ್ಟು ಹೇಳಿಲ್ಲ. ಅದೇ ನನ್ನ ಹಣೆಯುಬರಹವಾಗುತ್ತದೇನೋ ಎಂದು ಹೆದರಿಕೆಯಾಗುತ್ತದೆ.”

“ಅವರು ಬಂದ ಮೇಲೆ ನೀವು ಹೀಗೆ ಸ್ವತಂತ್ರವಾಗಿ ಬಂದು ಹೋಗುವುದಕ್ಕೆ ಆಗುವುದಿಲ್ಲ.”

“ನಾನು ಯಾವಾಗ ಬರಬೇಕು ?”

“ಅವರು ಇಲ್ಲದ ವೇಳೆಯಲ್ಲಿ.”

“ಅದು ನನಗೆ ತಿಳಿಯುವುದು ಹೇಗೆ ?”

“ಅಮ್ಮ ತಿಳಿಸುತ್ತಾಳೆ.”

“ನೀನು ಹೇಳುವುದು ನೋಡಿದರೆ ಅವರು ಹಿಂದಿರುಗಿದ ಮೇಲೆ ಇಪ್ಪತ್ತು ನಾಲ್ಕು ಗಂಟೆಯೂ ಇಲ್ಲೇ ಕಳೆಯುವ ಹಾಗೆ ಕಾಣುತ್ತದೆ.”

“ಹೌದು. ಅವರು ಬೇರೆ ಮನೆಮಾಡಿ ನನ್ನನ್ನು ಕರೆದುಕೊಂಡು ಹೋಗಿ ಇಟ್ಟುಕೊಳ್ಳುವ ಮಾತನ್ನೂ ಆಡಿದ್ದಾರೆ.”

“ಸರಿ. ನಿನ್ನದೆಲ್ಲಾ ಅಚ್ಚುಕಟ್ಟು ವ್ಯವಸ್ಥೆ ಆದಂತಾಗಿದೆ. ನನ್ನ ಗತಿ. ನಡು ನೀರಿನಲ್ಲಿ ನನ್ನ ಕೈಬಿಟ್ಟು ಬಿಡುವೆಯೇನು ?”

“ನಿಮಗೇನು ಕಡಿಮೆ. ನೀವು ಚೆಲ್ಲುವ ಹಣಕ್ಕೆ ನನ್ನಂಥವರು ನೂರು ಜನ ಸಿಕ್ಕುತ್ತಾರೆ.”

“ಸಿಕ್ಕಬಹುದು – ಆದರೆ ನೀನಿದ್ದಂತೆ ಆಗುವುದಿಲ್ಲವಲ್ಲ.”

“ನನ್ನನ್ನು ಏನು ಮಾಡೆಂದು ಹೇಳುವಿರಿ ?”

“ಅವರೂ ಇರಲಿ – ನಾನೂ ಇರುತ್ತೇನೆ. ನಾವಿಬ್ಬರೂ ಸ್ನೇಹಿತರಂತೆ ಏಕೆ ಬಂದು ಹೋಗಿ ಮಾಡಬಾರದು.”

“ಅವರ ವಿಷಯ ನಿಮಗೆ ಗೊತ್ತಿಲ್ಲ.”

“ಚೆನ್ನಾಗಿ ಗೊತ್ತಿದೆ. ಆತ ಪ್ರತಿಭಾಶಾಲಿ – ದೊಡ್ಡ ಲೇಖಕ-

ಸಾವಿರಾರು ಜನ ಆತನ ಪುಸ್ತಕಗಳನ್ನೋದಿ ಆತನನ್ನು ದೇವರೆಂದು ಭಾವಿಸುತ್ತಾರೆ."

"ಇತರರು ಅವರನ್ನು ದೇವರೆಂದು ಭಾವಿಸುವುದಂತೂ ಸರಿಯೇ—ಅವರು ನನ್ನನ್ನು – ನನ್ನಂಥ ಪಾಪಿಯನ್ನು – ದೇವರೆಂದು ಭಾವಿಸುತ್ತಾರೆ. ನೀವು ಬಂದು ಹೋಗುವ ಸುದ್ದಿ ತಿಳಿದರೆ ಸಾಕು, ಅವರ ಸ್ಥಿತಿ ಏನಾಗುತ್ತದೆಯೋ ?"

"ಅಂಥ ವಿಶ್ವಾಸ ಅವರಿಟ್ಟುಕೊಂಡಿರುವಾಗ ನೀನೇಕೆ ಅವರಿಗೆ ವಂಚನೆ ಮಾಡಿದೆ."

"ನಿಜ ಹೇಳಿ. ನಾನು ಮಾಡಿದೆನೋ – ನೀವೂ, ನಾಗರಾಜ, ನನ್ನ ತಾಯಿ ಕೂಡಿ ನನ್ನ ಕೈಯಲ್ಲಿ ಮಾಡಿಸಿದಿರೋ ?"

"ಯಾರು ಮಾಡಿದರೋ – ಯಾರು ಮಾಡಿಸಿದರೋ ಆದದ್ದು ಆಗಿ ಹೋಯಿತು. ಒಡೆದ ಹಾಲಿಗೆ ಅತ್ತರೇನು ಪ್ರಯೋಜನ. ಅವರು ಹಿಂದಿರುಗಿದ ಮೇಲೆ ನನ್ನ ಏನು ಮಾಡಬೇಕೆಂದು ನಿಮ್ಮ ತಾಯಿಯ ಸಂಗಡ ಮಾತಾಡಿರುವೆಯಾ ?"

"ಮಾತಾಡಿರುವೆ."

"ಅವಳೇನು ಹೇಳಿದಳು ?"

"ಅವರನ್ನು ಬಿಟ್ಟುಬಿಡು ಎಂದು ಹೇಳಿದಳು."

"ಅದು ನ್ಯಾಯವಲ್ಲ – ನಾನೇ ಅದಕ್ಕೆ ಸಮ್ಮತಿಸಲಾರೆ."

"ಅದಕ್ಕೂ ಸಮ್ಮತಿಸುವುದಿಲ್ಲ – ನೀವೂ ಬರುವುದು ನಿಲ್ಲಿಸುವುದಿಲ್ಲ. ನಾನು ಈ ಸಮಸ್ಯೆ ಹೇಗೆ ಬಗೆಹರಿಸಬೇಕು."

"ನಿಮ್ಮ ತಾಯಿ ಪ್ರಚಂಡ ಬುದ್ಧಿಶಾಲಿ. ಅವಳು ಪರಿಹರಿಸಿಯೇ ಇರುತ್ತಾಳೆ. ಅವಳೇನು ಹೇಳಿದಳು ತಿಳಿಸು – ಮರೆಮಾಜಬೇಡ."

ಕಮಲ ಸಾವಕಾಶವಾಗಿ ಬಾಯಿಬಿಟ್ಟಳು.

"ಸಮೀಪದಲ್ಲಿ ಪಾಪಕ್ಕನ ಮನೆಯಿದೆ. ಅವಳು ಒಂದು ರೂಮು ಕೊಡಲು ಒಪ್ಪಿಕೊಂಡಿದ್ದಾಳೆ."

"ಹಾಗಾದರೆ ನಾನು ಇಲ್ಲಿಗೆ ಬರುವಂತಿಲ್ಲ."

"ಬನ್ನಿ – ಅವರು ಇಲ್ಲದ ವೇಳೆಯಲ್ಲಿ ಬರಬೇಕಷ್ಟೆ."

ಭಾಗ್ಯಮ್ಮ ಮಾಡಿದ್ದ ವ್ಯವಸ್ಥೆ ಗವಿಯಪ್ಪನಿಗೆ ಪೂರ್ಣ ಸಂತೋಷಕ್ಕೆ ಕಾರಣವಾಗದಿದ್ದರೂ 'ಇಷ್ಟಾದರೂ ಸಾಧ್ಯವಾಯಿತಲ್ಲ' ಎಂದು ಅವನು ಸಮಾಧಾನ ತಂದುಕೊಂಡ. ಗವಿಯಪ್ಪನಿಗೆ ಇನ್ನೊಂದು ಯೋಚನೆ ಹೊಳೆಯಿತು.

"ಅವರು ಬಂದಮೇಲೆ ನೀನು ನನಗೆ ಸುದ್ದಿ ಹೇಗೆ ಹೇಳಿಕಳಿಸುವೆ ?"

"ನಾಗರಾಜನ ಕೈಯಲ್ಲಿ."

"ಸದಾ ಅವನು ನಮಗೆಲ್ಲಿ ಸಿಕ್ಕುತ್ತಾನೆ. ನಾನು ಒಂದು ಆಳು ಗೊತ್ತು ಮಾಡಿ ಕಳಿಸುತ್ತೇನೆ. ಅವನನ್ನು ಮನೆಗೆಲಸಕ್ಕೆ ಇಟ್ಟುಕೋ."

"ಹಾಗೇ ಆಗಬಹುದು."

"ಥಿಯೇಟರಿನಲ್ಲಿ ವಿಶ್ರಾಂತಿಗಾಗಿ ನಾನು ಒಂದೆರಡು ರೂಮುಗಳನ್ನಿಟ್ಟು ಕೊಂಡಿದ್ದೇನೆ. ಅದನ್ನೇ ಚೆನ್ನಾಗಿ ಫರ್ನಿಷ್ ಮಾಡಿಸುತ್ತೇನೆ. ನೀನು ಅಲ್ಲಿಗೇ ಬರಬಹುದು. ಅನುಮಾನಕ್ಕೂ ಕಾರಣವಾಗುವುದಿಲ್ಲ – ಸಿನೀಮಾಗೆ ಬಂದಿದ್ದಿರಿ ಎಂದು ಜನ ತಿಳಿದುಕೊಳ್ಳುತ್ತಾರೆ."

"ನಿಮ್ಮ ಇಷ್ಟ"

ಎಂದಳು.

ಶ್ರೀನಾಥ ಹಿಂದಿರುಗುವದರೊಳಗೆ ಕಮಲನ ಮನಸ್ಸನ್ನು ಸಂಪೂರ್ಣ ವಾಗಿ ವಶಪಡಿಸಿಕೊಳ್ಳಲು ಗವಿಯಪ್ಪ ನಿರ್ಧರಿಸಿದ. ಥಿಯೇಟರಿನಲ್ಲಿ ಒಂದು ಬಾಲ್ಕನಿ ಅವರಿಗೆ ರಿಸರ್ವ್ ಆಯಿತು. ಭಾಗ್ಯಮ್ಮ ಕೇಳಿಕೇಳಿದಾಗ ಕೇಳಿ ಕೇಳಿದಷ್ಟು ಹಣಕೊಡುತ್ತಿದ್ದ. ಭಾಗ್ಯಮ್ಮನಂತೂ ಗವಿಯಪ್ಪನನ್ನು ಆರಾಧಿಸ ತೊಡಗಿದಳು.

ಒಂದು ವಾರದಲ್ಲಿ ಗವಿಯಪ್ಪ ಒಂದು ಜತೆ ಚಿನ್ನದ ಬಳೆ ಮಾಡಿಸಿ ಕಮಲನ ಕೈಗೆ ತೊಡಿಸಿದ. ಎರಡನೆಯ ವಾರದಲ್ಲಿ ಎರಡು ಎಳೆಯ ಸರ ಮಾಡಿಸಿ ಕಮಲನಿಗೆ ಕೊಟ್ಟ. ಮೂರನೆಯ ವಾರ ನಾಲ್ಕು ಬಗೆ ಬಗೆಯ ಬೆಲೆ ಬಾಳುವ ಸೀರೆಗಳನ್ನು ತಂದುಕೊಟ್ಟ. ನಾಲ್ಕನೆಯ ವಾರ ಕಮಲನನ್ನೂ ಭಾಗ್ಯಮ್ಮ ನನ್ನೂ ಕರೆದುಕೊಂಡು ಹೋಗಿ ತಾನು ಕಟ್ಟಿಸುತ್ತಿದ್ದ ಮನೆ ತೋರಿಸಿ

"ಎಂದು ನೀನು ಪೂರ್ತಿ ನನ್ನವಳೋ ಅಂದು ಈ ಮನೆ ನಿನ್ನದು"

ಎಂದು ಹೇಳಿದ.

ಮನೆ ಕಂಡ ಮೇಲೆ ಭಾಗ್ಯಮ್ಮನ ಎದುರಿಗೆ ಕಮಲ ಶ್ರೀನಾಥನ ಹೆಸರೆತ್ತುವುದೇ ಕಷ್ಟವಾಯಿತು. ಅವನ ಕಾಗದ ಬಂದ ದಿನ ಭಾಗ್ಯಮ್ಮ ಕಿಡಿ ಕಿಡಿಯಾಗುತ್ತಿದ್ದಳು. ಕಾಗದವನ್ನು ಕಮಲನ ಮುಖದ ಮೇಲೆ ಎಸೆದು ವಾಚಾಮಗೋಚರ ಬಯ್ಯುತ್ತಿದ್ದಳು. ಕಮಲ ರೂಮಿನ ಒಳಗೆ ಅವಿತು ಕೊಂಡು ತಾಯಿಗೆ ಕಾಣದಂತೆ ಶ್ರೀನಾಥನಿಗೆ ಮಾರುತ್ತರ ಬರೆಯುತ್ತಿದ್ದಳು.

ಗವಿಯಪ್ಪ ಥಿಯೇಟರಿನಲ್ಲಿ ಕೆಲಸಮಾಡುತ್ತಿದ್ದ ಹುಡುಗ ಸಿದ್ದನನ್ನು ಭಾಗ್ಯಮ್ಮನ ಮನೆಗೆಲಸಕ್ಕೆ ಕಳಿಸಿಕೊಟ್ಟ.

ಶ್ರೀನಾಥ ಊರಿಗೆ ಬರುವ ದಿನ ಸಮೀಪಿಸಿದಂತೆಲ್ಲ ಕಮಲನ ಎದೆ ಡವ ಡವನೆ ಬಡಿದುಕೊಳ್ಳಲಾರಂಭಿಸಿತು. ಅವನಿಂದ ಬಂದ ಮನಿಯಾರ್ಡರ್ ಹಣ ಸ್ವೀಕರಿಸುವಾಗ ಕೈ ಸುಟ್ಟಂತೆ ಆಗುತ್ತಿತ್ತು.

ಭಾಗ್ಯಮ್ಮ ಬಿರಿಯಾನಿ, ಬ್ರ್ಯಾಂದಿ ಹುಡುಕಿಕೊಂಡು ಹೊರಗೆ ಹೋಗ ಬೇಕಾಗಿರಲಿಲ್ಲ. ಮನೆಯಲ್ಲಿಯೇ ಎಲ್ಲವೂ ಆಗುತ್ತಿತ್ತು. ಗವಿಯಪ್ಪ ಧಾರಾಳ ವಾಗಿ ಬ್ರ್ಯಾಂದಿ, ವಿಸ್ಕಿ ಬಾಟಲುಗಳನ್ನು ಭಾಗ್ಯಮ್ಮನ ಮನೆಗೆ ಕಳಿಸುತ್ತಿದ್ದ.

ಪ್ರತಿನಿತ್ಯ ತಾಯಿಯ ಜತೆ, ಗವಿಯಪ್ಪನ ಜತೆ ಬ್ರ್ಯಾಂದಿ ಕುಡಿಯುವ ಅಭ್ಯಾಸ ಕಮಲನಿಗಾಯಿತು. ಒಂದು ದಿನ ಪಾನೀಯ ತಪ್ಪಿದರೆ–ಬರುವುದು ತಡವಾದರೆ ಅವಳ ಬುದ್ಧಿ ಮಂಕಾಗುತ್ತಿತ್ತು. ತಲೆ ಸಿಡಿಯು ವಂಥ ತಲೆನೋವು ಕಾಣಿಸಿಕೊಳ್ಳುತ್ತಿತ್ತು. ಹುಚ್ಚಳಂತಾಡುತ್ತಿದ್ದಳು.

ಬ್ರ್ಯಾಂದಿ ವಾಸನೆಯೇ ಮಡಿವಂತ ಶ್ರೀನಾಥನನ್ನು ಕಮಲನಿಂದ ಹೊರಗಿಡಬಲ್ಲುದು ಎಂಬ ನಂಬಿಕೆ ಗವಿಯಪ್ಪನ ಮನಸ್ಸಿನಲ್ಲಿ ದೃಢವಾಗಿ ಮೂಡಿತು. ಬ್ರ್ಯಾಂದಿ ಅಭ್ಯಾಸ ಬೆಳೆದ ಮೇಲೆ ಕಮಲ ಶ್ರೀನಾಥನ ಬಗ್ಗೆ ವಿಶೇಷ ಚಿಂತೆ ಮಾಡುವುದನ್ನೂ ಬಿಟ್ಟುಬಿಟ್ಟಳು.

ಮದರಾಸಿನಲ್ಲಿ ಶ್ರೀನಾಥನ ಕೆಲಸ ಮುಗಿಯುತ್ತಾ ಬಂದಿತ್ತು. ಡೈರೆಕ್ಟರಿ ಬೈಂಡಿಂಗಿಗೆ ಹೋಗಿತ್ತು. ಶ್ರೀನಾಥನ ಕೆಲಸದ ದಕ್ಷತೆ ಕಂಡು ಚೆಟ್ಟಿಯಾರರು ಮಾರುಹೋಗಿದ್ದರು. ಪ್ರದರ್ಶನ ಮುಗಿಯುವ ವರೆಗೆ ಅಲ್ಲಿಯೇ ನಿಲ್ಲಬೇಕೆಂದು ಅಂಗಲಾಚಿದರು. ಶ್ರೀನಾಥ ಸಾಧ್ಯವಿಲ್ಲವೆಂದು ಖಂಡಿತವಾಗಿ ಹೇಳಿಬಿಟ್ಟ.

ಅವನು ಮದರಾಸಿನಿಂದ ಹೊರಡುವ ದಿನ ನಿಶ್ಚಯವಾಯಿತು. ಚೆಟ್ಟಿ ಯಾರರು ಅವನ ಲೆಕ್ಕದಲ್ಲಿ ಉಳಿದಿದ್ದ ಹಣವನ್ನೂ ಜತೆಗೆ ಪಾರಿತೋಷಕವಾಗಿ ಇನ್ನೂರು ರೂಪಾಯಿಗಳನ್ನೂ ಇತ್ತರು. ಶ್ರೀನಾಥ ತಾನು ಬರುವ ದಿನ ತಿಳಿಸಿ ಕಮಲನಿಗೆ ತಾರುಕೊಟ್ಟು ರೈಲು ಹತ್ತಿದ.

ಸಂಜೆ ಐದು ಗಂಟೆಗೆ ಕಮಲಿನ ಕೈಗೆ ತಾರು ಮುಟ್ಟಿತು. ಭಾಗ್ಯಮ್ಮ ಅದನ್ನು ತೆಗೆದುಕೊಂಡು ಹೋಗಿ ಪಕ್ಕದ ಮನೆಯವರ ಕೈಯಲ್ಲಿ ಓದಿಸಿಕೊಂಡು ಮನೆಗೆ ಉರಿಮಾರಿಯಂತೆ ಬಂದಳು. ಕೆಂಡ ಕಾರುತ್ತಲೇ ಮಗಳಿಗೆ ತಾರಿನ ಸುದ್ದಿ ತಿಳಿಸಿದಳು.

"ಇವತ್ತು ರಾತ್ರಿ ರೈಲು ಹತ್ತಿ ನಾಳೆಯ ಬೆಳಿಗ್ಗೆ ಬರುತ್ತಾರೆ."

"ನಾಳೆ ಬರುತ್ತಾರೆಯೋ?"

"ಹೂ! ಬರುತ್ತಾರೆ. ನಿನ್ನ ಮುಖ ಅರಳಿತೇನೋ?"

"ನನ್ನ ಮೇಲೆ ಸಿಡಗುಟ್ಟಿದರೆ ಏನು ಪ್ರಯೋಜನ. ರಾತ್ರಿಗೆ ಇವರು ಬರುತ್ತಾರಲ್ಲಾ ಆಗ ಎಲ್ಲಾ ಮಾತನಾಡಿದರಾಯಿತು."

ಎಂದು ಹೇಳಿದಳು. ಶ್ರೀನಾಥನ ತಾರು ನೋಡಿ ಗವಿಯಪ್ಪನ ಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು.

"ನಾನು ನಿನ್ನ ಬಿಟ್ಟಿರಲಾರೆ ಕಮಲ"

"ಅವರು ಬಂದ ಮೇಲೆ ಹೇಗೆ ನಡೆಯಬೇಕೆನ್ನುವುದನ್ನು ಈ ಮೊದಲೇ ನಿಷ್ಕರ್ಷೆ ಮಾಡಿಕೊಂಡಿರುವೆವಲ್ಲಾ – ಇನ್ನೇಕೆ ಯೋಚನೆ."

"ಇದರಿಂದ ಇಬ್ಬರಿಗೂ ನೆಮ್ಮದಿಯಿಲ್ಲ. ಅವರಿಗೂ ಅಸಂತೋಷ – ನನಗೂ ಅಸಂತೋಷ."

"ಅವರು ಬಂದ ಮೇಲೆ ಏನೇನು ಆಗುತ್ತದೋ ನೋಡೋಣ. ನೀವು ಮಾತ್ರ ಅವರು ಇಲ್ಲಿದ್ದಾಗ ಬರಬೇಡಿ. ನೀವು ಯಾವಾಗ ಹೇಳಿ ಕಳಿಸಿದರೂ ನಾನೇ ಥಿಯೇಟರಿಗೆ ಬರುತ್ತೇನೆ."

ಅವಳ ಸಲಹೆಯನ್ನು ವಿಧಿಯಿಲ್ಲದೆ ಗವಿಯಪ್ಪ ಒಪ್ಪಿಕೊಳ್ಳಬೇಕಾಯಿತು.

ಪಾನೀಯ ತರಿಸಿ, ರಾತ್ರಿಯನ್ನು ಗವಿಯಪ್ಪ ಅಲ್ಲಿಯೇ ಕಳೆದ. ಆದರೆ ಮನಸ್ಸಿಗೆ ಮುದವಿಲ್ಲ.

ಬೆಳಿಗ್ಗೆ ಕಮಲ ಐದು ಗಂಟೆಗೇ ಎದ್ದು ಗವಿಯಪ್ಪನನ್ನೆಬ್ಬಿಸಿ ಅವನ ಕೈಗೆ ಕೋಟು ರುಮಾಲು ಕೊಟ್ಟಳು. ಗವಿಯಪ್ಪ ' ಉಸ್ ' ಎಂದುಕೊಂಡು ಮನೆಬಿಟ್ಟು ಹೋದ.

ಕಮಲ ತನ್ನ ರೂಮನ್ನು ಸ್ವಚ್ಛಮಾಡಿ ಸಿಗರೇಟ್ ತುಂಡುಗಳನ್ನೂ, ಬಾಟ್ಲಿಗಳನ್ನೂ ಹೊರಗೆ ಹಾಕಿದಳು. ತೊಟ್ಟಿಯನ್ನು ಗುಡಿಸಿ, ಸಾರಿಸಿ, ಮನೆಯ ಮುಂದೆ ಓರಣವಾಗಿ ರಂಗವಲ್ಲಿ ಇಟ್ಟಳು.

ರೈಲು ಇಳಿದವನೇ ಶ್ರೀನಾಥ ನೇರವಾಗಿ ಮನೆಗೆ ಬರುತ್ತಾನೆಂದು ಕಮಲ ಭಾವಿಸಿದಳು. ಗಂಟೆ ಎಂಟಾಯಿತು – ಒಂಭತ್ತಾಯಿತು ಶ್ರೀನಾಥ ಬರಲಿಲ್ಲ. ಮನಸ್ಸಿಗೆ ವ್ಯಥೆಯಾಯಿತು – ರೈಲು ತಪ್ಪಿರಬಹುದೆಂದು ಭಾವಿಸಿದಳು.

ಹತ್ತು ಗಂಟೆಯ ಸುಮಾರಿಗೆ ಶ್ರೀನಾಥ ಬಂದ. ಅವನ ಗುರುತು ಹಿಡಿಯುವುದೇ ಕಮಲನಿಗೆ ಕಷ್ಟವಾಯಿತು.

" ಯಾವಾಗ ಬಂದಿರಿ " ಎಂದಳು.

" ಬೆಳಿಗ್ಗೆ."

" ರೈಲಿನಿಂದ ಇಲ್ಲಿಗೇ ಬರುತ್ತೀರೆಂದು ಭಾವಿಸಿದ್ದೆ."

" ರೂಮಿಗೆ ಹೋಗಿ ಸ್ನಾನ ಮಾಡಿ ಬಂದೆ."

" ಇದೇನು ಹೀಗಾಗಿರುವಿರಿ. ನಿಮ್ಮ ಗುರುತೇ ಸಿಕ್ಕುವುದಿಲ್ಲವಲ್ಲ. ಅರ್ಧಕ್ಕರ್ಧ ಆಗಿರುವಿರಿ."

" ಮೈಯಲ್ಲಿ ಹುಷಾರಿರಲಿಲ್ಲ. ಕೆಲಸವೂ ಹೆಚ್ಚು. ನೀನು ಚೆನ್ನಾಗಿದ್ದೀಯಾ – ಅಮ್ಮ ಚೆನ್ನಾಗಿದ್ದಾಳೆಯೇ ?"

" ನಿಮ್ಮ ಆಶೀರ್ವಾದದಿಂದ ಎಲ್ಲಾ ಚೆನ್ನಾಗಿದ್ದೇವೆ."

ಹೊರಗೆ ಕೆಲಸಮಾಡುತ್ತಿದ್ದ ಸಿದ್ದನನ್ನು ನೋಡಿ ಶ್ರೀನಾಥ

" ಇವನು ಯಾರು ?"

" ಆಳು. ಅಮ್ಮನಿಗೂ ಮೈಯಲ್ಲಿ ಚೆನ್ನಾಗಿರಲಿಲ್ಲ. ಇಟ್ಟುಕೊಂಡೆ."

" ನನಗೆ ಬರೆಯಲೇ ಇಲ್ಲ."

" ಏನು ದೊಡ್ಡ ವಿಷಯ ಎಂದು ಬರೆಯಲಿಲ್ಲ."

"ಈಚೆಗೆ ನಿನ್ನ ಕಾಗದಗಳು ಟೆಲಿಗ್ರಾಮಿನಷ್ಟು ಸಂಕ್ಷಿಪ್ತವಾಗಿರುತ್ತಿದ್ದವು."

"ನಿಮಗೆ ವಿಸ್ತಾರವಾಗಿ ಬರೆಯಲು ನನಗೆ ಭಯ. ಎಷ್ಟಾದರೂ ನಾನು ಹಳ್ಳಿಯ ಮುಕ್ಕ."

"ಏಕೆ ದೂರ ನಿಂತಿರುವೆ. ನಾನು ಹಿಂದಿರುಗಿ ಬಂದುದು ನಿನಗೆ ಸಂತೋಷವಾಗಿಲ್ಲವೇ ?"

"ಅದನ್ನು ಹೇಗೆ ಆಡಿ ತೋರಿಸಲಿ. ಕಾಫಿ ತಂದುಕೊಡುತ್ತೇನೆ"

ಎಂದು ಹೊರಗೆ ಹೋದಳು. ಕಮಲ ಕಾಹಿಲೆಬಿದ್ದಿದ್ದಳು ಎಂದು ಯಾರೂ ಹೇಳುವಂತಿರಲಿಲ್ಲ. ಮೊದಲಿಗಿಂತ ಅವಳಿಗೆ ಮೈ ಬಂದಿತ್ತು. 'ಕಮಲ ಸುಳ್ಳು ಹೇಳುತ್ತಿರಬಹುದೇ ?' ಎಂದು ಶ್ರೀನಾಥ ಯೋಚನೆ ಮಾಡುತ್ತ ಕುಳಿತ.

ಕಮಲ ಕಾಫಿ ತಂದು ಕೊಟ್ಟಾಗ ಶ್ರೀನಾಥನ ಲಕ್ಷ್ಯ ಅವಳ ಕೈಯಲ್ಲಿದ್ದ ಬಳೆಗಳು, ಕೊರಳಲ್ಲಿದ್ದ ಸರದ ಕಡೆಗೆ ಹೋಯಿತು. ಅವುಗಳನ್ನು ದಿಟ್ಟಿಸಿ ನೋಡಿ

"ಒಡವೆ ಮಾಡಿಸಿಕೊಂಡಿರುವೆ ?"

"ಹೂ ! ಚೆನ್ನಾಗಿದೆಯೇ ?"

"ಸೊಗಸಾಗಿದೆ. ಹಣಕ್ಕೇನು ಮಾಡಿದೆ ?"

"ನೀವು ಕೊಟ್ಟುಹೋಗಿದ್ದುದನ್ನು ಮರೆತುಬಿಟ್ಟಿರಾ ?"

ಅದನ್ನು ಕೇಳಿ ಶ್ರೀನಾಥನ ಮನಸ್ಸಿಗೆ ಸಂತೋಷವಾಯಿತು. ವಿನಾ ಕಾರಣ ಸಿನೀಮಾಕ್ಕೆ ಹಣ ಖರ್ಚು ಮಾಡುವುದನ್ನು ನಿಲ್ಲಿಸಿ ಒಡವೆ ಮಾಡಿಸಿಕೊಂಡರಲ್ಲಾ ಎಂದು ಹಿಗ್ಗಿದ.

"ಸಿನೀಮಾಕ್ಕೆ ಹೋಗಿ ಬಹಳ ದಿವಸವಾಯಿತೇ ?"

"ಏಕೆ ?"

"ಹಣ ಉಳಿತಾಯ ಮಾಡುವಂತೆ ಕಾಣುತ್ತಿದೆ."

"ಈಗ ಸಿನೀಮಾಕ್ಕೆ ನಾವು ಖರ್ಚುಮಾಡುವಂತಿಲ್ಲ."

"ಏಕೆ ?"

"ನನಗೊಬ್ಬ ಯಜಮಾನ ಇದ್ದ ವಿಷಯ ಹಿಂದೆಯೇ ತಿಳಿಸಿದ್ದೆ. ಜ್ಞಾಪಕವಿದೆಯೇ ?"

"ಇದೆ."

"ಅವನು ಈಗ 'ಅರುಣ' ಥಿಯೇಟರಿನ ಮ್ಯಾನೇಜರು. ಅಲ್ಲಿಗೆ ನಾವು ಹೋದರೆ ಟಿಕೆಟ್ಟಿಗೆ ಹಣ ಸುರಿಯಬೇಕಾಗಿಲ್ಲ."

"ನಿಮ್ಮಮ್ಮನಿಗೆ ಅನುಕೂಲವಾಯಿತು. ನಿತ್ಯ ಎರಡು ಹೊತ್ತೂ ಸಿನೀಮಾ ನೋಡಬಹುದು"

"ಹೌದು. ಸದ್ಯ ಅವಳ ಹಾರಾಟ ಅದರಿಂದ ಎಷ್ಟೋ ಕಡಿಮೆ ಯಾಗಿದೆ."

"ನಾನು ಇಲ್ಲಿಗೆ ಬರುವ ವಿಷಯ ನಿನ್ನ 'ಯಜಮಾನ'ನಿಗೆ ಗೊತ್ತೇ?"

"ಗೊತ್ತು. ನಾನೇ ಎಲ್ಲವನ್ನೂ ತಿಳಿಸಿದ್ದೇನೆ. ನಿಮ್ಮ ಪರಿಚಯ ಮಾಡಿಕೊಳ್ಳಬೇಕೆಂದು ಅವರೂ ಆಸೆಪಟ್ಟರು."

"ಪರಿಚಯವೇನೂ ಅಗತ್ಯವಿಲ್ಲ. ನಾವು ಸ್ವಲ್ಪ ದೂರವಿರುವುದೇ ಲೇಸು."

ಕಮಲ ಮರುನುಡಿಯಲಿಲ್ಲ.

ಶ್ರೀನಾಥ ಅಂದು ಅಲ್ಲೇ ಊಟ ತೀರಿಸಿದ. ಸಂಜೆಯವರೆಗೆ ಕಮಲನ ಮನೆ ಬಿಟ್ಟು ಅಲುಗಾಡಲಿಲ್ಲ. ಸಂಜೆ ಆರು ಗಂಟೆಗೆ ಭಾಗ್ಯಮ್ಮ ಅಲಂಕಾರ ಮಾಡಿಕೊಂಡು ಹೊರಗೆ ಹೊರಡಲು ಸಿದ್ಧಳಾದಳು.

ಕಮಲ ಒಳಗೆ ಬಂದು ನಯವಾಗಿ ಶ್ರೀನಾಥನಲ್ಲಿ ವಿಷಯ ಪ್ರಸ್ತಾಪಿಸಿದಳು. ಶ್ರೀನಾಥನ ಮುಖ ಕೆಂಪಗಾಯಿತು.

"ಇವತ್ತೂ ಹಾಳು ಸಿನೀಮಾಕ್ಕೆ ಹೋಗಲೇಬೇಕೇನು?"

"ಹೋಗಬೇಕೆಂದು ನನ್ನ ಹಟವಿಲ್ಲ. ಇನ್ನು ಇದಕ್ಕೇ ಹಗರಣ ವಾಗುತ್ತದೆ. ಅಮ್ಮ ಹೊರಡಲು ಸಿದ್ಧಳಾಗಿದ್ದಾಳೆ. ನೀವೂ ಬನ್ನಿ ಹೋಗೋಣ."

"ನಿನ್ನ ಯಜಮಾನನ ದಾಕ್ಷಿಣ್ಯ ನನಗೆ ಬೇಕಾಗಿಲ್ಲ."

"ನಾವು ೯ ಗಂಟೆಗೆ ಮನೆಗೆ ಬಂದು ಬಿಡುತ್ತೇವೆ. ನೀವು ತಿರುಗಾಡಿಕೊಂಡು ೯-೯|| ಗೆ ಬನ್ನಿ."

ಶ್ರೀನಾಥ ಮಾತು ಬೆಳಸಲಿಲ್ಲ. 'ಆಗಬಹುದು' ಎಂದು ಬಿರುಸಾಗಿ

ನುಡಿದು ಕೋಟು ಎಳೆದುಕೊಂಡು ಹೊರಟುಬಿಟ್ಟ. ಕಮಲನ ಮುಖ ನಿಸ್ತೇಜವಾಯಿತು.

ಶ್ರೀನಾಥನಿಗೆ ಸಹಿಸಲಾರದಷ್ಟು ದುಃಖವಾಯಿತು. 'ನಾನು ಊರಿಗೆ ಬಂದ ದಿನವೇ ಹೀಗಾಗಬೇಕೇ?' ಎಂದು ಮನಸ್ಸಲ್ಲಿ ಮರುಗಿದ. ರೂಮಿಗೆ ಹೋಗಿ, ದೀಪಕೂಡ ಹೊತ್ತಿಸದೆ ಹಾಸಿಗೆಯ ಮೇಲೆ ಮಲಗಿದ.

'ಕಮಲನಲ್ಲಿ ಏನೋ ಮಾರ್ಪಾಟಾಗಿದೆ. ಅವನು ಮೊದಲಿನಂತಿಲ್ಲ. ನನ್ನ ಬಗ್ಗೆ ಅವನ ಆದರ – ಪ್ರೇಮ ಕಡಿಮೆಯಾಗಿದೆ'

ಎಂಬ ಭಾವನೆ ಪದೇ ಪದೇ ಅವನ ಹೃದಯವನ್ನು ಘಾತಿಸುತ್ತಿತ್ತು.

ಗಡಿಯಾರದ ಗಂಟೆಯ ಮುಳ್ಳು ಒಂಭತ್ತರ ಸಮೀಪಗತವಾಗಿತ್ತು. ದಿಗ್ಗನೆ ಎದ್ದವನೇ ನೇರವಾಗಿ ಕಮಲನ ಮನೆಯಬಳಿ ಹೋದ – ಬಾಗಿಲಿಗೆ ಬೀಗ ಮುದ್ರೆಯಾಗಿತ್ತು. ಅರ್ಧ ಗಂಟೆ ಅಲ್ಲಲ್ಲೇ ಸುತ್ತಾಡಿ ಮನೆಯ ಬಳಿಗೆ ಬಂದ – ಅದೇ ಬೀಗ ಮುದ್ರೆ. ತನ್ನ ಆತುರಕ್ಕೆ ತಾನೇ ನಾಚಿ ಮತ್ತೆ ಒಂದು ಗಂಟೆ ಕಳೆದು ಬಂದ – ಗಂಟೆ ೧೦॥ ಆಗಿತ್ತು – ಬಾಗಿಲು ಹಾಕಿಯೇ ಇತ್ತು – ಬೀಗ ಇದ್ದಲ್ಲಿಯೇ ಇತ್ತು.

ಶ್ರೀನಾಥನ ಮನಸ್ಸು ಅಲ್ಲಕಲ್ಲೋಲವಾಯಿತು. 'ಅರುಣ' ಥಿಯೇಟರಿಗೆ ನಡೆದು ಟಿಕೆಟ್ ಕೊಂಡು ಕುಳಿತ. ಚಿತ್ರ ಮುಗಿಯಿತು. ಹೊರಗೆ ಬರುವವರನ್ನೆಲ್ಲಾ ಈಕ್ಷಿಸಿದ. ಭಾಗ್ಯಮ್ಮ, ಕಮಲ ಅವರ ಗುಂಪಿನಲ್ಲಿರಲಿಲ್ಲ. ಮತ್ತೆ ಮನೆಯ ಬಳಿಗೆ ಓಡಿಬಂದ – ಅದೇ ಬೀಗಮುದ್ರೆ. ಶ್ರೀನಾಥನ ಮನಸ್ಸು ಬಹುಭಾರವಾಯಿತು. ತಲೆ ಗಿರ್ರನೆ ತಿರುಗಿಬಂದಿತು. ಅಲ್ಲಿ ನಿಲ್ಲಲಾರದೆ ರೂಮು ಬಂದು ಸೇರಿದ. ಹಾಸಿಗೆ ಅವನಿಗೆ ಅಂದು ಶರಪಂಜರವಾಯಿತು.

ರಾತ್ರಿ ಕಣ್ಣುಮುಚ್ಚಲಿಲ್ಲ. ತಲೆಯಲ್ಲಿ ನೂರಾರು ವಿಚಾರಗಳು – ಭಾವನೆಗಳು – ಸಂದೇಹಗಳು. ದುಃಖ ಉಕ್ಕಿಬಂತು – ಕಣ್ಣೀರು ಕೋಡಿ ಹರಿಯಿತು.

ಬೆಳಗಾಯಿತು. ಶ್ರೀನಾಥನ ಮನಸ್ಸಿನಲ್ಲಿ ಮೊದಲು ಸುಳಿದ ಯೋಚನೆ

'ಕಮಲನ ಮನೆಗೆ ಹೋಗಲೇ ಬೇಡವೇ?'

ಒಮ್ಮೆ ಅತ್ತ – ಒಮ್ಮೆ ಇತ್ತ ಮನಸ್ಸು ತೂಗಾಡಿತು. ಹೋಗುವುದು ಬೇಡವೆಂದು ಕೈಯಲ್ಲಿ ಪುಸ್ತಕ ಹಿಡಿದು ಕುಳಿತ – ಪುಸ್ತಕದ ಸಾಲುಸಾಲಿಗೂ ಕಮಲನ ಪ್ರತಿರೂಪ ಕಾಣಿಸಿತು. ಅವಳ ಕರೆ ಕೇಳಿಸಿತು. ಶ್ರೀನಾಥ ತನ್ನ ನಿರ್ಧಾರವನ್ನು ಮುಂದುವರಿಸಲಾಗಲಿಲ್ಲ. ತನ್ನ ದೌರ್ಬಲ್ಯಕ್ಕೆ ತಾನೇ ಅಸಹ್ಯಪಟ್ಟುಕೊಂಡ. ಎದ್ದವನೇ ನೇರವಾಗಿ ಕಮಲನ ಮನೆಗೆ ಬಂದ.

ತೊಟ್ಟಿಯಲ್ಲಿ ಕಮಲ ಮನೆ ಸಾರಿಸುತ್ತಿದ್ದಳು. ಶ್ರೀನಾಥ ಅವಳನ್ನು ಮಾತನಾಡಿಸದೆ ನೇರವಾಗಿ ಕೋಣೆಯಲ್ಲಿ ಬಂದು ಕುಳಿತ. ನಾಲ್ಕೈದು ನಿಮಿಷಗಳಲ್ಲಿ ಕಮಲ ಕೈತೊಳೆದುಕೊಂಡು ಒಳಗೆ ಬಂದಳು. ಶ್ರೀನಾಥ ಒಮ್ಮೆ ಕತ್ತೆತ್ತಿ ನೋಡಿ ಕತ್ತು ತಗ್ಗಿಸಿದ. ಕಮಲ ಅವನ ಸಮೀಪದಲ್ಲಿ ಕುಳಿತು ತಲೆ ನೇವರಿಸುತ್ತಾ

"ನನ್ನ ಮೇಲೆ ಕೋಪವೇ?"

ಶ್ರೀನಾಥ ಉತ್ತರಕೊಡಲಿಲ್ಲ.

"ರಾತ್ರಿ ಏಕೆ ಬರಲಿಲ್ಲ?"

ಶ್ರೀನಾಥನ ಕೆಂಗಣ್ಣುಗಳು ಅವಳ ಪ್ರಶ್ನೆಗೆ ಉತ್ತರ ಹೇಳಿದವು.

"ಮದರಾಸಿಗೆ ಹೋದ ಮೇಲೆ ನಿಮ್ಮ ಚರ್ಯೆಯೇ ಬದಲಾಯಿಸಿದೆ. ನನ್ನನ್ನು ದೂರಮಾಡುವ ಪ್ರಯತ್ನ ಮಾಡುತ್ತಿರುವಿರಿ."

"ತಪ್ಪು ಮಾಡಿ ಅದನ್ನು ಸುಳ್ಳಿನಿಂದ ಮುಚ್ಚಿಡಲು ಪ್ರಯತ್ನಿಸ ಬಾರದು."

"ನಾನು ಸುಳ್ಳು ಹೇಳುತ್ತಿರುವೆನೇ?"

"ರಾತ್ರಿ ಮನೆಗೇಕೆ ಬರಲಿಲ್ಲ?"

"ಬಂದೆ – ಸ್ವಲ್ಪ ತಡವಾಯಿತು. ನೀವೇಕೆ ಬರಲಿಲ್ಲ?"

"ನಾನು ಒಂಭತ್ತಕ್ಕೆ ಬಂದವನು ಹನ್ನೊಂದು ಗಂಟೆಯವರೆಗೆ ಇಲ್ಲಿಯೇ ಸತ್ತು ರೂಮಿಗೆ ಹೋದೆ."

"ಸಿನೀಮಾಕ್ಕೆ ಹೋದೆವು. ಅಲ್ಲಿ ನಮ್ಮ ಯಜಮಾನರ ಈಗಿನ ಹೆಂಡತಿ ಬಂದಿದ್ದಳು. ಎಷ್ಟು ಹೇಳಿದರೂ ಕೇಳದೆ ಬಲವಂತಮಾಡಿ ಮನೆಗೆ ಕರೆದುಕೊಂಡು ಹೋಗಿ ಊಟಮಾಡಿಸಿ ಕಳಿಸಿದಳು. ಇಲ್ಲಿಗೆ ಹಿಂದಿರುಗುವು ದಕ್ಕೆ ತಡವಾಯಿತು."

"ನೀನು ನಿಜ ಹೇಳುತ್ತಿರುವೆಯೋ ಸುಳ್ಳು ಹೇಳುತ್ತಿರುವೆಯೋ ಆ ಪರಮಾತ್ಮನಿಗೇ ಗೊತ್ತು."

"ಸುಳ್ಳು ಹೇಳಿ ನಾನು ಸಾಧಿಸಬೇಕಾದುದೇನು ?"

"ಅದನ್ನು ನಾನು ಬಲ್ಲೆನೇ ?"

"ನೀವು ಇಷ್ಟು ಅನುಮಾನ ತಳೆದರೆ ಬಾಳುವುದೆಂತು ?"

"ನಿನ್ನ ನಡತೆ ಅನುಮಾನಕ್ಕೆ ಕಾರಣವಾಗಿಲ್ಲವೇ ?"

"ನನ್ನ ನಡತೆಯಲ್ಲಿ ಯಾವ ವ್ಯತ್ಯಾಸವೂ ಆಗಿಲ್ಲ."

ಕಮಲನ ಧ್ವನಿಯಲ್ಲಿ ಮಾರ್ದವತೆ ಇರಲಿಲ್ಲ; ಕಾಠಿಣ್ಯವೂ ಇರಲಿಲ್ಲ. ಕಡ್ಡಿ ಎರಡು ತುಂಡುಮಾಡಿದಂತೆ ಖಡಾಖಂಡಿತವಾಗಿ ಉತ್ತರಕೊಟ್ಟಿದ್ದಳು. 'ತಾನು ಅನುಮಾನಪಟ್ಟುದು ತಪ್ಪಾಯಿತೆ 'ಂದು ಶ್ರೀನಾಥ ಭಾವಿಸಿದ.

"ನೋಡು ಕಮಲ, ನಿನ್ನ ನನ್ನ ಸಂಬಂಧದಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾದರೂ ನಾನು ಸಹಿಸಲಾರೆ. ನಮ್ಮಿಬ್ಬರ ಮಧ್ಯೆ ಯಾರೂ ಬರಬಾರದು. ನಿನ್ನ ವಿಶ್ವಾಸ ಬೇರೆಯವರ ಮೇಲೆ ಹೊರಳುವ ಸಂದರ್ಭದಲ್ಲಿ ಅದನ್ನು ನನಗೆ ಸ್ಪಷ್ಟವಾಗಿ ಹೇಳಬೇಕು. ಅಂದಿನಿಂದ ನಾನು ದೂರವಾಗುತ್ತೇನೆ."

"ದೂರವಾಗುವ ಮಾತು ಆಡಬೇಡಿ. ನಿಮಗಿಂತ ನನಗೆ ಹೆಚ್ಚಿನದು ಯಾವದೂ ಇಲ್ಲ. ನನ್ನ ತಾಯಿಯ ಹಿಂಸೆಗೆ ನಾನು ಆಗಾಗ್ಗೆ ನಿಮ್ಮ ಮನಸ್ಸು ನೋಯಿಸಬೇಕಾಗುತ್ತದೆ. ನಿಮ್ಮ ಸುಖವೇ ನನ್ನ ಸುಖ; ನಿಮ್ಮ ದುಃಖವೇ ನನ್ನ ದುಃಖ."

ಶ್ರೀನಾಥನ ಕೋಪಾಗ್ನಿ ಪ್ರಶಾಂತವಾಯಿತು. ಏನೇ ಪ್ರಸಂಗ ಬಂದರೂ ಕಮಲನನ್ನು ಆಕ್ಷೇಪಿಸುವುದಿಲ್ಲವೆಂದು ನಿರ್ಧರಿಸಿದ.

೨೫

ಮುತ್ತಮ್ಮನ ಮನೆಯಲ್ಲಿ ಬಾಲೂಗೆ ಶುಕ್ರಮಹಾದೆಶೆ ಆರಂಭವಾಗಿತ್ತು. ಮನೆಗೆ ಬರುತ್ತಿದ್ದವರೆಲ್ಲಾ ಬಾಲೂವನ್ನೇ ಬಯಸುತ್ತಿದ್ದರು. ಯಾರಾದರೂ 'ಕಮಲನನ್ನು ಕರೆಸು' ಎಂದು ಹೇಳಿದರೆ ಮುತ್ತಮ್ಮ ಸಿಡಿಸಿಡಿಯಾಗುತ್ತಿ

ದ್ದಳು. ತನ್ನ ಆದಾಯಕ್ಕೆ ಬಾಲು ಅಡ್ಡಿಯಾಗಿದ್ದಾಳಲ್ಲಾ ಎಂದು ವೆಂಕಟ್ಟ, ನಾಗೂ ಕಸವಿಸಿಗೊಂಡರೂ, ಅವಳು ಕೊಡುತ್ತಿದ್ದ ಕಾಣಿಕೆ ಅವರನ್ನು ತೃಪ್ತರನ್ನಾಗಿ ಮಾಡಿತ್ತು.

ರಾಮರಾಜಪ್ಪ ಪ್ರತಿನಿತ್ಯ ಬರುತ್ತಿದ್ದ. ಹಗಲಿರುಳೆನ್ನದೆ ಮುತ್ತಮ್ಮನ ಮನೆಯಲ್ಲಿ ಮೋಜುವಾನಿ ನಡೆಯುತ್ತಿತ್ತು. ಅಕ್ಕಪಕ್ಕದ ಮನೆಗಳಲ್ಲಿ ಜನ ವಾಸಿಸುತ್ತಿದ್ದಾರೆಂಬ ಪರಿವೆಯೂ ಇಲ್ಲದೆ ರಾಮರಾಜಪ್ಪ ಅಮಲಿನಲ್ಲಿ ಗಟ್ಟಿಯಾಗಿ ಹಾಡುವುದಕ್ಕಾರಂಭಿಸುತ್ತಿದ್ದ. ಅವನನ್ನು ಹತೋಟಿಗೆ ತರಬಲ್ಲ ಮುತ್ತಮ್ಮನೂ ಚಂದ್ರಲೋಕದಲ್ಲಿರುತ್ತಿದ್ದಳು.

ಒಂದುದಿನ ರಾತ್ರಿ ವಿಶೇಷ ಕೋಲಾಹಲ ನಡೆದಿದೆ. ಬೆಳಿಗ್ಗೆ ರಾಮರಾಜಪ್ಪ ಕಾಫಿ ತೆಗೆದುಕೊಂಡು ಹೊರಡುತ್ತಿದ್ದ. ಅವನು ಹೋದ ಒಂದು ಗಂಟೆಯ ಮೇಲೆ ಇತರರು ಮನೆ ಬಿಡುವುದು ಪದ್ಧತಿಯಾಗಿತ್ತು.

ಮುತ್ತಮ್ಮ ಸ್ನಾನಕ್ಕೆ ನೀರು ಕಾಯಿಸುತ್ತಿದ್ದಳು. ಹೊರಗಡೆ ನಾಗರಾಜ ಎಮ್ಮೆ ಕಟ್ಟುವ ಸ್ಥಳವನ್ನು ಶುಚಿ ಮಾಡುತ್ತಿದ್ದ. ಪುಟ್ಟ ಜತೆಗಾತಿಯರ ಸಂಗಡ ಆಡಿಕೊಳ್ಳುತ್ತಿದ್ದಳು.

ಯಾರೋ ಹೊಸಬ ನೇರವಾಗಿ ಮನೆಯೊಳಗೆ ಪ್ರವೇಶಿಸಿದ. ಅವನು ಒಳಗೆ ಬಂದುದನ್ನು ನೋಡಿ ನಾಗರಾಜ ಕೈತೊಳೆದುಕೊಂಡು ಒಳಗೆ ಬಂದು

"ಯಾರು ಸಾರ್ ನೀವು" ಎಂದು ಕೇಳಿದ.

"ಮುತ್ತಮ್ಮನ ಮನೆ ಇದೇನೋ?"

"ಹೌದು."

"ನಿನ್ನ ಹೆಸರು ನಾಗರಾಜನೋ?"

"ಹೌದು ಸಾರ್."

ಹೊಸಧ್ವನಿ ಕೇಳಿ ಮುತ್ತಮ್ಮನೂ ಹೊರಗೆ ಬಂದು ನಿಂತಳು. ಅವಳನ್ನು ಕಂಡು ಹೊಸಬ

"ನೀನೇ ಮುತ್ತಮ್ಮನೇನು?"

"ಹೌದಪ್ಪಾ – ನೀವು ಯಾರು?"

"ನಾನು ಈ ಡಿವಿಷನ್ನಿನ ಪೋಲೀಸ್ ಸಬ್ ಇನ್‌ಸ್ಪೆಕ್ಟರ್."

'ಪೋಲೀಸ್' ಶಬ್ದ ಕಿವಿಯ ಮೇಲೆ ಬಿದ್ದ ಕೂಡಲೆ ಮುತ್ತಮ್ಮನ

ಜಂಘಾಬಲ ಉಡುಗಿಹೋಯಿತು. ನಾಗರಾಜ ಥರಥರನೆ ನಡುಗುವುದಕ್ಕಾರಂಭಿಸಿದ.

"ಏನು ಸಾರ್ ಬಂದಿದ್ದಿರಿ?"

"ಯಾರೋ ಇನ್ಸ್ಪೆಕ್ಟರ್ ಸಾಹೇಬರಲ್ಲಿ ಅರ್ಜಿ ಕೊಟ್ಟಿದ್ದಾರೆ. ತನಿಖೆಗಾಗಿ ನನ್ನ ಕಳಿಸಿದ್ದಾರೆ."

"ಏನು ಅರ್ಜಿ ಕೊಟ್ಟಿದ್ದಾರೆ?"

ಸಬ್ ಇನ್‌ಸ್ಪೆಕ್ಟರ್ ಶ್ರೀಕಂಠಯ್ಯ ಉಪಚಾರಕ್ಕೆ ಕಾಯದೆ ತೊಟ್ಟಿಯಲ್ಲಿದ್ದ ಕುರ್ಚಿಯ ಮೇಲೆ ಕುಳಿತುಕೊಂಡು

"ಮುತ್ತಮ್ಮ, ನೀನು ಜೀವನ ಹೇಗೆ ನಾಗಿಸುತ್ತಿರುವೆ?"

"ಹಾಲು ಮಾರಿ ಜೀವನ ಮಾಡುತ್ತಿರುವೆನಪ್ಪಾ."

"ಹಾಲು ಮಾರಿಯೋ – ಹೆಣ್ಣು ಮಾರಿಯೋ?"

"ನನಗೆ ಆಗದವರು ಯಾರೋ ನಿಮ್ಮಲ್ಲಿ ಸುಳ್ಳು ಹೇಳಿರಬೇಕು."

"ದಿನವೂ ಇಲ್ಲಿ ವಿಪರೀತ ಗಲಾಟೆಯಂತೆ?"

"ಯಾರಪ್ಪಾ ಹೇಳಿದರು – ಅಯ್ಯೋ ದೇವರೇ – ನಮ್ಮ ಪಾಡಿಗೆ ನಾವು ಕಷ್ಟಪಟ್ಟು ದುಡಿದು ಹೊಟ್ಟೆಹೊರೆದುಕೊಳ್ಳೋದೂ ತಪ್ಪೇ?"

ಶ್ರೀಕಂಠಯ್ಯ ಮುತ್ತಮ್ಮನನ್ನು ನೋಡಿ ಗಹಗಹಿಸಿ ನಕ್ಕು

"ಮುತ್ತಮ್ಮ, ಈ ಆರ್ಭಟ, ವೇಷ ನನ್ನ ಹತ್ತಿರ ನಡೆಯುವುದಿಲ್ಲ. ನಿನ್ನ ಮನೆಯಲ್ಲಿ ಏನೇನು ಆಗುತ್ತಿದೆ – ಯಾರು ಯಾರು ಬರುತ್ತಾರೆ, ಹೋಗುತ್ತಾರೆ ಎಲ್ಲಾ ನನಗೆ ತಪಸೀಲಾಗಿ ಗೊತ್ತಿದೆ. ಒಳಗೆ ಯಾರು ಯಾರು ಇದ್ದಾರೆ ಕರಿ"

"ಯಾರೂ ಇಲ್ಲಪ್ಪಾ. ನನ್ನ ಅಕ್ಕನ ಮಕ್ಕಳು – ಹಳ್ಳಿಯಿಂದ ಬಂದಿದ್ದಾರೆ – ಬೇಕಾದರೆ ನೀವೇ ವಿಚಾರಿಸಿ"

ಎಂದು ನಾಗೂ, ವೆಂಕಟಿ, ಬಾಲುವನ್ನು ಕರೆದಳು.

"ಇವರೆಲ್ಲಾ ನಿನ್ನ ಅಕ್ಕನ ಮಕ್ಕಳೋ?"

ಎಂದು ವೆಂಕಟಿಯ ಕಡೆ ತಿರುಗಿ

"ನೀನು ಸುಣ್ಣಕಲ್ಲು ಪೇಟೆಯಲ್ಲಿ ಇರಲಿಲ್ಲವೇನೇ?"

ಎಂದು ಕೇಳಿದ. ವೆಂಕಟಿ ತಲೆಯಲ್ಲಾಡಿಸಿದಳು. ತನ್ನ ಚರಿತ್ರೆ ಮುಗಿ

ಮಾಜಿ ಪ್ರಯೋಜನವಿಲ್ಲವೆಂದು ಮುತ್ತಮ್ಮ ತಿಳಿದು ಮೆಲ್ಲನೆ ಹೊರಗೆ ಜಾರಿ, ನಾಗರಾಜನನ್ನು ಕರೆದಳು. ನಾಗರಾಜನ ಉಸಿರೇ ಕಟ್ಟಿಹೋಗಿತ್ತು.

"ಏನು ಮಾಡೋದು ಮುತ್ತಾ. ಇವನು ನಮ್ಮನ್ನು ಸ್ಟೇಷನ್ನಿಗೆ ಎಳೆದುಕೊಂಡು ಹೋಗುತ್ತಾನೆ. ಐವತ್ತೋ ನೂರೋ ಅವನಿಗೆ ಋಣತೆತ್ತು ಬಾಯಿಮುಚ್ಚಿಸೋದು ಲೇಸು"

"ನೀನೇ ಆ ಪ್ರಸ್ತಾಪ ಅವನ ಹತ್ತಿರ ಮಾಡು – ವೆಂಕಟಿ, ನಾಗುವನ್ನು ರೂಮಿಗೆ ಹೋಗು ಎಂದು ಹೇಳಿ ಬಾಲುವನ್ನು ಇಲ್ಲಿ ಕಳುಹಿಸು"

ಸಂಧಾನ, ಅನುಸಂಧಾನವಾಗುತ್ತಿದ್ದುದನ್ನು ಕಂಡು ಶ್ರೀಕಂಠಯ್ಯ

"ಪರಾರಿ ಏರ್ಪಾಟೇನೋ ನಾಗರಾಜಾ !"

"ಇಲ್ಲ ಸಾರ್. ದೊಡ್ಡ ಮನುಷ್ಯರು – ಬಡವರ ಮನೆಗೆ ಬಂದಿದ್ದೀರಿ – ಕಾಫಿ ತಂದುಕೊಡು ಎಂದು ಮುತ್ತಮ್ಮ ಹೇಳುತ್ತಿದ್ದಳು."

"ನಾನು ಕಾಫಿ ಗೀಫಿ ತೆಗೆದುಕೊಳ್ಳುವುದಿಲ್ಲ."

"ಇನ್ನೇನು ತೆಗೆದುಕೊಳ್ಳುತ್ತೀರಿ ಸಾರ್ ?"

"ಏನೂ ತೆಗೆದುಕೊಳ್ಳುವುದಿಲ್ಲ – ನಿಮ್ಮನ್ನೆಲ್ಲಾ ಸ್ಟೇಷನ್ನಿಗೆ ಕರೆದುಕೊಂಡು ಹೋಗುತ್ತೇನೆ."

ನಾಗರಾಜ ಕಣ್ಣಲ್ಲಿ ನೀರು ತಂದುಕೊಂಡು ಶ್ರೀಕಂಠಯ್ಯನ ಪಾದ ಹಿಡಿದು

"ಬಡವರು – ನಮ್ಮನ್ನ ಕಷ್ಟಕ್ಕೆ ಸಿಕ್ಕಿಸಬೇಡಿ ಸಾರ್. ಹೊಟ್ಟೆಯ ಪಾಡು – ಏನಾದರೂ ಮಾಡಬೇಕಲ್ಲ !"

"ಏನಾದರೂ ಮಾಡಬೇಕೆಂದು ಕಂಡವರ ಹೆಣ್ಣುಮಕ್ಕಳ ವ್ಯಾಪಾರ ಮಾಡುತ್ತೀರೇನು ?"

"ಈ ಸಾರೆ ಕ್ಷಮಿಸಿಬಿಡಿ ಸಾರ್. ಸ್ಟೇಷನ್ನಿಗೆ ಎಳೆದುಕೊಂಡು ಹೋಗಬೇಡಿ – ನಾವು ಮುಂದೆ ತಲೆಯೆತ್ತಿ ಬಾಳುವುದು ಕಷ್ಟವಾಗುತ್ತದೆ. ನಿಮ್ಮ ಉಪಕಾರ ನಾವು ಮರೆಯುವುದಿಲ್ಲ. ನೀವು ಏನು ಹೇಳಿದರೂ ಮಾಡುತ್ತೇವೆ."

"ಮುತ್ತಮ್ಮನನ್ನು ಕಳುಹಿಸು ಹೋಗು"

ಎಂದು ಶ್ರೀಕಂಠಯ್ಯ ಆಜ್ಞೆ ವಿಧಿಸಿದ. ನಾಗರಾಜನ ಬಾಯಿಂದ ನಡೆದ ಸಂಭಾಷಣೆ ಕೇಳಿ ಮುತ್ತಮ್ಮ ಮತ್ತಷ್ಟು ಭಯಗೊಂಡಳು. ನೂರುರೂಪಾಯಿ

ನೋಟುಗಳನ್ನು ಸೊಂಟದಲ್ಲಿ ಇರಿಕಿಕೊಂಡು ಶ್ರೀಕಂಠಯ್ಯನ ಎದುರಿಗೆ ನಿಂತಳು.

"ಕುಳಿತುಕೋ ಮುತ್ತಮ್ಮ."

ಮುತ್ತಮ್ಮ ಕುಳಿತುಕೊಂಡು

"ನನ್ನ ಕಷ್ಟಕ್ಕೆ ಸಿಕ್ಕಿಸಿದರೆ ನಿಮಗೇನಪ್ಪಾ ಲಾಭ?"

ಎಂದು ಕೇಳಿದಳು.

"ಕಷ್ಟಕ್ಕೆ ಸಿಕ್ಕಿಸದಿದ್ದರೆ ಏನು ಲಾಭ?"

ಎಂದು ಶ್ರೀಕಂಠಯ್ಯ ಮರುಪ್ರಶ್ನೆ ಕೇಳಿದ.

ಮುತ್ತಮ್ಮ ಸೊಂಟದಿಂದ ನೋಟಿನ ಕಂತೆ ತೆಗೆದು ಶ್ರೀಕಂಠಯ್ಯನ ಕೈಗಿತ್ತಳು. ಶ್ರೀಕಂಠಯ್ಯ ಹಣವೆಣಿಸಿಕೊಂಡು

"ಈ ಕೇಸು ಕೋರ್ಟಿಗೆ ಹೋದರೆ ನೂರು ರೂಪಾಯಿಯಲ್ಲಿ ಮುಗಿಯುವುದಿಲ್ಲ ಮುತ್ತಮ್ಮ."

"ಹೌದಪ್ಪಾ, ನಿಮ್ಮ ಕಾಲು ಹಿಡಿದು ಬೇಡಿಕೊಳ್ಳುತ್ತೇನೆ. ನನ್ನ ಕಾಪಾಡಿ ಪುಣ್ಯ ಕಟ್ಟಿಕೊಳ್ಳಿ"

ಶ್ರೀಕಂಠಯ್ಯ ಸ್ವಲ್ಪಹೊತ್ತು ಮಾತನಾಡದೆ ಯೋಚನಾಕ್ರಾಂತನಾಗಿ

"ಆ ಹುಡುಗಿ ಯಾರು?"

"ಬಾಲೂನೇ"

"ಹೌದು."

"ಹೊಸದಾಗಿ ಬಂದಿದೆ. ಕರೆಯಲೇನು?—ಇರುವ ಹಾಗಿದ್ದರೆ ಇರಿ. ಒಳ್ಳೆಯ ಹುಡುಗಿ."

ಕಿಸೆ ಸೇರಿದ್ದ ನೋಟುಗಳನ್ನು ಇಟ್ಟುಕೊಳ್ಳಬೇಕೋ ಹಿಂದಿರುಗಿಸಬೇಕೋ ಎಂದು ಶ್ರೀಕಂಠಯ್ಯ ಕ್ಷಣಕಾಲ ಆಲೋಚಿಸಿದ. ಹಣ ಹಿಂದಿರುಗಿಸುವುದು ದೌರ್ಬಲ್ಯ ವ್ಯಕ್ತಪಡಿಸಿದ ಹಾಗಾಗುತ್ತದೆಂದು ಭಾವಿಸಿ

"ನಾನು ಇಲ್ಲಿ ಇದ್ದ ಸಂಗತಿ ಬಾಯಿಗೀಯಿ ಬಿಟ್ಟೀಯಾ?"

"ಉಂಟೇ ಅಪ್ಪಾ. ನನಗೆ ತಿಳಿಯದೇ?"

ಮುತ್ತಮ್ಮ ಗೆಲುವಿನ ನಗೆ ನಕ್ಕಳು. ಬಾಲು ಮುಖದಲ್ಲಿ ಮಾತ್ರ ಕಳೆ ಅಳಿದು ಹೋಗಿತ್ತು.

ಶ್ರೀಕಂಠಯ್ಯ ಹೊರಗೆ ಬರುವ ವೇಳೆಗೆ ಮುತ್ತಮ್ಮ ಅವನಿಗೆ ತಿಂಡಿ ಕಾಫಿ ತರಿಸಿಟ್ಟಿದ್ದಳು.

ಅವನು ಉಪಾಹಾರ ಮಾಡುತ್ತಿದ್ದಾಗ ಮುತ್ತಮ್ಮ

"ನಿಮ್ಮ ಪರಿಚಯವಾದದ್ದು ತುಂಬ ಸಂತೋಷ. ಮೇಲಿಂದ ಮೇಲೆ ಬರುತ್ತೀರಿ."

"ಹಾಗೇ ಆಗಲಿ. ಹೊಸಬರು ಇನ್ನು ಯಾರಾದರೂ ಬರುತ್ತಾರೆಯೋ?"

"ನಿಮ್ಮ ಮನಸ್ಸು ತಣಿಯುವಷ್ಟು ನಾನು ಕರೆದುಕೊಂಡು ಬರುತ್ತೇನೆ. ಇನ್ನೊಂದು ವಿಷಯ. ನನ್ನ ಮೇಲೆ ಕಂಪ್ಲೇಂಟ್ ಕೊಟ್ಟವರು ಯಾರು?"

"ಅದು ರಹಸ್ಯ – ನಾನು ಬಯಲಿಗೆ ಹಾಕಬಾರದು."

"ನೀವು ನಮ್ಮವರೇ ಆದಿರಿ. ನಮ್ಮನಮ್ಮಲ್ಲಿ ಗುಟ್ಟೇಕೆ?"

"ನೋಡು ಮುತ್ತಮ್ಮ, ನೀನು ಇಲ್ಲಿರುವುದು ಸರಿಯಲ್ಲ. ನಿನಗೆ ಮನೆ ಕೊಟ್ಟಿರುವ ಆಸಾಮಿ ಶುದ್ಧ ಅಯೋಗ್ಯ. ಕಂಪ್ಲೇಂಟ್ ಕೊಟ್ಟವನು ಅವನೇ."

"ಅವನ ಮನೆ ಹಾಳಾಗ. ನಮ್ಮ ಸುದ್ದಿ ಕಟ್ಟಿಕೊಂಡು ಅವನಿಗಾಗ ಬೇಕಾದದ್ದೇನು. ಅವನಿಗೆ ತಕ್ಕದ್ದು ಮಾಡದಿದ್ದರೆ ನನ್ನ ಹೆಸರು ಮುತ್ತಮ್ಮ ಅಲ್ಲ."

"ಮುತ್ತಮ್ಮ, ನನ್ನ ಮಾತು ಕೇಳು. ನೀನು ಅವನ ಮೇಲೆ ವ್ಯಾಜ್ಯಕ್ಕೆ ನಿಂತೆಯೋ ನನ್ನ ಸ್ಥಿತಿ ದುಸ್ಥಿತಿಯಾಗುತ್ತದೆ. ಈ ಸಾರಿ ನಾನು 'ಬಿ' ಷೀಟ್ ಕೊಡಬಹುದು; ಆದರೆ ಪ್ರತಿಸಲ ಹಾಗೆ ಮಾಡಲು ಬರುವುದಿಲ್ಲ."

"ಹಾಗಾದರೆ ನಾನು ಏನು ಮಾಡಲಪ್ಪಾ?"

"ಏನೂ ಮಾಡಬೇಡ. ಈ ಮನೆ ಬಿಟ್ಟುಬಿಡು."

"ಮನೆ ಬಿಟ್ಟರೆ ಬೇರೆ ಮನೆ ಸಿಕ್ಕುತ್ತದೆಯೋ?"

"ಆ ವಿಷಯ ನನಗಿರಲಿ. ನಿನಗೆ ಮನೆ ನಾನು ಮಾಡಿಕೊಡುತ್ತೇನೆ"

"ಅಷ್ಟು ಉಪಕಾರ ಮಾಡಪ್ಪಾ."

ಶ್ರೀಕಂಠಯ್ಯನನ್ನು ಕಳುಹಿಸಿ ಬಂದು ನಾಗರಾಜ

"ತನ್ನ ಕೆಲಸಾನೂ ಮಾಡಿಕೊಂಡು, ಹಣಾನೂ ಜೇಬಿಗೆ ಬಿಟ್ಟನಲ್ಲಾ ಮುತ್ತಾ"

ಎಂದ.

"ಹೋಗಲಿಬಿಡು. ಎಷ್ಟೋ ಬರತ್ತೆ ಎಷ್ಟೋ ಹೋಗತ್ತೆ. ಜಿನ್ನು ಗಾವಲಿಗೆ ಒಬ್ಬ ಪೋಲೀಸಿನವನು ಇರುವುದು ಒಳ್ಳೆಯದು."

ಶ್ರೀಕಂಠಯ್ಯ ಸುಮ್ಮನೆ ಕೂಡಲಿಲ್ಲ. ಮಾತು ಕೊಟ್ಟಿದ್ದಂತೆ ಮುತ್ತಮ್ಮನ ಮೇಲಿನ ಕಂಪ್ಲೇಂಟಿಗೆ 'ಬಿ' ಷೀಟ್ ಕೊಟ್ಟು ಅವಳಿಗೆ ಒಂದು ಮನೆಯನ್ನೂ ಗೊತ್ತುಮಾಡಿದ. ತಾನೇ ಎರಡು ತಿಂಗಳ ಬಾಡಿಗೆ ಹಣ ಅಡ್ವಾನ್ಸ್ ಕೊಟ್ಟು, ರಸೀತಿಯನ್ನೂ, ಬೀಗದ ಕೈಯನ್ನೂ ತಂದು ಮುತ್ತಮ್ಮನ ಕೈಯಲ್ಲಿಟ್ಟ.

"ಬಾಡಿಗೆ ಹೆಚ್ಚಾಯಿತಲ್ಲಪ್ಪ"

"ಮೂವತ್ತು ರೂಪಾಯಿಗೆ ಕಡಿಮೆಯಾಗಿ ಮನೆ ಎಲ್ಲಿ ಸಿಕ್ಕತ್ತೆ ಮುತ್ತಮ್ಮ. ಮನೆ ಚೆನ್ನಾಗಿದೆ. ಯಾರ ಬಾಧಕವೂ ಇಲ್ಲ."

ಮುತ್ತಮ್ಮ ಅಂದೇ ಗುಟ್ಟಹಳ್ಳಿಗೆ ಹೋಗಿ ತನ್ನ ಹೊಸ ಬಾಡಿಗೆ ಮನೆಯನ್ನು ಸಾರಿಸಿ, ಗುಡಿಸಿ, ಸುಣ್ಣಹೊಡೆದು ಬಂದಳು.

ಶ್ರೀಕಂಠಯ್ಯ ವಿವರಿಸಿದಂತೆ ಮನೆ ಅಚ್ಚುಗಟ್ಟಾಗಿತ್ತು. ಪ್ರವೇಶ ಮಾಡಿದ ಕೂಡಲೆ ಒಂದು ಸಣ್ಣತೊಟ್ಟಿ, ಅಲ್ಲಿಯೇ ಮಹಡಿಗೆ ಮೆಟ್ಟಲು. ತೊಟ್ಟಿಯ ಪಕ್ಕದಲ್ಲಿ ಒಂದು ಕೋಣೆ. ಒಳಗೆ ಒಂದು ವಿಶಾಲವಾದ ತೊಟ್ಟಿ, ಅದರ ಬದಿಗೆ ಒಂದು ರೂಮು, ಅಡಿಗೆಯ ಮನೆ, ಬಚ್ಚಲು ಮನೆ. ಮಹಡಿಯ ಮೇಲೆ ಕೆಳಗಿನ ತೊಟ್ಟಿಯ ಪ್ರಮಾಣದಲ್ಲಿ ಒಂದು ವಿಶಾಲವಾದ ತೊಟ್ಟಿ. ಮನೆಯ ಹಿಂದೆ ಅಂಗಳ. ದನ ಕಟ್ಟುವುದಕ್ಕೆ ಬೇಕಾದಷ್ಟು ಸ್ಥಳವಿತ್ತು. ನಾಗರಾಜ, ಪುಟ್ಟ ಮನೆ ನೋಡಿ ಹಿರಿಹಿರಿ ಹಿಗ್ಗಿದರು.

ಹೊಸಮನೆಗೆ ಪ್ರವೇಶಮಾಡಿದ ಎರಡು ಮೂರು ದಿವಸ ನಾಗರಾಜನಿಗೆ ಸ್ವಲ್ಪವೂ ಬಿಡುವಿಲ್ಲ. ಮನೆಗೆ ಬರುತ್ತಿದ್ದವರನ್ನೆಲ್ಲಾ ಹುಡುಕಿ ಅವರಿಗೆ ಮನೆಯ ಪರಿಚಯ ಮಾಡಿಕೊಡುವ ಕೆಲಸ ಅವನ ಪಾಲಿಗೆ ಬಿದ್ದಿತ್ತು.

ಶ್ರೀಕಂಠಯ್ಯ ಕೆಲವು ದಿವಸಗಳೊಳಗಾಗಿ ಮುತ್ತಮ್ಮನ ಮನೆಗೆ ಹಳಬನಾದ. ರಾಮರಾಜಪ್ಪ, ವೆಂಕಟಿ, ನಾಗಿ ಎಲ್ಲರೂ ಅವನ ಸ್ನೇಹಿತರಾದರು.

ಶ್ರೀಕಂಠಯ್ಯ ಕಾಸುಬಿಚ್ಚದೆ ಇದ್ದರೂ ನೂರಾರು ವಿಧದಲ್ಲಿ ಮುತ್ತಮ್ಮನಿಗೆ ನೆರವಾಗುತ್ತಿದ್ದ. ಬ್ರ್ಯಾಂದಿ ಬೀರ್‌ಗಳಿಗೆ ಕ್ಷಾಮವಿಲ್ಲದಂತೆ ಅವನು ನೋಡಿ ಕೊಳ್ಳುತ್ತಿದ್ದ. ಆಹಾರ ಪದಾರ್ಥಗಳಿಗೆ ರೇಷನ್ ಇದೆ ಎಂಬುದನ್ನೇ ಮರೆಸಿದ್ದ.

೬

ಶ್ರೀನಾಥನ ಮನಸ್ಸಿನಲ್ಲಿದ್ದ ಅನುಮಾನ ಪರಿಹಾರಮಾಡಿ, ಅವನ ಮನಸ್ಸಿಗೆ ನೆಮ್ಮದಿಯನ್ನುಂಟುಮಾಡಬೇಕೆಂದು ಕಮಲ ನಿರ್ಧರಿಸಿದ್ದಳು. ಎರಡು ದಿವಸ 'ಅರುಣ' ಥಿಯೇಟರ್ ಕಡೆ ಸುಳಿಯಲಿಲ್ಲ. ಶ್ರೀನಾಥ ಕಮಲನ ಮನೆಬಿಟ್ಟಮೇಲೆ ಎರಡು ದಿವಸವಾದರೂ ರೂಮಿನ ಕಡೆ ಹೋಗಲಿಲ್ಲ.

ಶ್ರೀನಾಥ ಮನೆಯಲ್ಲಿ ಮಂಡಿಸಿದುದನ್ನು ಕಂಡು ಭಾಗ್ಯಮ್ಮ ವ್ಯಗ್ರ ಳಾದಳು. ಗವಿಯಪ್ಪ ದಿನಕ್ಕೆ ಹತ್ತು ಸಲವಾದರೂ ಸಿದ್ದನ ಕೈಯಲ್ಲಿ ಹೇಳಿ ಕಳಿಸುತ್ತಿದ್ದ. ಕಮಲ ಅಡಿಗೆಯ ಮನೆಗೆ ಕಾಲಿಟ್ಟಕೂಡಲೆ ಭಾಗ್ಯಮ್ಮ ಲೊಟ ಗುಟ್ಟುವುದಕ್ಕೆ ಆರಂಭಿಸುತ್ತಿದ್ದಳು.

"ಆಯಪ್ಪನ್ನ ಹೋಗು ಅನ್ನು"

"ಹೇಗೆ ಹೇಳಲೇ ಅಮ್ಮ."

"ಗವಿಯಪ್ಪನನ್ನು ನೋಡಿ ಎರಡು ದಿವಸವಾಯಿತಲ್ಲಾ !"

"ಆದರೆ ಆಯಿತು. ಅವನಿಗೆ ನಾನು ಪತ್ರ ಬರೆದುಕೊಟ್ಟಿಲ್ಲ."

"ನಿನ್ನ ಮುಖಕ್ಕೆ ಬೆಂಕಿ ಹಾಕಿದರು. ಅನಿಷ್ಟ ಮುಂಡೇದೇ! ಕತ್ತೆ ಹಾಗೆ ಬೆಳೆದರೂ ನಿನಗೆ ಪ್ರಪಂಚಜ್ಞಾನ ಬರಲಿಲ್ಲ."

"ನನ್ನ ಬಯ್ದರೇನು ಸಾರ್ಥಕ."

ತಾಯಿ, ಮಗಳ ಸಂವಾದ ಹರಕು ಮುರುಕಾಗಿ ಶ್ರೀನಾಥನ ಕಿವಿಯ ಮೇಲೆ ಬಿದ್ದಿತು.

"ಏನದು ಕಮಲಾ, ನಿಮ್ಮಮ್ಮ ಏತಕ್ಕೋ ಸಿಡಗುಟ್ಟಿಕೊಳ್ಳು ತ್ತಿದ್ದಳಲ್ಲಾ."

" ಏನೂ ಇಲ್ಲ. ಅವಳ ಸ್ವಭಾವ."

" ಇರಲಿ ಹೇಳು. ನನ್ನಲ್ಲೇಕೆ ಮುಚ್ಚುಮರೆ ಮಾಡಬೇಕು ?"

" ಇನ್ನೇನು ಅವಳ ಪುರಾಣ ಇದ್ದೇ ಇದೆಯಲ್ಲಾ – ಸಿನೀಮಾಕ್ಕೆ ಹೋಗಿ ಎರಡು ದಿವಸವಾಯಿತು ಎಂದು ಅವಳ ಗೋಳು."

" ಇವತ್ತು ಹೋಗಿ ಬನ್ನಿ. ನಾನೂ ರೂಮಿಗೆ ಹೋಗಿ ಬರುತ್ತೇನೆ. ಕಾಗದಗಳು ಏನು ಬಂದಿವೆಯೋ ನೋಡಿಲ್ಲ."

" ಅವಳು ಏನಾದರೂ ಅಂದುಕೊಳ್ಳಲಿ – ನೀವು ಮನಸ್ಸು ಚಿಕ್ಕದು ಮಾಡಿಕೊಳ್ಳಬೇಡಿ."

" ಅವಳಿಗಾಗಿ ಅಲ್ಲ – ನನಗಾಗಿಯೇ ನಾನು ಪೋಗಬೇಕಾಗಿದೆ. ವ್ಯರ್ಥ ಕಾಲಕ್ಷೇಪ ಮಾಡುವುದು ಯಾವ ನ್ಯಾಯ ?"

" ಈಗ ನೀವು ಹೋದರೆ ಬರುವುದು ಯಾವಾಗ ?"

" ನಾಳೆ ಸಂಜೆ ಬರುತ್ತೇನೆ."

" ಬೇಗ ಬಂದು ಬಿಡಿ."

" ಹಾಗೇ ಆಗಲಿ "

ಅವನು ಹೊರಟ ಕೂಡಲೆ ಭಾಗ್ಯಮ್ಮ ಸಿದ್ದನ ಕೈಯಲ್ಲಿ ಕೂಡಲೆ ಗವಿಯಪ್ಪನಿಗೆ ಸುದ್ದಿ ಮುಟ್ಟಿಸಿದಳು. ಕಮಲನ ಮನೆಯಲ್ಲಿ ಕಳೆದ ಎರಡು ದಿನ ಶ್ರೀನಾಥನಿಗೆ ಹೊಸ ವಿಚಾರವಾಹಿನಿಯನ್ನು ನಿರ್ದೇಶಿಸಿದ್ದವು. ಪ್ರಣಯದ ಅನಂತ ರೂಪರೇಷೆ, ವಿಲಾಸ, ವೈಭವಗಳನ್ನು ವರ್ಣಿಸಿ ಒಂದು ಮಹಾ ಕಾವ್ಯ ಬರೆಯಬೇಕೆಂದು ಅವನ ಮನಸ್ಸು ತವಕಪಡುತ್ತಿತ್ತು. ' ಕಮಲನಿಗಿದು ನನ್ನ ಕಾಣಿಕೆ ' ಎಂದು ಶ್ರೀನಾಥ ಹೇಳಿಕೊಂಡ.

ಶ್ರೀನಾಥನ ಚಿತ್ತವನ್ನು ಯಾವದೋ ಮಹಾಶಕ್ತಿ ಆಕ್ರಮಿಸಿತ್ತು. ರೂಮು ಸೇರಿದವನೇ ಮೇಜಿನ ಮುಂದೆ ಕುಳಿತ. ಸರಳ ರಗಳೆಯ ಮಹಾಕಾವ್ಯ ಪರ್ವತಧಾರೆಯಂತೆ ಹರಿಯಿತು. ಸಂಜೆಯಾದುದೂ ಅವನ ಗಮನಕ್ಕೆ ಬರಲಿಲ್ಲ. ರಾತ್ರಿಯೂ ಒಂದೇ ಸಮನೆ ಕಾವ್ಯರಚನೆಯಲ್ಲಿ ತೊಡಗಿದ.

ಬೆಳಗಿನ ಝಾಮಕ್ಕೆ ನಿದ್ರೆ ಹತ್ತಿತು. ನಿದ್ರೆಯಲ್ಲಿಯೂ ಮನಸ್ಸು ಕಾವ್ಯಸೃಷ್ಟಿಯಲ್ಲಿ ತೊಡಗಿತ್ತು.

ಎದ್ದವನೇ ಸ್ನಾನಮಾಡಿ, ಉಪಾಹಾರ ತೆಗೆದುಕೊಂಡು ಕಮಲನ ಮನೆಯ ಕಡೆ ಧಾವಿಸಿದ. ತಾನು ಬರೆದಿದ್ದುದನ್ನು ಕಮಲನಿಗೆ ಓದಿ ತೋರಿಸಬೇಕೆಂಬ ಆತುರ ದೇಹ ಶ್ರಮವನ್ನೂ ಕಡೆಗಾಣಿಸುವಂತೆ ಮಾಡಿತ್ತು.

ಕಮಲನ ಮನೆ ಒಳಹೊಕ್ಕ. ತೊಟ್ಟಿಯಲ್ಲಿ ಯಾರೂ ಕಾಣಲಿಲ್ಲ. ನೇರವಾಗಿ ರೂಮು ಪ್ರವೇಶಿಸಿದ. ಕಮಲ ರೂಮಿನಲ್ಲಿರಲಿಲ್ಲ. ಆದರೆ ಶ್ರೀನಾಥನ ಕಣ್ಣಿಗೆ ಬಿದ್ದ ದೃಶ್ಯ ಅವನನ್ನು ಬುದ್ಧಿಶೂನ್ಯನನ್ನಾಗಿ ಮಾಡಿತು. ತಲೆತಿರುಗಿ ಬಂತು. ಕುರ್ಚಿಯ ಮೇಲೆ ಕುಕ್ಕರಿಸಿಬಿಟ್ಟ.

ಪ್ರತಿಕ್ರಿಯೆಯ ಆವೇಗ ಸ್ವಲ್ಪ ಕಡಿಮೆಯಾದ ಮೇಲೆ ಸುತ್ತಲೂ ಕಣ್ಣು ಹೊರಳಿಸಿ ನೋಡಿದ. ಹಾಸಿಗೆಯ ಮೇಲೆ ಹೂವಿನ ಎಸಳುಗಳು ಬಿದ್ದಿದ್ದವು. ಮಂಚದ ಕೆಳಗೆ ವೀಳೆಯದೆಲೆಯ ನಾರುಗಳು. ಮೇಜಿನ ಮೇಲೆ ಮುಗಿದ ವಿಸ್ಕಿ ಶೀಷೆ, ಎರಡು ಗ್ಲಾಸುಗಳು – ಮೇಜಿನ ಕೆಳಗೆ ನಾಲ್ಕು ಸೋಡಾ ಶೀಷೆಗಳು.

ಶ್ರೀನಾಥನ ಮನಸ್ಸಿನಲ್ಲಿ ಅನುಮಾನ ಉಳಿಯಲಿಲ್ಲ. ತಾನು ಬಂದುದನ್ನು ತಿಳಿಸದೆ ಹೊರಟುಹೋಗಬೇಕೆಂದು ಯೋಚಿಸಿದ. ಎದ್ದು ಹೊರಡುವುದಕ್ಕೂ ಅವನ ದೇಹದಲ್ಲಿ ತ್ರಾಣ ಉಳಿದಿರಲಿಲ್ಲ.

ಒಳಗೆ ಯಾರೋ ಇದ್ದುದನ್ನು ಬಾಗಿಲಿನ ಅಂಚಿನಲ್ಲಿ ಕಂಡ ಕಮಲ ರೂಮಿನ ಒಳಗೆ ಬಂದಳು. ಶ್ರೀನಾಥನನ್ನು ನೋಡಿ ಅವಳಿಗೆ ಸಿಡಿಲು ಬಡಿದಂತಾಯಿತು. ಅಧೀರತೆಯನ್ನು ತೋರಗೊಡದೆ

" ಯಾವಾಗ ಬಂದಿರಿ " ಎಂದಳು.

ಶ್ರೀನಾಥ ಕತ್ತೆತ್ತಿ ಅವಳನ್ನೊಮ್ಮೆ ದುರುದುರನೆ ನೋಡಿದ. ಅವನ ಕಣ್ಣುಗಳು ಕೆಂಡ ಕಾರುತ್ತಿದ್ದವು.

ಕಮಲ ಶ್ರೀನಾಥನ ಬಳಿ ಸರಿದು ಅವನನ್ನು ನೇವರಿಸಲೆತ್ನಿಸಿದಳು. ಶ್ರೀನಾಥ ಅವಳ ಕೈ ಕಿತ್ತು ದೂಡಿದ.

" ಸುಮ್ಮನೆ ಏಕೆ ಕೋಪಮಾಡಿಕೊಳ್ಳುವಿರಿ ?"

" ನಿನ್ನ ಮೇಲೆ ಏಕೆ ಕೋಪಮಾಡಿಕೊಳ್ಳಲಿ – ನನ್ನ ಮೇಲೇ ನನಗೆ ಕೋಪ."

" ನಿಮ್ಮ ಮೇಲೆ ಕೋಪಮಾಡಿಕೊಳ್ಳುವುದಕ್ಕೆ ನೀವು ಅಪರಾಧಿಗಳಲ್ಲ, ನಾನು ಅಪರಾಧಿ."

" ನಿನ್ನಂಥ ವಂಚಕಳಲ್ಲಿ ವಿಶ್ವಾಸವಿಟ್ಟುದು ನನ್ನ ಮಹಾಪರಾಧ."

" ನಾನು ವಂಚನೆಮಾಡಿಲ್ಲ."

" ಯಾವ ಬಾಯಲ್ಲಿ ಆ ಮಾತು ಹೇಳುತ್ತಿರುವೆ. ಒಮ್ಮೆ ಅನ್ನ, ಒಮ್ಮೆ ವಿಷವನ್ನೇಕೆ ಉಣ್ಣಿಸುವೆ ? "

" ಆದದ್ದೇನು ತಿಳಿದುಕೊಂಡಾದರೂ ಕೋಪಮಾಡಿಕೊಳ್ಳಿ."

" ಏನಾಯಿತು ? ರೂಮು ತುಂಬ ಸಾಕ್ಷಿ ಹರಡಿರುವಾಗ ' ಏನಾಯಿತು ' ಎಂದು ಕೇಳಬೇಕಾದ ಅಗತ್ಯವೇನು ? "

" ಅಗತ್ಯವಿದೆ – ನಿನ್ನೆ ರೂಮಿನಲ್ಲಿ ನಾನು ಮಲಗಿರಲಿಲ್ಲ. ನಾನೂ ಅಮ್ಮ ತೊಟ್ಟಿಯಲ್ಲಿ ಮಲಗಿದ್ದೆವು."

" ರೂಮಿನಲ್ಲಿ ಯಾರಿದ್ದರು ? "

" ನನ್ನ ಯಜಮಾನರು."

" ಒಬ್ಬರೇ ಎರಡು ಗ್ಲಾಸಿನಲ್ಲಿ ಕುಡಿದರಲ್ಲವೇ ? "

" ಅವರ ಹೆಂಡತಿಯೂ ಬಂದಿದ್ದರು."

" ಆಕೆಯೂ ಕುಡಿಯುತ್ತಾರೇನೋ ? "

" ಕುಡಿಯುತ್ತಾರೆ."

" ನೀನು ನೋಡುತ್ತ ಕುಳಿತಿದ್ದೆ."

" ಇಲ್ಲ – ಹೊರಗೆ ಮಲಗಿದ್ದೆ – ಅಮ್ಮ ನೋಡುತ್ತ ಕುಳಿತಿದ್ದಳು."

" ಇದನ್ನು ನಂಬು ಎಂದು ಹೇಳುವೆಯಾ ? "

" ಧೈರ್ಯವಾಗಿ ಹೇಳುತ್ತೇನೆ."

" ಪಾಪಕ್ಕೆ ಹೇಸದ ಸ್ವಭಾವಕ್ಕೆ ಧೈರ್ಯವಿಲ್ಲದಿರುತ್ತದೆಯೇ ? "

" ಹಾಗನ್ನಬೇಡಿ."

" ಹೋಗಲಿ – ನಿನ್ನ ಆಕ್ಷೇಪಿಸಿ ಏನು ಪ್ರಯೋಜನ. ಇನ್ನು ನಾನು ಹೊರಡಬಹುದಷ್ಟೇ ? "

ಕಮಲ ಬಾಗಿಲಿಗೆ ಅಡ್ಡ ನಿಂತು

" ಹೊರಡುವುದೆಲ್ಲಿಗೆ ? "

"ಸ್ಮಶಾನಕ್ಕೆ. ನಾನು ಎಲ್ಲಿಗೆ ಹೋದರೆ ನಿನಗೇನು ?"

"ನಾನು ನಿಮ್ಮ............"

"ಮುಚ್ಚು ಬಾಯಿ. ಇನ್ನು ಆ ಮಾತು ನನ್ನ ಎದುರಿಗಾಡಬೇಡ."

"ನನ್ನ ಮಾತು ನಂಬಿ."

"ನಂಬಿದುದಕ್ಕೆ ಆದ ಫಲ ಕಣ್ಣೆದುರಿಗೇ ಇದೆಯಲ್ಲಾ. ನೀನು ಒಂದು ಪತಂಗ – ನಿನಗೆ ಹಲವು ಹೂಗಳು ಬೇಕು – ಹಲವು ಬಗೆಯ ಬ್ರ್ಯಾಂದಿ, ವಿಸ್ಕಿ ಬೇಕು."

ಕಮಲ ಮುಖ ಮುಚ್ಚಿಕೊಂಡಳು. ಅವಳ ಎರಡು ಕಣ್ಣುಗಳಲ್ಲಿಯೂ ನೀರು ಕೋಡಿಯಾಗಿ ಹರಿಯಿತು.

"ನನಗೆ ಸತ್ಯವನ್ನೇಕೆ ಹೇಳಲಿಲ್ಲ. ಈ ಹೊಲಸು ಕೂಪ ಬಿಡುವುದು ಸಾಧ್ಯವಿಲ್ಲವೆಂದೇಕೆ ಹೇಳಲಿಲ್ಲ. ತಪ್ಪುದಾರಿ ತುಳಿಸಿ ನನ್ನ ಜೀವನವನ್ನೇಕೆ ನುಚ್ಚುನೂರು ಮಾಡಿಬಿಟ್ಟೆ. ನಿನಗೆ ನಾನು ಯಾವ ಅನ್ಯಾಯ ಮಾಡಿದೆ ಹೇಳು – ಯಾವ ದ್ರೋಹ ಮಾಡಿದೆ ಹೇಳು – ನೀನೇ ನನ್ನ ದೇವರೆಂದು ಪೂಜಿಸುತ್ತಿದ್ದೆನಲ್ಲಾ – ಕೊನೆಗೂ ನನ್ನ ದೇವರು ಮದ್ಯ ಮಾಂಸದ ನೈವೇದ್ಯ ಕೇಳುವ ಹೊಲೆಯರ ದೇವರಾಗಬೇಕೇ ?"

ಶ್ರೀನಾಥನಿಗೆ ದುಃಖ ತಡೆಯಲಾಗಲಿಲ್ಲ. ಎಳೆಯ ಮಕ್ಕಳಂತೆ ಅತ್ತುಬಿಟ್ಟ. ಅವನ ಬಳಿ ಸರಿದು ಸಂತೈಸುವುದಕ್ಕೆ ಕಮಲ ಒಂದೆರಡು ಬಾರಿ ಪ್ರಯತ್ನಿಸಿದಳು. ಅವಳು ತನ್ನನ್ನು ಮುಟ್ಟುವುದಕ್ಕೆ ಶ್ರೀನಾಥ ಅವಕಾಶ ಕೊಡಲಿಲ್ಲ.

ಕಮಲ ಶ್ರೀನಾಥನ ಪಾದದ ಬಳಿ ಕುಳಿತು ಗಟ್ಟಿಯಾಗಿ ಅವನ ಎರಡು ಪಾದಗಳನ್ನೂ ಹಿಡಿದಳು. ಬಿಡಿಸಿಕೊಳ್ಳಲು ಶ್ರೀನಾಥ ಪ್ರಯತ್ನಿಸಿದರೂ ಸಫಲವಾಗಲಿಲ್ಲ.

"ಕಾಲು ಬಿಡು."

"ಕ್ಷಮಿಸಿದ್ದೇನೆಂದು ಹೇಳಿದರೆ ಬಿಡುತ್ತೇನೆ."

"ಬಲವಂತಕ್ಕೆ ಹಾಗೆ ಹೇಳುತ್ತೇನೆ."

"ಇಲ್ಲ – ಮನಃಪೂರ್ವಕವಾಗಿ ಹೇಳಬೇಕು."

"ನಿನ್ನ ಹಾಗೆ ನನಗೆ ಸುಳ್ಳು ಹೇಳುವುದಕ್ಕೆ ಬರುವುದಿಲ್ಲ."

"ನಾನು ಹೇಳಿದ್ದು ಸುಳ್ಳಲ್ಲ ಎಂದು ನಿಮ್ಮ ಮನಸ್ಸಿಗೆ ಖಚಿತ ಮಾಡಿ ಕೊಡುತ್ತೇನೆ."

"ಎದ್ದು ಕುಳಿತುಕೋ – ಏನು ಹೇಳಬೇಕೆಂದಿರುವೆ ಹೇಳು."

ಕಮಲ ಎದ್ದು ಪಕ್ಕದ ಕುರ್ಚಿಯ ಮೇಲೆ ಕುಳಿತಳು.

"ನಿನ್ನೆ ಮಧ್ಯಾಹ್ನವೇ ಅವರಿಬ್ಬರೂ............"

"ಯಾರಿಬ್ಬರು ?"

"ನನ್ನ ಯಜಮಾನರು—ಅವರ ಈಗಿನ ಹೆಂಡತಿ ಮನೆಗೆ ಬಂದರು. ರಾತ್ರಿ ಇಲ್ಲಿಯೇ ಊಟಕ್ಕೆಬ್ಬಿಸಿದೆವು. ಅವರು ಮನೆಗೆ ಬರುವಾಗ ಬಾಟಲ್ ತಂದರು. ರಾತ್ರಿ ಅವರಿಬ್ಬರೂ, ನಮ್ಮ ತಾಯಿ ಕುಡಿದರು. ನಾನು ಮಾತ್ರ ಮುಟ್ಟಲಿಲ್ಲ. ಹೊತ್ತು ಬಹಳವಾಯಿತು. ಮನೆಗೆ ಹಿಂದಿರುಗುವ ಸ್ಥಿತಿಯಲ್ಲಿರಲಿಲ್ಲ. ಇಲ್ಲಿಯೇ ಮಲಗಿದ್ದು ಬೆಳಗಾಗ ಎದ್ದು ಹೋದರು."

"ಇಷ್ಟುದಿನ ಇತ್ತ ಸುಳಿಯದ ನಿಮ್ಮ ಯಜಮಾನರು, ನಾನು ಮದರಾಸಿಗೆ ಹೋದುದನ್ನು ನೋಡಿ ಬರಲಾರಂಭಿಸಿದರಲ್ಲವೇ ? ನಾನು ಆತನನ್ನೇ ಕೇಳಿ ನೋಡಲೋ ?"

"ಕೇಳಿ ನೋಡಿ."

"ಆಗಲೂ ನೀನು ಹೇಳುವುದು ಸುಳ್ಳೆಂದು ಸ್ಥಿರವಾದರೆ...."

"ನೀವು ವಿಧಿಸುವ ಶಿಕ್ಷೆ ಅನುಭವಿಸಲು ಸಿದ್ಧಳಾಗಿದ್ದೇನೆ."

ಕಮಲನ ಮಾತಿನಲ್ಲಿದ್ದ ನಿರ್ಧಾರ ಶ್ರೀನಾಥನ ಕೋಪವನ್ನು ಹಿಡಿದ ಉಗಾಡಿಸಿತು. 'ಅವಳು ಹೇಳುತ್ತಿರುವುದೇ ನಿಜವಿರಬಹುದೇ ?' ಎಂದು ಮನಸ್ಸಿನಲ್ಲಿ ಸಂಶಯ ಮೂಡಿತು.

ಶ್ರೀನಾಥನೇ ಕಮಲನನ್ನು ಸಂತೈಸಬೇಕಾಯಿತು.

ಅಂದು ಕಮಲ ತಾನೇ ಅಡಿಗೆಮಾಡಿ ಶ್ರೀನಾಥನಿಗೆ ಊಟಮಾಡಿಸಿದಳು. ತಾಯಿ ಮಗಳಿಬ್ಬರನ್ನೂ ಸಂಜೆ ಶ್ರೀನಾಥ ಕಂಟೋನ್ಮೆಂಟಿನ ಸಿನೀಮಾಕ್ಕೆ ಕರೆದುಕೊಂಡು ಹೋಗಿ ಬಂದ.

ಮಾರನೆಯ ಬೆಳಿಗ್ಗೆ ಶ್ರೀನಾಥ ಹೊರಗೆ ಹೊರಟಾಗ ಕಮಲ ಕೇಳಿದಳು

"ಯಾವಾಗ ಬರುವಿರಿ ?"

"ಬರುವ ವೇಳೆ ತಿಳಿಸಬೇಕೇನು ?"

“ ಸಹಜವಾಗಿ ಕೇಳಿದೆನಷ್ಟೇ.”

“ ಸಂಜೆಗೆ ಬರುತ್ತೇನೆ ”

ಎಂದು ಹೇಳಿದ.

ಕಮಲ ಹೇಳಿದ ವಿವರಣೆ ಶ್ರೀನಾಥನಿಗೆ ಸ್ವಲ್ಪವೂ ನಂಬಿಕೆಯನ್ನುಂಟು ಮಾಡಿರಲಿಲ್ಲ. ತನ್ನ ಬೆನ್ನು ಹಿಂದೆ ಕಮಲನ ಮನೆಯಲ್ಲಿ ಏನೋ ವ್ಯಾಪಾರ ನಡೆಯುತ್ತಿದೆಯೆಂದು ಅವನ ಮನಸ್ಸಿಗೆ ಖಚಿತವಾಗಿತ್ತು. ಅದನ್ನು ಸರಿಯಾಗಿ ತಿಳಿಯಲು ಅವನು ಕುತೂಹಲಿಯಾದ.

‘ ನಾಗರಾಜನನ್ನು ಹಿಡಿದರೆ ಸತ್ಯಸಂಗತಿ ಹೊರಬೀಳುತ್ತದೆ ’

ಎಂದು ನಿಶ್ಚಯಿಸಿ, ನಾಗರಾಜನನ್ನು ಹುಡುಕಿಕೊಂಡು ಬಸವನ ಗುಡಿಗೆ ಹೋದ. ಮುತ್ತಮ್ಮ ವಾಸಿಸುತ್ತಿದ್ದ ಮನೆಗೆ ಬೀಗಮುದ್ರೆ ಬಿದ್ದಿತ್ತು. ಮುತ್ತಮ್ಮ ಮನೆಬಿಟ್ಟು ಹೋದಳೆಂದು ನೆರೆಹೊರೆಯವರಿಂದ ತಿಳಿದುಬಂದಿತು. ಎಲ್ಲಿಗೆ ಹೋದಳೆಂಬುದು ಮಾತ್ರ ಪತ್ತೆಯಾಗಲಿಲ್ಲ.

ನಾಗರಾಜನನ್ನು ಎಲ್ಲಿ, ಹೇಗೆ ಕಾಣುವುದೆನ್ನುವುದೇ ಶ್ರೀನಾಥನಿಗೆ ದೊಡ್ಡ ಸಮಸ್ಯೆಯಾಯಿತು. ಮಾರ್ಕೆಟ್ಟಿನ ಬಳಿ ನಾಗರಾಜ ಬೆಳಿಗ್ಗೆ ಸಂಜೆ ಬರುವ ವಿಷಯ ಶ್ರೀನಾಥನಿಗೆ ಗೊತ್ತಿತ್ತು. ಅವನ ಹಾದಿ ಕಾಯುತ್ತ ಮಾರ್ಕೆಟ್ಟಿನ ಬಳಿ ನಿಂತ.

ಮಾರ್ಕೆಟ್ಟಿಗೆ ಹೋಗಿ ಬರುತ್ತಿದ್ದ ಶ್ರೀನಾಥನ ಗುರುತಿನವರು ‘ ಇದೇನು ಇಲ್ಲಿ ನಿಂತಿರುವಿರಿ ? ’ ಎಂದು ಕೇಳುತ್ತಿದ್ದರು. ಅವರ ಪ್ರಶ್ನೆಯಿಂದಾಗುತ್ತಿದ್ದ ಕಿರುಕುಳವನ್ನೂ ಶ್ರೀನಾಥ ಗಮನಿಸಲಿಲ್ಲ.

ಮಾರ್ಕೆಟ್ ಗಡಿಯಾರದಲ್ಲಿ ಹನ್ನೊಂದು ಹೊಡೆಯುತ್ತಿತ್ತು. ನಾಗರಾಜ ದೂರದಲ್ಲಿ ಬರುತ್ತಿರುವುದು ಶ್ರೀನಾಥನ ಕಣ್ಣಿಗೆ ಬಿತ್ತು. ಅವನು ಬರುತ್ತಿದ್ದಲ್ಲಿಗೇ ಹೋಗಿ ಎದುರುಗೊಂಡ.

“ ಚೆನ್ನಾಗಿದ್ದೀರಾ ಸಾರ್ ?” ಎಂದು ನಾಗರಾಜ ಕೇಳಿದ.

“ ಚೆನ್ನಾಗಿದ್ದೇನೆ. ಮನೆಯಲ್ಲಿ ಎಲ್ಲರೂ ಕ್ಷೇಮವೇ ? ”

“ ಕ್ಷೇಮ.”

“ ಈಗ ಮನೆ ಬದಲಾಯಿಸಿರುವಂತಿದೆ.”

"ಹೌದು, ಗುಟ್ಟಹಳ್ಳಿಯಲ್ಲಿ ಒಳ್ಳೆಯ ಮನೆ ಸಿಕ್ಕಿತು. ಅಲ್ಲಿಗೆ ಹೋಗಿದ್ದೇವೆ. ನಿಮಗೆ ಈ ವಿಷಯ ಯಾರು ಹೇಳಿದರು?"

"ನಿಮ್ಮ ಹಳೆಯ ಮನೆಯ ಬಳಿಗೆ ನಾನೇ ಹೋಗಿದ್ದೆ."

"ಅದೇನು ಸಾರ್, ಬಡವರ ಮೇಲೆ ಇಷ್ಟು ಅನುಗ್ರಹ!"

"ನಿನಗೀಗ ಏನು ಕೆಲಸವಿದೆ ನಾಗರಾಜ?"

"ಏನೂ ಇಲ್ಲ ಸಾರ್."

"ನನ್ನ ಜತೆ ಬಾ."

ನಾಗರಾಜನನ್ನು ರೂಮಿಗೆ ಕರೆದುಕೊಂಡು ಬಂದು

"ಹೊಟೇಲಿಗೆ ಹೋಗಿ ಎರಡು ಊಟ ಹೇಳಿ, ನಾಲ್ಕು ಪ್ಯಾಕು ಸಿಗರೇಟ್ ತೆಗೆದುಕೊಂಡು ಬಾ"

ಎಂದು ಹೇಳಿದ. ಊಟ ಹೊತ್ತುಕೊಂಡು ಹೊಟೇಲ್ ಮಾಣಿ ನಾಗರಾಜನ ಜತೆಯಲ್ಲಿಯೇ ಬಂದ. ಇಬ್ಬರೂ ಊಟಮುಗಿಸಿದರು. ನಾಗರಾಜನ ಮುಂದೆ ಒಂದು ಸಿಗರೇಟ್ ಪ್ಯಾಕ್ ಒಗೆದು

"ನಾಗರಾಜ, ನಿನ್ನಿಂದ ನನಗೊಂದು ಉಪಕಾರವಾಗಬೇಕು."

"ನಿಮಗೆ ಉಪಕಾರಮಾಡುವುದಕ್ಕೆ ನಾನು ಯಾರು ಸಾರ್? ನೀವು ದೊಡ್ಡವರು."

"ಉಪಚಾರದ ಮಾತು ಹಾಗಿರಲಿ. ನಾನು ಕೇಳುವ ಪ್ರಶ್ನೆಗಳಿಗೆ ಮರೆ ಮಾಜದೆ ಉತ್ತರಕೊಡುವೆಯಾ?"

"ನನಗೆ ತಿಳಿದಿರುವುದಾದರೆ ಖಂಡಿತ ಸತ್ಯಸಂಗತಿ ತಿಳಿಸುತ್ತೇನೆ."

"ನಿನಗೆ ತಿಳಿದಿರುವ ವಿಷಯವನ್ನೇ ಕೇಳುತ್ತೇನೆ."

"ಕೇಳಿ ಸಾರ್."

"ಕಮಲನ ಪೂರ್ವಚರಿತ್ರೆ ಬಲ್ಲೆಯಾ?"

"ಬಲ್ಲೆ."

"ಅವಳಿಗೆ ಮದುವೆಯಾಗಿದ್ದುದು ದಿಟವೇ?"

"ದಿಟ."

"ಅವಳ ಗಂಡನಿಗೇನು ಕೆಲಸ?"

" ಯಾವದೋ ಮಿಲ್ಲಿನಲ್ಲಿ ಕೂಲಿಯಾಗಿದ್ದಾನೆ."

" ಸರಿಯಾಗಿ ಯೋಚನೆಮಾಡಿ ಹೇಳು. ಅವನು ಒಂದು ಥಿಯೇಟರಿನ ಮ್ಯಾನೇಜರಾಗಿಲ್ಲವೇ ? "

ನಾಗರಾಜನಿಗೆ ನಗೆ ಬಂದಿತು.

" ಏಕೆ ನಾಗರಾಜ ? "

" ಇಷ್ಟು ಬುದ್ಧಿವಂತರು ನೀವು – ಅನೇಕ ಸೊಗಸಾದ ಗ್ರಂಥಗಳನ್ನು ಬರೆದಿದ್ದೀರಿ – ನಿಮಗೇಕೆ ಸಾರ್ ಇಂಥ ಮಂಕು ?"

" ಥಿಯೇಟರ್ ಮ್ಯಾನೇಜರ್ ಅವಳ ಗಂಡನಲ್ಲವೇ ? "

" ಅಲ್ಲ. ಅವನೂ ಸಂಸಾರವಂದಿಗ. ಅವನಿಗೂ ಹೆಂಡತಿ ಮಕ್ಕಳಿದ್ದಾರೆ."

" ಈ ಸಂಬಂಧ ಎಷ್ಟು ದಿವಸದಿಂದ ಎಂದು ಬಲ್ಲೆಯಾ ? "

" ನೀವು ಮದರಾಸಿಗೆ ಹೋದ ಕೆಲವು ದಿವಸಗಳಿಂದ."

" ಕಮಲನಿಗೂ ನನಗೂ ಇರುವ ಸಂಬಂಧ ಆತನಿಗೆ ಗೊತ್ತೇ ? "

" ಚೆನ್ನಾಗಿ ಗೊತ್ತು."

" ತಿಳಿದೂ ಆತ ಕಮಲನ ಮನೆಗೆ ಬರುವುದಕ್ಕೆ ಹೇಗೆ ಮನಸ್ಸು ಮಾಡಿದ ?"

" ನಿಮ್ಮ ವಿಚಾರದಲ್ಲಿ ಆತನಿಗೆ ತುಂಬ ಗೌರವವಿದೆ. ' ಅವರೇ ಮೊದಲು ನಾನೇ ಆಮೇಲೆ ' ಎಂದು ಹೇಳುತ್ತಾನೆ."

" ನನ್ನ ಬಗ್ಗೆ ಇಷ್ಟು ಗೌರವವಿಟ್ಟುಕೊಂಡಿರುವ ಮನುಷ್ಯ ನನ್ನ ನಾಶಕ್ಕೆ ಏಕೆ ಕಾರಣಕರ್ತನಾಗುತ್ತಾನೆ ?"

" ಕಮಲನ ಮೇಲಣ ವ್ಯಾಮೋಹದಿಂದ. ಅವಳಿಗೆ ಒಂದು ಮನೆ ತೆಗೆದುಕೊಡಲು ವಾಗ್ದಾನ ಮಾಡಿದ್ದಾನೆ. ಮೊನ್ನೆತಾನೆ ಕೈಗೆ ಬಳೆ, ಕೊರಳಿಗೆ ಸರ ಮಾಡಿಸಿಕೊಟ್ಟ."

" ನಾನು ಬಡವ ನಾಗರಾಜ. ದುಡಿದು ತಿನ್ನುವವನು."

" ನಿಮ್ಮ ಯೋಗ್ಯತೆಗೆ ಕಮಲ ತಕ್ಕವಳಲ್ಲ ಸಾರ್. ಅಂದು ಈ ಮಾತು ನಾನು ಹೇಳಿದರೆ ನೀವು ಕೋಪಮಾಡಿಕೊಂಡಿರಿ."

" ನೀನು ಆತನನ್ನು ಬಲ್ಲೆಯಾ ನಾಗರಾಜ ?"

" ಚೆನ್ನಾಗಿ ಬಲ್ಲೆ ಸಾರ್."

" ನನಗಾಗಿ ಆತನನ್ನು ಪ್ರಾರ್ಥಿಸಿ ಕಮಲನ ಸಂಗ ಬಿಡಿಸುವೆಯಾ ? "

" ನಿಮ್ಮ ಭ್ರಾಂತಿಗೆ ನಾನು ಏನು ಹೇಳಲಿ ಸಾರ್. ಒಂದು ವೇಳೆ ನಿಮ್ಮ ಮೇಲಣ ಗೌರವಕ್ಕೆ ಆತ ಕಮಲನ ಸಂಗ ಬಿಟ್ಟನೆಂದಿಟ್ಟುಕೊಳ್ಳೋಣ. ಆಮೇಲಾದರೂ ಕಮಲ ನಿಮ್ಮ ವಿಷಯದಲ್ಲಿ ಸತ್ಯವಾಗಿ ನಡೆಯುವಳೆಂದು ತಿಳಿದಿರುವಿರಾ ? ಸೂಳೆಯ ಬಾಳಿಗೆ ಸತ್ಯವೆಲ್ಲಿಂದ ಬರಬೇಕು ?"

" ದಯವಿಟ್ಟು ಅವಳನ್ನು ' ಸೂಳೆ ' ಎಂದು ಕರೆಯಬೇಡ."

" ಕ್ಷಮಿಸಿ ಸಾರ್. ಈ ವಿಷಯಗಳನ್ನು ನಾನು ತಿಳಿಸಿದೆನೆಂದು ನೀವು ಯಾರಲ್ಲಿಯೂ ಹೇಳಕೂಡದು."

" ಇಲ್ಲ – ಖಂಡಿತವಾಗಿ ಹೇಳುವುದಿಲ್ಲ."

ನಾಗರಾಜ ಶ್ರೀನಾಥನ ಅಪ್ಪಣೆ ಪಡೆದು ಹೊರಡುತ್ತಾ ತನ್ನ ಮನೆ ಗುರುತು ತಿಳಿಸಿ

" ಮನೆ ಕಡೆ ಬನ್ನಿ ಸಾರ್."

ಎಂದು ಆಹ್ವಾನಿಸಿದ.

ಶ್ರೀನಾಥನ ಕಣ್ಣೀರು ಇಂಗಿ ಹೋಗಿತ್ತು. ದುಃಖ ಕೋಪಗಳೆರಡೂ ಅವನ ತನು, ಮನವನ್ನಾಚ್ಛಾದಿಸಿದ್ದವು.

" ಎಷ್ಟು ಪೊಳ್ಳು ಈ ಜಗತ್ತು !"

ಎಂದುಕೊಂಡ. ಅವನ ದೃಷ್ಟಿ ಕಿಸೆಯಲ್ಲಿದ್ದ ಪ್ರಣಯ ಮಹಾಕಾವ್ಯದ ಕಡೆಗೆ ಹರಿಯಿತು. ಹಸ್ತಪ್ರತಿಯನ್ನು ಕೈಗೆತ್ತಿಕೊಂಡು ಚಿಂದಿಚಿಂದಿಯಾಗಿ ಹರಿದೊಗೆದ. ಒಂದೊಂದು ಹಾಳೆ ಹರಿಯುವಾಗಲೂ ಅವನ ಹೃದಯ ಹುಯ್ಯಲಿಕ್ಕುತ್ತಿತ್ತು. ಚಿಂದಿಚಿಂದಿಯಾಗಿ ನೆಲದ ಮೇಲೆ ಬಿದ್ದಿದ್ದುದು ಪ್ರಣಯ ಕಾವ್ಯವಲ್ಲ – ಶ್ರೀನಾಥನ ಹೃದಯ.

ಶ್ರೀನಾಥ ರೂಮಿನ ಬಾಗಿಲಿಕ್ಕಿ ಮಲಗಿಬಿಟ್ಟ. ಸ್ನಾನ, ಊಟ ಒಂದೂ ಬೇಡವಾಯಿತು. ಎರಡನೆಯದಿನ ಹೊಟೇಲ್ ಮಾಲಿಕ ಬಲವಂತಮಾಡಿ ಶ್ರೀನಾಥನಿಗೆ ಊಟಕ್ಕಿಕ್ಕಿದ.

ಶ್ರೀನಾಥನಿಗೆ ಮನೋರೋಗ ವ್ಯಾಪಿಸಿತು. ಕಮಲನ ಪರಿಚಯವಾದ ದಿನದಿಂದ ಅಂದಿನವರೆಗೆ ಆದ ಘಟನಾವಳಿಗಳು ಪುಂಖಾನುಪುಂಖವಾಗಿ ಅವನ

ಚಿತ್ರಫಲಕದ ಮೇಲೆ ಮೂಡಿದವು. ಆಗಾಗ್ಗೆ ನಿಟ್ಟುಸಿರ್ಗರೆದು 'ಕಮಲಾ' ಎನ್ನುತ್ತಿದ್ದ. ದುಃಖವುಕ್ಕಿ ಬಂದಾಗ 'ಅಮ್ಮ' ಎನ್ನುತ್ತಿದ್ದ.

ಗೆಳೆಯರ ನೆನಪೂ ಬರುತ್ತಿತ್ತು. ಡಾಕ್ಟರನ್ನು ಕಂಡು ಅವನ ಮುಂದೆ, ಅವನ ಪತ್ನಿಯ ಮುಂದೆ ದುಃಖ ತೋಡಿಕೊಳ್ಳಬೇಕೆಂಬ ಬಯಕೆಯಾಯಿತು. 'ಆ ಮಹಾಸಾಧ್ವಿಗೆ ಈ ಪಾಪಿಮುಖ ಹೇಗೆ ತೋರಿಸಲಿ. ನಾನು ಒಲಿದ ಹೆಣ್ಣು ನನ್ನನ್ನು ಒದೆದು ಆಚೆ ದೂಡಿದಳು ಎಂದು ಹೇಗೆ ಹೇಳಿಕೊಳ್ಳಲಿ' ಎಂದು ಮಮ್ಮಲ ಮರುಗಿದ.

## ೭

ಗುಟ್ಟಹಳ್ಳಿ ಮನೆಗೆ ಹೋದ ಮೇಲೆ ಬಸವನಗುಡಿ ಮನೆಯಲ್ಲಿದ್ದ ಅಲ್ಪ ಸ್ವಲ್ಪ ಚಳಿಯೂ ಮುತ್ತಮ್ಮನಿಗೆ ಬಿಟ್ಟುಹೋಯಿತು. ಗುಜ್ಜಪ್ಪನ ಕಾಟ ವಿರಲಿಲ್ಲ. ಪೋಲೀಸಿನವರ ಭೀತಿಯೂ ಇರಲಿಲ್ಲ. ಅವಳ ವ್ಯಾಪಾರವೂ ಕುದುರುತ್ತ ಬಂದಿತು. ನಾಗರಾಜ ಹೊಸ ಹೊಸ ಪರಿಚಯಗಳನ್ನು ಮಾಡಿಕೊಂಡು ಅವರನ್ನು ಮನೆಗೆ ಕರೆದುಕೊಂಡು ಬರುತ್ತಿದ್ದ.

ಪ್ರತಿನಿತ್ಯ ಆರೆಂಟು ಆಣೆ ಖರ್ಚುಮಾಡಿ ಕನ್ನಡಪತ್ರಿಕೆಗಳನ್ನು ಕೊಂಡು ಓದುವುದು ನಾಗರಾಜನ ರೂಢಿಯಾಗಿತ್ತು. ಒಂದು ದಿನ ಅವನು ಯಥಾ ಕ್ರಮದಂತೆ ಮಾರ್ಕೆಟ್‌ಮುಂದೆ ಹಾಕಿದ್ದ ಕಲ್ಲು ಬೆಂಚೊಂದರ ಮೇಲೆ ಕುಳಿತು ಅಂದಿನ ಪತ್ರಿಕೆ ಓದುತ್ತಿದ್ದ. ಪತ್ರಿಕೆಯ ಮೂರನೆಯ ಪುಟದಲ್ಲಿ ಪ್ರಕಟ ವಾಗಿದ್ದ ಭಾವಚಿತ್ರ, ಅದರಡಿಯ ಲೇಖನ ಅವನ ಗಮನವನ್ನು ಸೆಳೆದವು. ಪತ್ರಿಕೆ ಸ್ಥೂಲವಾಗಿ ನೋಡಿದವನೇ ಬಸ್ ಹತ್ತಿ ಮನೆಗೆ ಬಂದು

"ಮುತ್ತಾ – ಮುತ್ತಾ ಇಲ್ಲಿ ನೋಡು ಬಾ" ಎಂದು ಕರೆದ.

ಮುತ್ತಮ್ಮ ಸ್ವಲ್ಪ ಗಾಬರಿಯಾಗಿಯೇ ಓಡಿಬಂದು

"ಏನೋ ಅದು – ರಾಜಕಾರ್ಯ"

ನಾಗರಾಜ ಪತ್ರಿಕೆಯಲ್ಲಿ ಪ್ರಕಟವಾಗಿದ್ದ ಭಾವಚಿತ್ರವನ್ನು ಅವಳ ಕಣ್ಮುಂದೆ ಹಿಡಿದು

"ಇದು ಯಾರು ನೋಡು."

"ಎಲ್ಲೋ ನೋಡಿದ ಹಾಗಿದೆ. ಗುರುತು ಸಿಕ್ಕುವುದಿಲ್ಲ."

"ಸರಿಯಾಗಿ ನೋಡು—ಶೇಷಗಿರಿ ಅಲ್ಲವೇ?"

"ಹೌದು ಕಣೋ – ಏನು ಅವನ ವಿಷಯ – ಸತ್ತನೇನು?"

"ಇಲ್ಲ ಮುತ್ತಾ—ಹೆಚ್ಚಿನ ವಿದ್ಯಾಭ್ಯಾಸಕ್ಕೆ ಲಂಡನ್ನಿಗೆ ಹೊರಟಿದ್ದಾನೆ. ಅವನ ವಿದ್ಯಾ, ಬುದ್ಧಿ, ವಿನಯ ವರ್ಣಿಸಿ ಪತ್ರಿಕೆಯವರು ಬರೆದಿದ್ದಾರೆ."

"ಅವನ ಮುಖಕ್ಕೆ ಬೆಂಕಿ ಇಕ್ಕಿದರು. ಅರೀದ ಹೆಣ್ಣುಮಗಳನ್ನ ಬೀದಿ ಭಿಕಾರಿ ಮಾಡಿ ಲಂಡನ್ನಿಗೆ ಹೋಗುತ್ತಾನಂತೆ!"

"ಅಚ್ಚಮ್ಮನಿಗೆ ತಿಳಿಸೋದು ಒಳ್ಳೆಯದಲ್ಲವೇ ಮುತ್ತಾ?"

"ಅವಳಿಗೇಕೆ ತಿಳಿಸಬೇಕು?"

"ಇನ್ನೂ ಏನಾದರೂ ಮೋಹವಿದ್ದರೆ ಬಿಡುಗಡೆಯಾಗುತ್ತದೆ."

"ಈ ಸಾರಿ ಕಾಗದ ಬರೆಯುವಾಗ ಪೇಪರನ್ನೂ ಜತೆಯಲ್ಲಿಟ್ಟು ಕಳುಹಿಸು."

"ಈ ಪೋಲೀಸಿನವನ ಕಾಟ ವಿಪರೀತವಾಯಿತಲ್ಲಾ ಮುತ್ತಾ – ಇವನಿಗೆ ಎಲ್ಲಾ ಸೊಬಗನ್ನು ನಮ್ಮ ಖರ್ಚಿನಲ್ಲೇ ಆಗಬೇಕು."

"ಏನು ಮಾಡೋದು ಹೇಳು. ಬಿಸಿತುಪ್ಪ ನುಂಗಿದ ಸಮಾಚಾರ. ಅವನ ವಿರೋಧ ಕಟ್ಟಿಕೊಳ್ಳುವ ಹಾಗಿಲ್ಲ."

"ನೀನು ಹೂ ಅನ್ನು. ಅವನ ಟ್ರಾನ್ಸ್‌ಫರ್ ಏರ್ಪಾಡು ಮಾಡುತ್ತೀನೆ."

"ಬೇಡ ಸುಮ್ಮನಿರು. ನಮ್ಮ ಮೈಗಾವಲಿಗೆ ಒಬ್ಬ ಪೋಲೀಸಿನವನು ಇರೋದು ಒಳ್ಳೆಯದು."

"ಬಿಳೀ ಟೋಪಿಯವನು ಬಂದಿದ್ದನೇನು?"

"ಬಂದಿದ್ದ – ಇದೇ ಹೋದ."

"ಅವಳನ್ನು ಮಾತನಾಡಿಸಿದೆಯಾ?"

"ಮಾತನಾಡಿಸಿದೆ. ಕೆಲಸ ಆಗತ್ತೆ – ಆದರೆ ಸ್ವಲ್ಪ ತಡ."

"ಅವನಿಗೇನು ಆಗಬೇಕಂತೆ ಅವಳು?"

"ಅವನ ಹೆಂಡತಿ ಅಕ್ಕನಂತೆ. ಅವಳ ಗಂಡ ತೀರಿಹೋದನಂತೆ. ಊರು ಮಾಗಡಿ – ನಾಲ್ಕುದಿನ ತಂಗಿ ಮನೆಯಲ್ಲಿ ಇದ್ದು ಹೋಗಬೇಕೂಂತ ಬಂದಿದ್ದಾಳೆ. ಅಷ್ಟರಲ್ಲಿ ನಮ್ಮ ದೇಶಭಕ್ತ ಗಂಟುಬಿದ್ದ. ಮನೆಯಲ್ಲಿ ಅನು ಕೂಲವಿಲ್ಲವೆಂದು ಇಲ್ಲಿಗೆ ಕರೆದುಕೊಂಡು ಬಂದ."

"ಅವಳನ್ನು ಇಲ್ಲಿಯೇ ಉಳಿಸಿಕೊಂಡರೆ ಚೆನ್ನಾಗಿರುತ್ತದೆ ಮುತ್ತಾ – ಹೆಣ್ಣು ಚೆನ್ನಾಗಿದೆ. ಕಮಲ ಬರುವುದು ನಿಲ್ಲಿಸಿದ ಮೇಲೆ ಅಂಥವರು ಯಾರೂ ಸಿಕ್ಕಿರಲಿಲ್ಲ."

"ಪಾಪಕ್ಕನ ಮನೆಗೆ ಕಮಲ ಹೋಗುತ್ತಾಳಂತೆ! ಇಲ್ಲಿ ಬರುವುದಕ್ಕೆ ಅವಳಿಗೆ ಗುನಗು."

"ಕವಿಗೂ ಅವಳಿಗೂ ತೊರೆದುಹೋದದ್ದು ನಿನಗೆ ಹೇಳಿದೆನೇನು?"

"ತೊರೆದು ಹೋಯಿತೇನು?"

"ಹೆಚ್ಚು ಕಡಿಮೆ – ಅವರಮ್ಮ ಬೇರೆಯವನನ್ನು ಗಂಟು ಹಾಕಿದ್ದಾಳೆ."

"ಯಾರವನು?"

"ಅರುಣ ಥಿಯೇಟರಿನ ಗವಿಯಪ್ಪ."

"ಭಾರೀ ಕುಳವನ್ನೇ ಹಿಡಿದರು. ನನಗೆ ತಿಳಿಸದಂತೆ ನೀನು ಕಾರಭಾರ ಮಾಡು!"

"ನಾನೇನು ಮಾಡಿದೆ ಮುತ್ತಾ. ಕಿವಿಯಮೇಲೆ ಬಿದ್ದ ಸಂಗತಿ ನಿನ್ನಲ್ಲಿ ಹೇಳಿದೆ."

"ನನಗೆಲ್ಲಾ ಗೊತ್ತು ಸುಮ್ಮನಿರೋ. ಉಂಡ ಮನೆಗೆ ಎರಡು ಬಗೆಯುವ ನಿನ್ನ ಬುದ್ಧಿ ನನಗ ಹೊಸದೇ?"

"ಈ ತಿಂಗಳು ಅಚ್ಚಮ್ಮ ದುಡ್ಡು ಕಳಿಸಲೇ ಇಲ್ಲವಲ್ಲಾ."

"ಹೊಸ ಮನೆ ಅಡ್ರೆಸ್ ತಿಳಿಸೋತನಕ ಕಳಿಸಬೇಡ ಎಂದು ನಾವೇ ಬರೆದಿದ್ದೆವು. ಕೂತುಕೊಂಡು ಅವಳಿಗೊಂದು ಕಾಗದ ಬರಿ."

ನಾಗರಾಜ ಕಾಗದ, ಪೆನ್ಸಿಲ್ ಹೊಂದಿಸಿಕೊಂಡು ಸವಿಸ್ತಾರವಾಗಿ ಅಚ್ಚಮ್ಮನಿಗೆ ಕಾಗದ ಬರೆದು, ಪತ್ರಿಕೆಯಲ್ಲಿ ಪ್ರಕಟವಾಗಿದ್ದ ಶೇಷಗಿರಿಯ ಭಾವಚಿತ್ರವನ್ನೂ ಅದರೊಂದಿಗಿಟ್ಟ.

ನಾಗರಾಜನ ಕಾಗದ ಕೈಸೇರಿದಾಗ ಅಚ್ಚಮ್ಮ ಸ್ನಾನಮುಗಿಸಿ ಪೂಜೆಗೆ

ಅಣಿಮಾಡಿಕೊಳ್ಳುತ್ತಿದ್ದಳು. ಕಾಗದವನ್ನು ಒಡೆದು ಓದಿಕೊಂಡಳು. ಹೃದಯ ಹಿಂಡಿದಂತಾಯಿತು.

ಪೂಜೆಗೆ ಕುಳಿತಳು. ದೇವರಿಗೆ ಕಣ್ಣೀರಿನ ಅಭಿಷೇಕವಾಯಿತು. ದೇವರ ತಲೆಗೆ ಹೂವೇರಿಸುತ್ತಾ 'ಅವರು ಎಲ್ಲಿಯಾದರೂ ಚೆನ್ನಾಗಿರಲಿ' ಎಂದು ಆಶೀರ್ವದಿಸಿದಳು.

ಎರಡು ದಿನಗಳಲ್ಲಿ ಅಚ್ಚಮ್ಮನ ಕಾಗದ, ಮನಿಯಾರ್ಡರು ಮುತ್ತಮ್ಮನ ಕೈಸೇರಿತು. ಶೇಷಗಿರಿಯ ಪ್ರಸ್ತಾಪ ಅವಳು ಮಾಡಿರಲಿಲ್ಲ.

ಟಪಾಲು ಆಳು ಹೋದ ಸ್ವಲ್ಪಹೊತ್ತಿನಲ್ಲಿ ಬಂದ ಬಿಳೀಟೋಪಿ ಶರಭಣ್ಣ ನಿಗೆ ನಾಗರಾಜ ಸ್ವಾಗತ ಬಯಸಿದ. ಶರಭಣ್ಣ ಸ್ವಲ್ಪ ಅಸ್ತವ್ಯಸ್ತವಾಗಿದ್ದಂತೆ ಕಂಡುಬಂದಿತು. ಒಂದಾಗುತ್ತಲೊಂದು ನಾಲ್ಕು ಸಿಗರೇಟ್ ಪಚ್ಚಿ ಎಸೆದು, ಕುಡಿಯುವುದಕ್ಕೆ ನೀರು ಕೇಳಿದ. ನಾಗರಾಜ ತಂದುಕೊಟ್ಟ ನೀರು ಕುಡಿದು

"ಮುತ್ತಮ್ಮ ಎಲ್ಲಿ?"

"ಪಕ್ಕದ ಮನೆಗೆ ಹೋಗಿದ್ದಾಳೆ. ಈಗಲೇ ಬಂದು ಬಿಡುತ್ತಾಳೆ."

"ನೋಡು – ಬೇಗ ಬಾ ಎಂದು ಹೇಳು."

ನಾಗರಾಜ ಹೋಗಿ ಮುತ್ತಮ್ಮನನ್ನು ಕರೆದುಕೊಂಡು ಬಂದ.

"ಏನಪ್ಪಾ ಅಂಥ ಅರ್ಜೆಂಟ್ ಕೆಲಸ?"

ಎಂದು ಮುತ್ತಮ್ಮ ಕೇಳಿದಳು.

"ನಿನ್ನಲ್ಲಿ ಒಂದು ಆಪ್ತಾಲೋಚನೆ ಮಾಡಬೇಕಾಗಿತ್ತು ಮುತ್ತಮ್ಮ."

"ಏನು ಹೇಳಪ್ಪಾ."

"ಮನೆಯಲ್ಲಿ ನನ್ನ ಹೆಂಡತಿಗೆ ಎಲ್ಲಾ ಪತ್ತೆಯಾಗಿ ಹೋಯಿತು. ಗಂಗಮ್ಮನನ್ನು ಇವತ್ತೇ ಊರಿಗೆ ಕಳಿಸಿಬಿಡಬೇಕಾಗಿದೆ. ಮನೆ ಕುರುಕ್ಷೇತ್ರ ವಾಗಿ ಹೋಗಿದೆ."

"ಅದಕ್ಕೆ ನಾನೇನು ಮಾಡಲಪ್ಪಾ?"

"ಗಂಗನ್ನ ನಾಲ್ಕುದಿವಸ ನಿಮ್ಮ ಮನೆಯಲ್ಲಿಟ್ಟುಕೊಂಡಿರುತ್ತೀಯಾ?"

"ನಮ್ಮ ಮನೆಯಲ್ಲಿ ಜಾಗವೆಲ್ಲಿದೆ ಹೇಳಪ್ಪಾ? ಎಲ್ಲಾ ನಿನಗೇ ಗೊತ್ತಿದೆ ಯಲ್ಲಾ."

"ಮಹಡಿ ರೂಮು ಖಾಲಿ ಇದೆ."

" ಸರಿ. ಬಂದು ಹೋಗುವವರನ್ನು ಎಲ್ಲೀಗೆ ಕಳಿಸಲಿ ?"

ನಾಗರಾಜ ಮುತ್ತಮ್ಮನಿಗೆ ಕಣ್ಸನ್ನೆಮಾಡಿ

" ಎಷ್ಟು ದಿವಸ ರೂಮು ಬೇಕು ಶರಭಣ್ಣನವರೇ ? "

" ಒಂದು ವಾರವಾದರೆ ಸಾಕು. ಅಷ್ಟರಲ್ಲಿ ನಾನು ಏನಾದರೂ ಏರ್ಪಾಟು ಮಾಡುತ್ತೇನೆ."

" ನೋಡು ಮುತ್ತಾ – ಅವರಷ್ಟು ಹೇಳಿಕೊಳ್ಳುತ್ತಿದ್ದಾರೆ. ಒಂದು ವಾರ ಹೇಗಾದರೂ ತಳ್ಳಿದರೆ ಆಯಿತು."

" ಹೇಗಾಗತ್ತೋ ನಾಗರಾಜ. ಮನೆಯಲ್ಲಿ ಇರುವುದು ಎರಡು ರೂಮು. ಮಹಡಿ ಇವರು ತೆಗೆದುಕೊಂಡರೆ, ಬರುವವರಿಗೆ ಸ್ಥಳವೆಲ್ಲಿ, ನಾವು ಮಲಗುವುದೆಲ್ಲಿ ?"

" ನಮ್ಮದು ಹೇಗೋ ಆಗತ್ತೆ. ಅಡಿಗೆಯ ಮನೆಯಲ್ಲಿ ಮಲಗಿದರೂ ಆಯಿತು."

" ನೀನು ಕೇಳಿದ ಬಾಡಿಗೆ ಕೊಡುತ್ತೇನೆ ಮುತ್ತಮ್ಮ"

ಎಂದು ಶರಭಣ್ಣ ಸೂಚಿಸಿದ.

" ನೀನು ಇಷ್ಟು ಹೇಳಿಕೊಳ್ಳುತ್ತೀ ಎಂದು ಹೂ ಅನ್ನುತ್ತೇನಪ್ಪಾ. ಆದರೀಗಲೇ ಖಡಾ ಖಂಡಿತವಾಗಿ ನಾನು ಒಂದು ಮಾತು ಹೇಳಿಬಿಡುತ್ತೇನೆ. ನನ್ನ ಮನೇಗೆ ಬರೋರು ಹೋಗೋರು ಬಹಳ. ಗಂಗಮ್ಮ ಯಾರದಾದರೂ ಸ್ನೇಹ ಬೆಳಸಿದರೆ ನನ್ನ ಮೇಲೆ ಮಾತಿಲ್ಲ. ನಾಳೆ ನೀನು ನನ್ನ ಆಕ್ಷೇಪಿಸಬಾರದು."

" ಇಲ್ಲಮ್ಮ. ನಿನ್ನ ಏತಕ್ಕೆ ಆಕ್ಷೇಪಿಸಲಿ ?"

ಎಂದು ಆಶ್ವಾಸನವಿತ್ತು ರೂಮು ಬಾಡಿಗೆಯ ಅಡ್ವಾನ್ಸ್ ಎಂದು ಮುತ್ತಮ್ಮನ ಕೈಗೆ ಐವತ್ತು ರೂಪಾಯಿಗಳನ್ನು ಹಾಕಿದ. ಹಣ ಕಂಡ ಕೂಡಲೆ ಮುತ್ತಮ್ಮನ ಮುಖ ಸ್ವಲ್ಪ ಕಳೆಗೊಂಡಿತು.

" ಎಷ್ಟು ಹೊತ್ತಿಗೆ ಕರೆದುಕೊಂಡು ಬರುತ್ತೀಯಪ್ಪಾ ?"

" ಮಧ್ಯಾನ್ಹ ಮೂರು ಗಂಟೆಗೆ. ರಾತ್ರಿ ನಾನು ನಿಲ್ಲುವಂತಿಲ್ಲ. ಎಲ್ಲಿದ್ದರೂ ರಾತ್ರಿ ಎಂಟುಗಂಟೆಗೆ ಮನೆ ಸೇರಲೇಬೇಕು."

" ಹಾಗೇ ಮಾಡು "

ಎಂದು ಮುತ್ತಮ್ಮ ಹೇಳಿದಳು.

ಶರಭಣ್ಣ ಹೋದಮೇಲೆ ಮುತ್ತಮ್ಮ ನಾಗರಾಜನಿಗೆ

" ಈ ಮನೆಗೆ ಬಂದ ಹೊತ್ತು ಒಳ್ಳೆಯದು ಕಣೋ ನಾಗರಾಜ."

" ಏಕೆ ಮುತ್ತಾ ?"

" ನೋಡು – ಜನ ಹೇಗೆ ಮೇಲೆ ಬಿದ್ದು ಬರುತ್ತಿದ್ದಾರೆ."

" ಒಲ್ಲೆಯೆಂದು ಬಿಗಿ ಹಿಡಿದಿದ್ದೆ."

" ಸರಳವಾಗಿ ಕೆಲಸ ಮಾಡಿಕೊಟ್ಟರೆ ಅದರ ಬಿಗಿ ತಪ್ಪಿಹೋಗುತ್ತದೆ. ಈಗ ಶರಭಣ್ಣ ಕಮಕ್ ಕಿಮಕ್ ಅನ್ನುವ ಹಾಗಿಲ್ಲ."

" ಇಷ್ಟು ಹಣ ಸಂಪಾದಿಸಿದರೂ ಬಿಡಿಕಾಸೂ ಕೈಗೆ ಹತ್ತುವುದಿಲ್ಲವಲ್ಲಾ ಮುತ್ತಾ."

" ಹೇಗೆ ಹತ್ತಬೇಕು ಹೇಳು. ದುಡ್ಡು ಕೊಡುವವರು ನೋಟುಗಳಿಗೆ ತುಪ್ಪ ಸವರಿ ಕೊಟ್ಟಿರುತ್ತಾರೆ."

ಮುತ್ತಮ್ಮ, ನಾಗರಾಜ ಊಟ ಮುಗಿಸುವಷ್ಟರಲ್ಲಿ ಮನೆಯ ಮುಂದೆ ಒಂದು ಜಟಕಾಗಾಡಿ ಬಂದು ನಿಂತಿತು. ಗಾಡಿಯಿಂದ ಶರಭಣ್ಣ, ಗಂಗಮ್ಮ ಇಳಿದರು. ಅವಳ ಹಾಸಿಗೆ, ಟ್ರಂಕು, ಬುಟ್ಟಿಯನ್ನು ಗಾಡಿಯವನು ಒಳಗೆ ತಂದಿಟ್ಟ.

ಮುತ್ತಮ್ಮ ಗಂಗಮ್ಮನನ್ನು ನೋಡಿ ನಸುನಕ್ಕು ಸ್ವಾಗತಬಯಸಿದಳು.

ನಾಗರಾಜ ಗಂಗಮ್ಮನ ಸಾಮಾನನ್ನು ಮಹಡಿಯ ಮೇಲಕ್ಕೆ ಸಾಗಿಸಿದ.

" ಕರೆದುಕೊಂಡು ಬಂದು ಬಿಟ್ಟೆ " ಎಂದಳು ಮುತ್ತಮ್ಮ.

" ಹೇಳಿಯೇ ಹೋಗಿದ್ದೆನಲ್ಲಾ."

" ಮನೆಯಲ್ಲಿ ಏನು ಅಂದರು ?"

" ಊರಿಗೆ ಕಳಿಸುತ್ತಿದ್ದೇನೆಂದು ತಿಳಿದುಕೊಂಡಿದ್ದಾರೆ."

ಶರಭಣ್ಣ ಹೆಚ್ಚು ಹೊತ್ತು ಕೂಡುವಂತಿರಲಿಲ್ಲ. ಮಂಡೀಗೆ ಬೇರೆ ಅವನು ಹೋಗಬೇಕಾಗಿತ್ತು.

" ನಾನು ಮಂಡೀಗೆ ಹೋಗಿ ಆರು ಗಂಟೆ ಸುಮಾರಿಗೆ ಬರುತ್ತೇನೆ."

ಎಂದು ಹೇಳಿ ಹೋದ.

" ನೀನು ಮಹಡಿ ಮೇಲೇ ಹೋಗಿಬಿಡು ಗಂಗಮ್ಮ. ಅವರಿವರ ಕಣ್ಣಿಗೆ ಬೀಳುವುದು ಬೇಡ "

ಎಂದು ಮುತ್ತಮ್ಮ ಗಂಗಮ್ಮನನ್ನು ಮಹಡಿಯ ಮೇಲಕ್ಕೆ ಕಳುಹಿಸಿ ಕೊಟ್ಟಳು.

ಮನೆಗೆ ಬಂದವರು ಮಹಡಿಯ ಮೇಲೆ ಹೋಗದಂತೆ ತಡೆಯುವುದೇ ಮುತ್ತಮ್ಮನಿಗೆ ದೊಡ್ಡ ಕೆಲಸವಾಯಿತು. ಶರಭಣ್ಣ ಆರು ಗಂಟೆಗೆ ಸರಿಯಾಗಿ ಕೈತುಂಬ ಹೋಟೇಲ್ ತಿಂಡಿ ಪೊಟ್ಟಣಗಳನ್ನು ಹಿಡಿದು ಬಂದ. ಗಂಗಮ್ಮನ ಜತೆಯಲ್ಲಿ ಎಂಟು ಗಂಟೆಯ ತನಕ ಕಾಲಕಳೆದು ಶರಭಣ್ಣ ಮನೆಯ ಕಡೆ ಹೊರಟ. ಊಟದ ಶಾಸ್ತ್ರ ಮುಗಿದ ಮೇಲೆ ಎಲ್ಲರೂ ಮಲಗುವ ಏರ್ಪಾಟು ಮಾಡಿದರು.

ಮುತ್ತಮ್ಮ ತನ್ನ ಹಾಸಿಗೆಯನ್ನು ಮಹಡಿಯ ಮೇಲೆ, ಗಂಗಮ್ಮನ ಸಮೀಪದಲ್ಲಿ ಹಾಕುವಂತೆ ನಾಗರಾಜನಿಗೆ ಹೇಳಿದಳು.

ಮುತ್ತಮ್ಮ ತನ್ನ ಕೆಲಸಕಾರ್ಯ ಮುಗಿಸಿಕೊಂಡು ಮೇಲಕ್ಕೆ ಬಂದಾಗ ಗಂಗಮ್ಮ ಹಾಸಿಗೆಯ ಮೇಲೆ ಜೂಗರಿಸುತ್ತ ಕುಳಿತಿದ್ದಳು.

" ನಿದ್ದೆ ಬರಲ್ಲಿಲ್ಲವೇ ಗಂಗಮ್ಮ ?"

" ಇಲ್ಲಮ್ಮ. ಈಗಿನ್ನೂ ೯॥ ಇರಬಹುದು. ಇಷ್ಟು ಬೇಗ ನಿದ್ರೆ ಬರುವುದಿಲ್ಲ."

ಕೈಯಲ್ಲಿ ತಂದಿದ್ದ ಎಲಡಿಕೆ ಸುಣ್ಣವನ್ನು ಮುಂದಿಟ್ಟುಕೊಂಡು ಮುತ್ತಮ್ಮ ಹಾಸಿಗೆಯ ಮೇಲೆ ಕುಳಿತಳು. ಇಬ್ಬರೂ ತಾಂಬೂಲ ಹಾಕುವುದಕ್ಕಾರಂಭಿಸಿದರು.

" ಮನೆಯಲ್ಲಿ ಏನಾಯಿತು ಗಂಗಮ್ಮ ?"

" ಅವರು ಹೇಳಿಲ್ಲವೇ ? ನನ್ನ ತಂಗಿಗೆ ಗುಮಾನಿ ಬಂತು. ಅವಳು ಹೋ ಎಂದು ರಂಪ ಎಬ್ಬಿಸಿಬಿಟ್ಟಳು."

" ನಿನ್ನ ಭಾವನಿಗೂ ನಿನಗೂ ಬಹಳ ದಿವಸದ ಸಂಬಂಧವೋ ?"

" ಅವರ ಮದುವೆಯ ಸಮಯದಲ್ಲಿಯೇ ಸಂಬಂಧವಾಯಿತು. ಮಧ್ಯೆ ಮಧ್ಯೆ ಸಂಬಂಧ ಬೆಳೆಯಿತು. ಈ ಸಾರಿ ನಾನು ತಂಗಿ ಮನೆಗೆ ಬಂದಾಗ ಸಂಬಂಧ ಹೆಚ್ಚಾಯಿತು."

"ನಿನಗೆ ಮಾಗಡಿಯಲ್ಲಿ ಯಾರಿದ್ದಾರೆ?"

"ನಮ್ಮ ಮಾವನ ಮನೆಯಲ್ಲಿರುತ್ತೇನೆ. ಅತ್ತೆ ಮಾವ ಇಬ್ಬರಿಗೂ ವಯಸ್ಸಾಗಿದೆ. ಮನೆ ತಪ್ಪಿದ ಒಬ್ಬಳು ಮಗಳಿದ್ದಾಳೆ--ನನ್ನ ನಾದಿನಿ— ಅವಳದೇ ಎಲ್ಲಾ ಕಾರುಬಾರು ಮನೆಯಲ್ಲಿ."

"ಅವಳು ಒಳ್ಳೆಯವಳೋ?"

"ಹುಟ್ಟು ಕಿಡಿಗೇಡಿ. ನನ್ನ ಗಾಣದ ಎತ್ತಿನಂತೆ ದುಡಿಸುತ್ತಾಳೆ."

"ಮಾವನ ಮನೆಯದು ಆಸ್ತಿ ತುಂಬ ಇದೆಯೋ?"

"ಅಯ್ಯೋ ನಮ್ಮವ್ವ! ನನ್ನ ಕಥೆಯೇ ಒಂದು ರಾಮಾಯಣ. ಕೈ ಹಿಡಿದ ಮಾರಾಯ ಏನೂ ಉಳಿಸಲಿಲ್ಲ. ಇದ್ದ ಆಸ್ತಿಯನ್ನೆಲ್ಲಾ ಊರೂರ ಸೂಳೆಯರ ಬಾಯಿಗೆ ಹಾಕಿ ಮನೆ ತೊಳೆದುಬಿಟ್ಟ. ಕೊನೆಗೆ ಅವರ ಪ್ರಸಾದ ದಿಂದಲೇ ಪ್ರಾಣವನ್ನೂ ಬಿಟ್ಟ."

"ಮಾವನ ಮನೆಯಲ್ಲಿ ಯಾವ ಸುಖ ಕಾದಿದೆ ಎಂದು ಅಲ್ಲಿಗೆ ಹೊರ ಟಿದ್ದೀ ಗಂಗಮ್ಮ?"

"ಅಲ್ಲೀಗೆ ಹೋಗದೆ ಇನ್ನೆಲ್ಲಿ ಹೋಗಲಮ್ಮ. ನನಗೇನು ಸ್ವಂತ ಮನೆಯೇ ಮಠವೇ ದಿಕ್ಕೇ?"

"ಮನೆ, ಮಠ, ದಿಕ್ಕು ಎಲ್ಲಾ ಆಗುತ್ತದೆ. ಶರಭಪ್ಪ ಇನ್ನು ಏಳೆಂಟು ದಿವಸ ನಿನ್ನ ಇಲ್ಲಿಟ್ಟುಕೊಂಡು ಮಾಗಡಿಗೆ ಕಳಿಸಿಬಿಡುತ್ತಾನೆ. ನಿನಗೆ ಬಂದ ದ್ದೇನು ಲಾಭ?"

"ನನ್ನ ಏನು ಮಾಡೂಂತೀರ ಮುತ್ತಮ್ಮ?"

"ನಾನು ಹೇಳಿದರೆ ನಿನಗೆ ಅಸಮಾಧಾನವಾಗಬಹುದು. ನೀನು ಬದುಕೋ ಮಾರ್ಗ ತೋರಿಸಬೇಕೂಂತ ನನಗೆ ಆಸೆ. ನಿನ್ನ ಹಾಗೆ ಅಚ್ಚಮ್ಮಾಂತ ಒಬ್ಬ ಬಡವಿ ಬಂದಳು. ಇವತ್ತು ಅವಳು ಒಬ್ಬ ಭಾರಿ ಜಮೀನ್ದಾರನ್ನ ಕೈಹಿಡಿದು ಸುಖವಾಗಿದ್ದಾಳೆ. ಬರ್ತಾಳೆ ಸುಮ್ಮನಿರು – ಅವಳ ಪರಿಚಯ ಮಾಡಿಕೊಡುತ್ತೇನೆ – ನೀನೇ ಕೇಳಿ ತಿಳಿದುಕೋ"

"ನಿಮ್ಮ ಮಾತಿನಲ್ಲಿ ನನಗೆ ಸಂದೇಹವಿದ್ದರೆ ತಾನೆ ಇತರರನ್ನು ನಾನು ಕೇಳಬೇಕಾಗಿರುವುದು?"

"ನನ್ನ ಮಾತು ಕೇಳಿ ನೀನು ಇಲ್ಲೇ ಇದ್ದುಬಿಡು ಏನೋ ಒಂದು

ದಾರಿ ಮಾಡ್ತೀನಿ. ನೋಡೋಕೆ ಒಳ್ಳೇ ಗೌರಮ್ಮ ಇದ್ದ ಹಾಗಿದ್ದೀ – ನಿನಗೇನಮ್ಮ – ಯಾರಾದರೂ ಪೂಜೆಮಾಡಿ ಇಟ್ಟುಕೊಳ್ಳುತ್ತಾರೆ. — ಶರಭಪ್ಪನ ಮೇಲೆ ನಿನಗೆ ತುಂಬ ಮನಸ್ಸೋ ?"

"ಅಂಥ ಮನಸ್ಸೇನೂ ಇಲ್ಲ."

ತನ್ನ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಿತೆಂದು ಮುತ್ತಮ್ಮ ಭಾವಿಸಿದಳು.

"ಇನ್ನು ಒಂದು ವಾರಬಿಟ್ಟು ಮಾಗಡಿಗೆ ನಡೀ ಎಂದು ಶರಭಪ್ಪ ಹೇಳಿದರೆ ಏನು ಮಾಡುತ್ತೀ ?"

"ಏನು ಮಾಡಲಿ ?"

"ನಾನು ಹೋಗುವುದಿಲ್ಲ. ಇಲ್ಲೇ ಇರುತ್ತೇನೆ ಎಂದು ಧೈರ್ಯವಾಗಿ ಹೇಳು."

ತನ್ನ ಒಪ್ಪಿಗೆಯನ್ನು ಗಂಗಮ್ಮ ಕೂಡಲೆ ಸೂಚಿಸಲಿಲ್ಲ. ಮುತ್ತಮ್ಮ ಅದಕ್ಕೆ ಬಲವಂತವನ್ನೂ ಮಾಡಲಿಲ್ಲ. ತಾನು ತುಂಬಿದ ವಿಚಾರಕ್ರಿಮಿ ತನ್ನ ಕೆಲಸವನ್ನು ಸಾವಕಾಶವಾಗಿ ಮಾಡುವುದೆಂದು ಮುತ್ತಮ್ಮನಿಗೆ ಪೂರ್ಣ ನಂಬಿಕೆಯಿತ್ತು.

ನಾಲ್ಕಾರು ದಿನಗಳಲ್ಲಿ ಗಂಗಮ್ಮ ಮುತ್ತಮ್ಮನ ಮನೆಯವಳಾಗಿ ಬಿಟ್ಟಳು. ಅವಳೇ ಒಂದೊಂದು ದಿನ ಅಡಿಗೆಯನ್ನೂ ಮಾಡುತ್ತಿದ್ದಳು. ವೆಂಕಟೆ, ನಾಗೂ, ಬಾಲು ಅವಳ ಸ್ನೇಹಿತರಾದರು. ರಾಮರಾಜು, ಶ್ರೀಕಂಠಯ್ಯ ಮುತ್ತಮ್ಮನನ್ನು ಪೀಡಿಸತೊಡಗಿದರು. 'ಸ್ವಲ್ಪ ತಡೆಯಿರಿ' ಎಂದು ಅವರಿಗೆ ಮುತ್ತಮ್ಮ ಸಮಾಧಾನ ಹೇಳುತ್ತ ಬಂದಳು.

ಗಂಗಮ್ಮನ ಪ್ರಯಾಣದ ದಿನ ಸಮೀಪಿಸಿದಂತೆ ಮುತ್ತಮ್ಮ ವಿಚಾರ ಪರವಶಳಾದಳು. ಶರಭಣ್ಣ ಗಂಗಮ್ಮನನ್ನು ಕರೆದುಕೊಂಡು ಹೋಗದಂತೆ ಭದ್ರ ಮಾಡಬೇಕಾಗಿತ್ತು. ಶ್ರೀಕಂಠಯ್ಯನನ್ನು ಜತೆಗೆ ಸೇರಿಸಿಕೊಂಡ ಹೊರತೂ ಅವಳಿಗೆ ಬೇರೆ ಮಾರ್ಗವಿರಲಿಲ್ಲ.

ಒಂದು ದಿನ ಶ್ರೀಕಂಠಯ್ಯನಿಗೆ ಗಂಗಮ್ಮನ ಚರಿತ್ರೆ ಹೇಳಿ ಅವನ ಸಲಹೆ ಕೇಳಿದಳು. ಶ್ರೀಕಂಠಯ್ಯ ಸ್ವಲ್ಪಕಾಲ ಆಲೋಚಿಸಿ

"ಇದು unlawful restraint ಆಗತ್ತೆ ಮುತ್ತಮ್ಮ. ಶರಭಣ್ಣ ಕಂಪ್ಲೇಂಟ್ ಕೊಟ್ಟರೆ ನಿನಗೆ ಫಜೀತಿಯಾಗುತ್ತದೆ."

" ಈ ಮಾತು ಹೇಳೋದಿಕ್ಕೇ ನಾನು ನಿನ್ನ ಸಹಾಯ ಕೋರಿದ್ದು ? ಏನು ಮಾಡಬೇಕು ನೀನೇ ಆಲೋಚಿಸಿ ಹೇಳು."

" ಅದಕ್ಕೊಂದು ಮಾರ್ಗವಿದೆ. ಆದರೆ ಅದು ನ್ಯಾಯವಾದ ಮಾರ್ಗವಲ್ಲ ವಲ್ಲಾ ಎಂದು ಯೋಚಿಸುತ್ತಿದ್ದೇನೆ."

" ನೀನೂ ನ್ಯಾಯಾನ್ಯಾಯ ಯೋಚಿಸುವುದೇ ವಿಚಿತ್ರವಾಗಿದೆಯಪ್ಪ " ಎಂದು ನಕ್ಕಳು. ಶ್ರೀಕಂಠಯ್ಯನೂ ನಗಬೇಕಾಗಿ ಬಂತು.

" ಯಾವ ಮಾರ್ಗ ನೀನು ಯೋಚಿಸಿದ್ದು ? "

" ಶರಭಣ್ಣ ಬ್ಲಾಕ್‌ಮಾರ್ಕೆಟ್ ಖದೀಮ. ಕಂಟ್ರೋಲ್ ಪದಾರ್ಥ ಗಳನ್ನು ಅವನು ಗಡಿಯಾಚೆ ಕಳಿಸುತ್ತಲೂ ಇದ್ದಾನೆ. ಪೆಟ್ರೋಲ್ ಕೂಪನ್ ಗಳನ್ನೂ ಮಾರುತ್ತಾನೆ. ಆ ಸಂಬಂಧ ಯಾವುದಾದರೂ ಒಂದು ಚಾರ್ಜು ಷೀಟ್ ಸಿದ್ಧಮಾಡಿದರೆ ಆಸಾಮಿ ನಾವು ಹೇಳಿದ ಹಾಗೆ ಕೇಳುತ್ತಾನೆ."

ಶ್ರೀಕಂಠಯ್ಯನ ಚಾಣಾಕ್ಷತನಕ್ಕೆ ಮುತ್ತಮ್ಮ ಮನಃಪೂರ್ವಕವಾಗಿ ಮೆಚ್ಚುಗೆ ವ್ಯಕ್ತಪಡಿಸಿ

" ಈ ಕೆಲಸ ಆಗು ಮಾಡಿದರೆ ನಿನಗೇ ಪ್ರಯೋಜನ "

ಎಂದು ಆಸೆಯನ್ನೂ ಇಟ್ಟಳು.

ಮುತ್ತಮ್ಮ, ನಾಗರಾಜ ಇಬ್ಬರೂ ಉಪದೇಶ ಮಾಡಿಮಾಡಿ ಗಂಗಮ್ಮನ ಮನಸ್ಸು ಗಟ್ಟಿ ಮಾಡಿಸಿದರು. ಅವಳ ಕಣ್ಣಮುಂದೆ ಭವ್ಯಭವನಗಳು, ಕಿಸ್ ಕಾಪ್ ಹಾಕಿದ ಮೋಟಾರು ಗಾಡಿಗಳು, ಜಾರ್ಜೆಟ್, ನಿನ್ನಾನ್ ಸೀರೆಗಳೂ ಹಾದುಹೋದವು. ತನ್ನ ಮುಂದಿನ ಜೀವಿತದ ಭವ್ಯ ಕನಸಿನಲ್ಲಿ ಅವಳು ಮೈಮರೆತಳು.

ಗಂಗಮ್ಮ ಹೊರಡಬೇಕಾದ ದಿನ ನಿಶ್ಚಯಿಸಿ ಶರಭಣ್ಣ ಅವಳಿಗೆ ತಿಳಿಸಿದ. ಅವಳು ಸ್ಪಷ್ಟವಾಗಿ

" ಊರಿಗೆ ಹಿಂದಿರುಗಲು ನನಗೆ ಇಚ್ಛೆಯಿಲ್ಲ" ಎಂದಳು.

" ಊರಿಗೆ ಹೋಗದೆ ಎಲ್ಲಿ ಇರುತ್ತೀ ? "

" ಇಲ್ಲೇ ಇರುತ್ತೇನೆ."

" ನನ್ನ ಇನ್ನೊಂದು ಸಂಸಾರ ನಡೆಸು ಎಂದು ಹೇಳುತ್ತೀಯಾ ?"

"ನಾನು ಹಾಗೆ ಹೇಳುತ್ತಿಲ್ಲ. ನನ್ನ ಕಷ್ಟಸುಖ ನನಗಿರಲಿ – ಅದರ ಚಿಂತೆ ನೀವಿಟ್ಟುಕೊಳ್ಳಬೇಡಿ."

"ನೀನು ಹೇಳುತ್ತಿರುವುದೇನು ಗಂಗಾ – ನನಗೊಂದೂ ಅರ್ಥವಾಗುವುದಿಲ್ಲವಲ್ಲ."

"ಅರ್ಥವಾಗುವುದಕ್ಕೇನಿದೆ ? ನನ್ನ ಮನೆ ಬಿಡಿಸಿ ನೀವು ಕರೆದುಕೊಂಡು ಬಂದಿರಿ. ನಿಮ್ಮ ಸುಖಕ್ಕೆ ಉಪಯೋಗಿಸಿಕೊಂಡಿರಿ. ಈಗ ನಿಮಗೆ ತೊಂದರೆಯಾಗುತ್ತದೆಂದು ಊರಿಗೆ ಅಟ್ಟುತ್ತಿರುವಿರಿ. ಅಲ್ಲಿಗೆ ಹೋಗುವುದಕ್ಕೆ ನನಗೆ ಇಷ್ಟವಿಲ್ಲ ಇಲ್ಲೇ ಇದ್ದು ನನ್ನ ಹೊಟ್ಟೆಯ ಪಾಡು ನೋಡಿಕೊಳ್ಳುತ್ತೇನೆ."

"ಅದು ಹೇಗೆ ಸಾಧ್ಯ ? ಊರಿನಿಂದ ನಿನ್ನ ನಾನು ಕರೆದುಕೊಂಡು ಬಂದ ಮೇಲೆ ಪುನಃ ಊರು ಸೇರಿಸಬೇಕಾದುದು ನನ್ನ ಕರ್ತವ್ಯ. ನಿನ್ನ ಊರಿಗೆ ಕರೆದುಕೊಂಡು ಹೋಗಿ ಬಿಡುತ್ತೇನೆ. ಅಲ್ಲಿಂದ ಮುಂದೆ ನೀನು ಎಲ್ಲಿಗೆ ಬೇಕಾದರೂ ಹೋಗಬಹುದು."

ಗಂಗಮ್ಮ ಶರಭಣ್ಣನ ಸಲಹೆಗೆ ಸುತರಾಂ ಒಪ್ಪಿಗೆ ಕೊಡಲಿಲ್ಲ. ಕೋಪದ ಮಾತುಗಳಾದವು. ಪೋಲೀಸ್ ಕಂಪ್ಲೇಂಟ್ ಕೊಡುವುದಾಗಿ ಶರಭಣ್ಣ ಹೆದರಿಸಿ ನೋಡಿದ. ಗಂಗಮ್ಮ ಜಪ್ಪಯ್ಯ ಎನ್ನಲಿಲ್ಲ.

ಮುತ್ತಮ್ಮನನ್ನು ಮಧ್ಯಸ್ಥಿಕೆಗೆ ಕರೆಯದೆ ಶರಭಣ್ಣನಿಗೆ ದಾರಿ ತೋರಲಿಲ್ಲ. ಮುತ್ತಮ್ಮ ಎರಡು ಕಡೆಯ ವಾದವಿವಾದವನ್ನೂ ಸಾವಕಾಶವಾಗಿ ಲಾಲಿಸಿ

"ಅವಳು ಹೋಗುವುದಿಲ್ಲವೆಂದರೆ ನೀನೇತಕ್ಕೆ ಬಲವಂತ ಮಾಡುತ್ತೀಯಪ್ಪಾ ?"

"ಊರಿನಿಂದ ಅವಳನ್ನು ಕರೆದುಕೊಂಡು ಬಂದವನು ನಾನು. ನಾಳೆ ಅವಳ ಅತ್ತೆ ಮಾವ ಬಂದು ಕೇಳಿದರೆ ನಾನು ಏನು ಹೇಳಲಿ ?"

"ಕಳೆದ ವಾರವೇ ಬಸ್ ಹತ್ತಿಸಿ ಕಳಿಸುತ್ತೇನೆಂದು ನೀನು ಮನೆಯಲ್ಲಿ ಹೇಳಿದ್ದೆಯೋ ಇಲ್ಲವೋ ?"

"ಹೇಳಿದ್ದೆ"

"ಸರಿ – ಹಾಗೇ ಬಸ್ ಹತ್ತಿಸಿ ನೀನು ಕಳುಹಿಸಿದೆ. ಮಧ್ಯೆ ಅವಳು ಏನಾದಳೋ ನಿನಗೇನು ಗೊತ್ತು ?"

"ಇದು ನಿನ್ನ ಮಸಲತ್ತು ಮುತ್ತಮ್ಮ."

"ನನ್ನ ಏಕಪ್ಪಾ ದುರ್ಜನ ಮಾಡುತ್ತೀ. ಅವಳು ಬಂದರೆ ಮಹಾರಾಯನ ಹಾಗೆ ಕರೆದುಕೊಂಡು ಹೋಗು. ಅವಳನ್ನು ಇಲ್ಲಿ ಉಳಿಸಿಕೊಳ್ಳಬೇಕೆಂಬ ಹಟ ನನಗೇನೂ ಇಲ್ಲ."

"ನಿನ್ನ ಬಲವಿಲ್ಲದಿದ್ದರೆ ಅವಳಿಗೆ ಇಷ್ಟು ಧೈರ್ಯ ಬರುತ್ತಿರಲಿಲ್ಲ."

"ಅವಳಿಗೆ ಆ ಧೈರ್ಯ ಕೊಟ್ಟವನು ನೀನೇ ಶರಭಣ್ಣ. ಸುಮ್ಮನೆ ನನ್ನನ್ನೇಕೆ ಆಕ್ಷೇಪಿಸುವೆ. ಹೆಣ್ಣು ಒಂದು ಸಲ ಹೊಸಲು ದಾಟಿದರೆ ಮತ್ತೆ ಒಳಗೆ ಹೋಗುವುದು ದುರ್ಲಭ. ಈ ಹೆಣ್ಣನ್ನು ಹೊಸಲು ದಾಟಿಸಿದವರು ಯಾರು – ನಾನೋ ನೀನೋ ?"

ಮಾತಿಗೆ ಮಾತು ಬೆಳೆಯಿತು. ಶರಭಣ್ಣ ತೋಳೇರಿಸಿ ನಿಂತ. ಬಲವಂತದಿಂದಲಾದರೂ ಗಂಗಮ್ಮನನ್ನು ಎಳೆದೊಯ್ಯಬೇಕೆಂದು ಅವನು ನಿರ್ಧರಿಸಿದ್ದ. ಗಂಗಮ್ಮ ಮುತ್ತಮ್ಮನ ಹಿಂದೆ ಆಶ್ರಯ ಪಡೆದಿದ್ದಳು.

ಪರಿಸ್ಥಿತಿ ವಿಕೋಪಕ್ಕೆ ಹೋದಕೂಡಲೆ ನಾಗರಾಜ ಶ್ರೀಕಂಠಯ್ಯನೊಂದಿಗೆ ಮಹಡಿಯೇರಿ ಬಂದ. ಶ್ರೀಕಂಠಯ್ಯ, ನಾಗರಾಜನನ್ನು ನೋಡಿ ಶರಭಣ್ಣನ ಕೋಪತಾಪ ಅರ್ಧ ಇಳಿಯಿತು. ಶ್ರೀಕಂಠಯ್ಯ ತನ್ನ ವೃತ್ತಿಯ ಜಬರ್‌ದಸ್ತಿನಿಂದ

"ಏನ್ರೀ ಗಲಾಟೆ ?"

"ಗಲಾಟೆಯೇನೂ ಇಲ್ಲ. ನಮ್ಮ ಮನೆ ಹೆಂಗಸು ಇಲ್ಲಿದ್ದಳು. ಕರೆದುಕೊಂಡು ಹೋಗುವುದಕ್ಕೆ ಬಂದೆ. ಮುತ್ತಮ್ಮ ಅದಕ್ಕೆ ಅಡ್ಡಿಯಾಗಿದ್ದಾಳೆ."

"ನಾನು ಅಡ್ಡಿಯಾದೆನೇ ? ಅವಳು ಬರುವ ಹಾಗಿದ್ದರೆ ಮಹಾರಾಯನ ಹಾಗೆ ಕರೆದುಕೊಂಡು ಹೋಗು ಎಂದು ನಾನೇ ಹೇಳಲಿಲ್ಲವೇ ?"

"ಹೆಂಗಸರ ಮೇಲೆ ಕೈಮಾಡುವುದು ಯಾವ ಪೌರುಷ ಶರಭಣ್ಣನವರೇ. ನೀವೂ ಲೋಕ ತಿಳಿದವರು. ಗಂಗಮ್ಮನನ್ನು ಕೇಳಿ ನೋಡೋಣ – ಅವಳು ಒಪ್ಪಿ ಬರುವ ಹಾಗಿದ್ದರೆ ಅವಶ್ಯಕವಾಗಿ ಕರೆದುಕೊಂಡು ಹೋಗಿ"

ಎಂದು ಗಂಗಮ್ಮನ ಕಡೆ ತಿರುಗಿ

"ಹೋಗುತ್ತೀ ಏನಮ್ಮ ?"

ಎಂದು ಕೇಳಿದ.

"ನನಗೆ ಹೋಗುವುದಕ್ಕೆ ಇಷ್ಟವಿಲ್ಲಪ್ಪ. ನಾನು ಇಲ್ಲೇ ಇರುವುದಕ್ಕೆ ನಿರ್ಧರಿಸಿದ್ದೇನೆ."

ಎಂದು ಅವಳು ಹೇಳಿದಳು. ಶರಭಣ್ಣನ ಬಾಯಿ ಕಟ್ಟಿಹೋಯಿತು. ಎಲ್ಲರನ್ನೂ ಒಮ್ಮೆ ನೋಡಿ

"ಇದು ನಿಮ್ಮೆಲ್ಲರ ಮಸಲತ್ತು. ಪೋಲೀಸ್ ಹಾಳುಬಿದ್ದು ಹೋಗಿಲ್ಲ. ನಿಮ್ಮನ್ನೆಲ್ಲಾ ಒಂದು ಕೈ ನೋಡದಿದ್ದರೆ ನಾನು ಶರಭಣ್ಣ ಅಲ್ಲ"

ಎಂದು ಹೇಳಿದ. ಅವನ ಮಾತುಗಳನ್ನು ತಿರಸ್ಕಾರಪೂರಿತವಾಗಿ ಆಲಿಸಿ ಶ್ರೀಕಂಠಯ್ಯ

"ಶರಭಣ್ಣನವರೇ – ನೀವು ದೊಡ್ಡ ದೇಶಭಕ್ತರು. ಸತ್ಯಾಗ್ರಹಗಳನ್ನು ಮಾಡಿ ಮಾಡಿಸಿದವರು. ನಾಲ್ಕಾರು ಸಾರಿ ಜೈಲಿಗೆ ಹೋಗಿ ಬಂದವರು. ಮಂತ್ರಿಗಳೆಲ್ಲಾ ನಿಮ್ಮ ಸ್ನೇಹಿತರು. ಆದರೆ ಯಾರಿಗೂ ನಿಮ್ಮ ನಿಜ ಚರಿತ್ರೆ ಗೊತ್ತಿಲ್ಲವೆಂದು ಕಾಣುತ್ತದೆ."

"ನನ್ನ ಚರಿತ್ರೆ ಕಟ್ಟಿಕೊಂಡು ನಿಮಗೇನ್ರೀ?"

"ನನಗೇನೇ! ಇಲ್ಲಿ ನೋಡಿ – ನಿಮ್ಮ ಮೇಲಿನ ಫೈಲ್ – ನಿಮ್ಮ ಮೇಲೆ ಎಂಟು ಕೇಸ್ ಸಿದ್ಧವಾಗಿದೆ. ಸಾಹೇಬರ ಸಹಿಯಾಗುವುದೊಂದು ಬಾಕಿ. ಪೀನಲ್‌ಕೋಡಿನ ಯಾವ ಸೆಕ್ಷನ್ನನ್ನೂ ನೀವು ಜೀವಸಹಿತ ಉಳಿಸಿಲ್ಲ. ಹಿಂದೆ ಸತ್ಯಾಗ್ರಹಮಾಡಿ ಜೈಲಿಗೆ ಹೋದಿರಿ. ಈ ಸಾರೆ ಬ್ಲ್ಯಾಕ್ ಮಾರ್ಕೆಟ್ಟಿಗಾಗಿ ಜೈಲಿಗೆ ಹೋಗುತ್ತೀರಿ. ಗಂಗಮ್ಮನ ಮೇಲೆ ನೀವು ಕಂಪ್ಲೇಂಟ್ ಕೊಟ್ಟು ಜೀರ್ಣಿಸಿಕೊಳ್ಳಿ ನಾನು ನೋಡುತ್ತೇನೆ – ನಿಮ್ಮ ಕೈಗೆ ಬಳೆ ತೊಡಿಸದಿದ್ದರೆ ನಾನು ಶ್ರೀಕಂಠಯ್ಯನಲ್ಲ."

ಶರಭಣ್ಣನಲ್ಲಿ ಸತ್ತ್ವ ಉಳಿಯಲಿಲ್ಲ. ಹಣೆಯಿಂದ ಅಂಗಾಲಿನವರೆಗೆ ಬೆವರು ಮೂಡಿತು. ಪೋಲೀಸಿನವರ ವಿರೋಧ ಕಟ್ಟಿಕೊಂಡು ತಾನು ಬಾಳುವುದು ಸಾಧ್ಯವಿಲ್ಲವೆಂದು ಅವನಿಗೆ ಚೆನ್ನಾಗಿ ಗೊತ್ತಿತ್ತು. ಅವನ ಕೈಕಾಲು ನಡುಗುವುದಕ್ಕಾರಂಭಿಸಿತು.

"ಗಂಗಮ್ಮನ ಸುದ್ದಿ ಬಿಟ್ಟುಬಿಡಿ. ನಿಮ್ಮ ಮೇಲೆ ಕೇಸ್ ಆಗದಂತೆ ನಾನು ನೋಡಿಕೊಳ್ಳುತ್ತೇನೆ."

ಎಂದು ಶ್ರೀಕಂಠಯ್ಯ ಆಶ್ವಾಸನಕೊಟ್ಟ.

"ಈ ಮಾತು ನಿಜವೋ?"

"ಮಾತು ಕೊಟ್ಟಮೇಲೆ ಆಗಿಹೋಯಿತು. ನಿಮ್ಮ ಮರ್ಯಾದೆ ಕಾಪಾಡುವ ಭಾರ ನನಗಿರಲಿ. ನಾಳೆ ಮಂಡಿ ಕಡೆ ಬರುತ್ತೇನೆ. 'ಬಿ' ಷೀಟ್ ತಂದು ತೋರಿಸುತ್ತೇನೆ."

"ಹಾಗೇ ಮಾಡಿ ಸ್ವಾಮಿ"

ಎಂದು ಹೇಳಿ ಶರಭಣ್ಣ ಅಲ್ಲಿ ನಿಲ್ಲದೆ ಹೊರಟುಹೋದ.

ಶ್ರೀಕಂಠಯ್ಯ ವಿಜಯೋನ್ಮತ್ತನಾಗಿ

"ಶ್ರೀಕಂಠಯ್ಯ ಗಟ್ಟಿಗನಂತ ಈಗಲಾದರೂ ಹೇಳುತ್ತೀಯಾ ಮುತ್ತಮ್ಮ?"

"ನಾನು ಯಾವಾಗಲೂ ಹೇಳುತ್ತೇನಪ್ಪಾ"

ಎಂದು ನಸುನಗುತ್ತಾ ನುಡಿದಳು.

ತಾನು ಮಾಡಿದ ಉಪಕಾರದ ಶುಲ್ಕ ವಸೂಲ್ಮಾಡುವುದಕ್ಕೆ ಶ್ರೀಕಂಠಯ್ಯ ಅಲ್ಲಿಯೇ ನಿಂತ. ಅವನಿಗೆ 'ಇಲ್ಲ'ವೆನ್ನುವ ಧೈರ್ಯ ಮುತ್ತಮ್ಮ, ಗಂಗಮ್ಮ ಇಬ್ಬರಿಗೂ ಆಗಲಿಲ್ಲ.

೮

ಕಮಲನ ಮುಖಾವಲೋಕನ ಮಾಡಕೂಡದೆಂದು ಶ್ರೀನಾಥ ನಿರ್ಧರಿಸಲು ಯತ್ನಿಸುತ್ತಿದ್ದ. ಅವಳ ಸುಳ್ಳುಬಾಳಿನ ಚಿತ್ರಗಳು ಬಿಡಿಬಿಡಿಯಾಗಿ ಕಣ್ಣುಮುಂದೆ ಬಂದು ನಿಲ್ಲುತ್ತಿದ್ದವು ಅದರ ಜತೆಯಲ್ಲಿ ತಾವಿಬ್ಬರೂ ನಾಲ್ಕು ದಿವಸ ಸುಖವಾಗಿದ್ದುದರ ಇಡಿಯ ಚಿತ್ರವೂ ಕಣ್ಣುಮುಂದೆ ಬಂದು ನಿಲ್ಲುತ್ತಿತ್ತು. ಕಮಲನ ನೆನಪನ್ನು ಹೃದಯದಿಂದ ಅಳಿಸಿಬಿಡಲು ಸರ್ವಸಾಹಸ ಮಾಡಿದ.

ಊರಾಚೆ – ಬನಶಂಕರಿಯ ಬಳಿ ಒಬ್ಬನೇ ನಡೆದು ಹೋಗಿ ಕೂಡುತ್ತಿದ್ದ. ಗಿಡಮರಗಳ ನೆರೆಯಲ್ಲಿ ದಟ್ಟವಾಗಿ ಬೆಳೆದಿದ್ದ ಹಸಿರು ಹಾಸಿನ ಮೇಲೆ ಮಲಗಿ ನೀಲಾಕಾಶವನ್ನು ದಿಟ್ಟಿಸಿ ನೋಡುತ್ತ ತನ್ನ ಭವಿಷ್ಯವನ್ನು ಕುರಿತು

ಆಲೋಚಿಸುವನು. ಭವಿಷ್ಯ – ಭವಿಷ್ಯವೆಲ್ಲಿಂದ ಬಂತು ? ಭೂತ, ವರ್ತಮಾನ ಹಿಡಿದು ಜಗ್ಗುತ್ತಿರುವಾಗ ! ಸೊಗಸಾದ ಕಲಾಕೃತಿಗಳನ್ನು ನಿರ್ಮಿಸಲು ಸಮರ್ಥನಾದ ತನಗೆ ಭೂತಕಾಲದ ಒಂದು ಕೆಟ್ಟ ಕನಸನ್ನು – ಒಂದು ಕಹಿ ಅನುಭವವನ್ನು ಅಳಿಸಿಬಿಡಲು ಸಾಧ್ಯವಿಲ್ಲವೇ ?

ಪ್ರಶಾಂತವಾದ ಪ್ರಕೃತಿಯ ಸಂಗವೂ ಶ್ರೀನಾಥನಿಗೆ ಅಸಹ್ಯವಾಗುತ್ತಿತ್ತು. ಆ ಸ್ಥಳ ಬಿಟ್ಟಿದ್ದು ಜನಭರಿತವಾದ ಊರೊಳಗೆ ಬರುತ್ತಿದ್ದ. ತಮ್ಮ ತಮ್ಮ ಚಿಂತೆ, ಕೆಲಸಗಳಲ್ಲಿ ನಿಮಗ್ನರಾಗಿ ಹೋಗುತ್ತಿದ್ದ ಜನರನ್ನು ದಿಟ್ಟಿಸಿ ನೋಡುತ್ತಿದ್ದ. ಅವರ ಮುಖದಲ್ಲಿ ಮೂಡಿದ್ದ ಚಿಂತೆಯ ಗೆರೆಗಳನ್ನು, ನಗೆಯ ಮಿನುಗನ್ನು ಗಮನಿಸುತ್ತಿದ್ದ. ಎಷ್ಟು ಬಗೆಯ ಚಿಂತೆ, ದುಃಖ ಮಾನವಜೀವಿಗಳನ್ನು ಕಾಡುತ್ತಿದೆ ಎಂದು ವಿಚಾರಪರವಶನಾಗುತ್ತಿದ್ದ.

ಜನಸಂದಣಿಯ ಮಧ್ಯೆಯಿರಲಿ, ಏಕಾಂತ ತಾಣದಲ್ಲಿರಲಿ ಶ್ರೀನಾಥನ ಹೃದಯವನ್ನು ಕಮಲನ ಮೂರ್ತಿ ರಾಹುಗ್ರಾಸ ಮಾಡಿತ್ತು.

ಅವಳನ್ನು ಮತ್ತೆ ನೋಡಬೇಕೆಂದು ಮನಸ್ಸು ತವಕಪಡುತ್ತಿತ್ತು. ಹೋಗಿ ನೋಡಲು ಧೈರ್ಯವಾಗದು. ಮತ್ತೆ ಅದೇ ನೋಟ – ಅದೇ ಪಾಪ ಜೀವನ – ಅದೇ ಹಳಸಿದ ಶೃಂಗಾರದ ಎಂಜಲು ತುಣಕುಗಳು ರೂಮಿಗೆ ಹೋಗಲೂ ಮನಸ್ಸಾಗದು. ಎಲ್ಲಿ ಕಮಲ ರೂಮಿಗೆ ಬರುವಳೋ – ಪಂಚಾಯಿತಿ ಎಲ್ಲಿ ಆರಂಭವಾಗುವುದೋ ಎಂಬ ಭಯ ಅವನನ್ನಾವರಿಸಿತ್ತು.

ಬೆಳಿಗ್ಗೆಯಿಂದ ಸಂಜೆಯವರೆಗೆ ದಿಕ್ಕಿಲ್ಲದ, ನೆಲೆಯಿಲ್ಲದ ಪಿಶಾಚಿಯಂತೆ ಅಲೆದಾಡುತ್ತಿದ್ದ. ರಾತ್ರಿಗೆ ಯಾವದೋ ಹೋಟೆಲಿಗೆ ಹೋಗಿ ಒಂದು ರೂಮು ಬಾಡಿಗೆಗೆ ತೆಗೆದುಕೊಂಡು ಮಲಗುತ್ತಿದ್ದ.

ಶ್ರೀನಾಥ ಸರಿಯಾಗಿಯೇ ಊಹಿಸಿದ್ದ. ಕಮಲ ಮೂರು ಸಲ ರೂಮಿನ ಬಳಿ ಬಂದು ಅದರ ಬೀಗ ಮುದ್ರೆ ನೋಡಿ ನಿರಾಶಳಾಗಿ ಹಿಂದಿರುಗಿದ್ದಳು. 'ಹೇಗಾದರೂ ಮಾಡಿ ಅವರನ್ನು ಒಮ್ಮೆ ಕರೆದುಕೊಂಡು ಬಾ' ಎಂದು ನಾಗರಾಜನಲ್ಲಿ ಮೊರೆಯಿಟ್ಟಿದ್ದಳು. ನಾಗರಾಜನಿಗೂ ಶ್ರೀನಾಥನ ಪತ್ತೆ ಸಿಕ್ಕಿರಲಿಲ್ಲ.

ಕಮಲನ ಮುಖ ನೋಡಿ ಒಂದು ವಾರವಾಗಿತ್ತು. ಒಂದು ದಿನ ಸಂಜೆಗೇ ಶ್ರೀನಾಥ ಹೋಟೆಲ್ ರೂಮು ಸೇರಿ ಮಲಗಿದ. ನಿದ್ರೆಯಂತೂ

ಬಾರದು – ಮನಸ್ಸು ಕದಡಿ ಹೋಗಿತ್ತು. ರಾತ್ರಿ ಎಂಟುಗಂಟೆ ಆಗಿರಬಹುದು. ಎದ್ದವನೇ ಹೊರಟುಬಿಟ್ಟ. ಕಾಲು ಅನಿರೀಕ್ಷಿತವಾಗಿ ಅವನನ್ನು ಕಮಲನ ಮನೆಯ ಬಳಿ ಕರೆತಂದಿತು.

ಒಳಗೆ ದೀಪ ಉರಿಯುತ್ತಿದ್ದುದು ಕದದ ಕಿಂಡಿಯಲ್ಲಿ ಕಾಣಬಂತು. ಯಾರೋ ಮಾತನಾಡುತ್ತಿದ್ದ ಧ್ವನಿಯೂ ಕೇಳಿಬಂತು. ಗಂಡು ಧ್ವನಿ. ಇನ್ನು ಅಲ್ಲಿ ನಿಲ್ಲಬಾರದೆಂದು ಯೋಚಿಸಿದ – ಮರುಕ್ಷಣವೇ ಬೇರೆ ಭಾವನೆ ಹೊಳೆಯಿತು. 'ಈ ವಿಷಯ ಇಂದು ಇತ್ಯರ್ಥವಾಗಿ ಹೋಗಲಿ' ಎಂದು ಟ್ರೆಲ್ಲಿಸ್ ಕೆಲಸಮಾಡಿದ ಬಾಗಿಲು ಕಡೆ ಹೋಗಿ ನಿಂತ. ಬಾಗಿಲು ತಟ್ಟುವುದಕ್ಕೆ ಕೈ ಬಾರದು. ಬಾಗಿಲು ತೆಗೆಸಿ ತಾನು ಒಳಗೆ ಹೋದರೆ ಕಣ್ಣಿಗೆ ಬೀಳುವ ದೃಶ್ಯದ ಅರಿವು ಅವನಿಗಿತ್ತು. ರಾಕ್ಷಸ ಸಿದ್ಧಾರ ಮನಸ್ಸಿನಲ್ಲಿ ಮನೆ ಮಾಡಿತ್ತು.

ಬಾಗಿಲು ತಟ್ಟಿದ – ಒಳಗಿನಿಂದ ಮಾರುತ್ತರ ಬರಲಿಲ್ಲ – ಯಾರೋ ಎದ್ದು ಓಡಿಯಾಡಿದಂತಾಯಿತು – ಮತ್ತೆ ಬಲವಾಗಿ ಬಾಗಿಲು ತಟ್ಟಿದ – ಭಾಗ್ಯಮ್ಮ ಬಂದು ಬಾಗಿಲು ಅರ್ಧ ತೆಗೆದು ಅಲ್ಲಿಯೇ ನಿಂತಳು. ಶ್ರೀನಾಥ ಅವಳನ್ನತ್ತ ದೂಡಿ ಒಳಗೆ ಪ್ರವೇಶಿಸಿದ. ರೂಮಿನ ಬಾಗಿಲು ಅರ್ಧ ತೆಗೆದಿತ್ತು. ಮಂಚದ ಮೇಲೆ ಯಾರೋ ಪವಡಿಸಿದ್ದರು. ಕಮಲ ಭೀತಳಾಗಿ ನಿಂತಿದ್ದಳು.

ಶ್ರೀನಾಥ ತೊಟ್ಟಿಯಲ್ಲಿದ್ದ ಕುರ್ಚಿಯ ಮೇಲೆ ಕುಳಿತ. ಭಾಗ್ಯಮ್ಮ ಹೊರ ಬಾಗಿಲು ಹಾಕಿಕೊಂಡು ಬಂದು ಅಡಿಗೆಯ ಮನೆಯ ಬಾಗಿಲು ಮರೆಯಲ್ಲಿ ನಿಂತಳು.

ಗಡಿಯಾರದ ಟಿಕ್ – ಟಿಕ್ ಶಬ್ದಕ್ಕೆ ಅಂದು ಆ ಮನೆಯಲ್ಲಿ ನಾಲ್ಕು ಹೃದಯಗಳು ಪ್ರತಿಧ್ವನಿಗೊಡುತ್ತಿದ್ದವು. ಒಂದೊಂದು ನಿಮಿಷವೂ ಒಂದೊಂದು ಯುಗದಂತೆ ಜಾರುತ್ತಿತ್ತು. ರೂಮಿನ ಬಾಗಿಲು ಮುಂದಕ್ಕೆಳೆದುಕೊಂಡು ಕಮಲ ಹೊರಗೆ ಬಂದಳು. ಕೆದರಿದ ತಲೆಯನ್ನು ಕೈಯಲ್ಲಿಯೇ ಸರಿಮಾಡಿಕೊಂಡಿದ್ದಳು. ಅವಳ ಕಣ್ಣುಗಳು ಆದೇ ಕೆಂಪುವರ್ಣಕ್ಕೆ ತಿರುಗುತ್ತಿದ್ದವು.

ಕಮಲ ತೊಟ್ಟಿಯಲ್ಲಿ ಗೋಡೆಗೆ ಒರಗಿಕೊಂಡು ನಿಂತಳು. ಶ್ರೀನಾಥ ಮಾತು ಆರಂಭಿಸಲಿಲ್ಲ; ಅವಳೂ ಮಾತಿಗೆ ಮೊದಲು ಮಾಡಲಿಲ್ಲ.

ಮತ್ತೆ ಕೆಲವು ನಿಮಿಷಗಳು ಜಾರಿದವು. ಶ್ರೀನಾಥ ಸತತವಾಗಿ ಸಿಗರೇಟ್ ಹಚ್ಚಿ ಹಚ್ಚಿ ಸೇದಿ ಮುಗಿಸುತ್ತಿದ್ದ. ಮನೆಯನ್ನು ಒಂದು ವಿಚಿತ್ರ ತೆರನ ರುದ್ರಭೀಕರ ಶಾಂತಿ ಆವರಿಸಿತ್ತು.

'ಎಷ್ಟು ಹೊತ್ತು ಕುಳಿತರೂ ಹೀಗೇ ಕುಳಿತಿರಬೇಕು. ಇನ್ನು ಇಲ್ಲಿ ಕುಳಿತು ಏನು ಪ್ರಯೋಜನ. ಆದಷ್ಟು ಬೇಗ ಭರತವಾಕ್ಯ ಹೇಳಿ ಇಲ್ಲಿಂದ ಕಾಲು ಕೀಳುವುದು ಲೇಸು' ಎಂದು ಶ್ರೀನಾಥನಿಗೆ ಹೊಳೆಯಿತು.

ಕಮಲನನ್ನು ದಿಟ್ಟಿಸಿ ನೋಡಿ

"ಒಳಗೆ ಯಾರು?" ಎಂದು ಕೇಳಿದ.

ಕಮಲ ಉತ್ತರ ಕೊಡಲಿಲ್ಲ.

"ಒಳಗೆ ಇರುವವರನ್ನು ಹೊರಗೆ ಬರಹೇಳು"

ಕಮಲ ಸಾಲಭಂಜಿಕೆಯಂತೆ ನಿಂತೇ ಇದ್ದಳು. ಶ್ರೀನಾಥ ಧ್ವನಿಯೇರಿಸಿ

"ನಾನು ಹೇಳಿದ್ದು ಕೇಳಿಸಲಿಲ್ಲವೇನು? ಒಳಗೆ ಇರುವವರನ್ನು ಹೊರಗೆ ಬರಹೇಳು."

ಕಮಲ ಅಲುಗಾಡಲಿಲ್ಲ.

ಒಳಗಿದ್ದ ಮನುಷ್ಯ ಎದ್ದು ಬಟ್ಟೆ ಹಾಕಿಕೊಂಡು ಹೊರಗೆ ಬಂದ.

ತನ್ನೆದುರಿಗಿದ್ದ ಕುರ್ಚಿಯನ್ನು ತೋರಿಸಿ

"ಕುಳಿತುಕೊಳ್ಳಿ" ಎಂದು ಶ್ರೀನಾಥ ಹೇಳಿದ.

ಆ ವ್ಯಕ್ತಿ ಮರುಮಾತನಾಡದೆ ಶ್ರೀನಾಥ ಹೇಳಿದಂತೆ ಕೇಳಿದ. ಶ್ರೀನಾಥನ ಧ್ವನಿಯಲ್ಲಿ ಮೂಡಿದ್ದ ಗಾಂಭೀರ್ಯ, ನಿರ್ಧಾರ ಎಲ್ಲರನ್ನೂ ಚಕಿತರನ್ನಾಗಿಸಿತ್ತು.

"ನೀವು ಯಾರು ಎನ್ನುವುದನ್ನು ನಾನು ಬಲ್ಲೆ. ನಾನು ಯಾರು ಎನ್ನುವುದೂ ನಿಮಗೆ ಗೊತ್ತಿರಬಹುದು."

"ಗೊತ್ತಿದೆ."

"ನೀವು ಸಂಸಾರವಂದಿಗರು, ಮರ್ಯಾದಸ್ಥರು ಎಂದು ಕೇಳಿದ್ದೇನೆ."

ವ್ಯಕ್ತಿ ಉತ್ತರಕೊಡಲಿಲ್ಲ.

"ನಿಮ್ಮ ನಡತೆಯನ್ನು ನಾನು ವಿಮರ್ಶಿಸುವುದಿಲ್ಲ. ಆದರೆ ಅದರ ಪರಿಣಾಮ ನನ್ನ ಮೇಲೂ ಆದುದರಿಂದ ಇಷ್ಟು ಮಾತನಾಡಬೇಕಾಗಿದೆ.

ಅನಾಗರಿಕರಂತೆ ನಾವು ಜಗಳ ಕಾಯುವುದರಲ್ಲಿ ಅರ್ಥವಿಲ್ಲ – ನಗೆಗೀಡಾಗುತ್ತದೆ. ಈ ವಿಷಯ ಇಬ್ಬರೂ ಸಮಾಧಾನದಿಂದ ಆಲೋಚಿಸಿ, ಒಂದು ನಿರ್ಧಾರಕ್ಕೆ ಬರುವುದು ಒಳ್ಳೆಯದಲ್ಲವೇ ?"

"ತಮ್ಮ ಚಿತ್ತ."

"ನಾನು ಕೆಲವು ಪ್ರಶ್ನೆಗಳನ್ನೂ ಅನಿವಾರ್ಯವಾಗಿ ಕೇಳಬೇಕಾಗಿದೆ. ಅವಳಂತೂ ಸುಳ್ಳಿನ ಮೊಟ್ಟೆ. ಅವಳನ್ನು ಕೇಳಿ ಪ್ರಯೋಜನವಿಲ್ಲ. ನೀವು ಅವಳ ಮಟ್ಟಕ್ಕೆ ಇನ್ನೂ ಇಳಿದಿಲ್ಲವೆಂಬ ನಂಬಿಕೆ ನನಗಿದೆ."

"ಏನು ಬೇಕಾದರೂ ಕೇಳಿ."

"ಇವಳ ಪರಿಚಯ ನಿಮಗೆ ಯಾರು ಮಾಡಿಕೊಟ್ಟರು ?"

"ಯಾರೆಂಬುದನ್ನು ತಿಳಿಯುವುದರಲ್ಲಿ ನಿಮಗೆ ಪ್ರಯೋಜನವಿಲ್ಲ. ಋಣಾನುಬಂಧವಿತ್ತು – ಪರಿಚಯವಾಯಿತು."

"ಪರಿಚಯವಾದಾಗ ಕಮಲನಿಗೂ ನನಗೂ ಇದ್ದ ಸಂಬಂಧ ನಿಮಗೆ ಗೊತ್ತಾಗಿರಲಿಲ್ಲವೇ ?"

"ಗೊತ್ತಾಗಿತ್ತು."

"ಅದನ್ನು ತಿಳಿದೂ ಈ ಮನೆಗೆ ಕಾಲಿಡುವುದಕ್ಕೆ ನಿಮ್ಮ ಮನಸ್ಸು ಹೇಗೆ ಒಪ್ಪಿತು ?"

"ಕಮಲನನ್ನು ನೋಡಿದೆ. ಅವಳಲ್ಲಿ ನನ್ನ ಮನಸ್ಸು ನೆಟ್ಟಿತು. ಅವಳ ಸ್ನೇಹ ಸಂಪಾದಿಸುವುದಕ್ಕೆ ಪ್ರಯತ್ನಮಾಡಿದೆ. ನನ್ನ ಪ್ರಯತ್ನ ಫಲಿಸಿತು. ನಿಮ್ಮ ವಿಶ್ವಾಸ ಕಾಯ್ದುಕೊಳ್ಳುವುದು ಅವಳ ಕರ್ತವ್ಯವಾಗಿದ್ದಿತೇ ವಿನಾ ನನ್ನ ಕರ್ತವ್ಯವಲ್ಲ."

"ತಪ್ಪು ಯಾರದು ಎಂದು ಹುಡುಕುವುದರಲ್ಲಿ ಅರ್ಥವಿಲ್ಲ. ಈಗ ನಾವು ಮೂವ್ವರೂ ಒಂದು ವಿಷವ್ಯೂಹದಲ್ಲಿ ಸಿಕ್ಕಿಕೊಂಡಿದ್ದೇವೆ. ಈ ವ್ಯೂಹವನ್ನು ನಮ್ಮಲ್ಲಿ ಯಾರಾದರೂ ಒಬ್ಬರು ಬಿಟ್ಟು ಹೊರಗೆ ಹೋದರೆ ಎಲ್ಲರಿಗೂ ಶಾಂತಿ."

"ಈಗ ಹೊರಗೆ ಹೋಗಬೇಕಾದವರು ಯಾರು ?"

"ನೀವು."

"ನಾನು ಹೊರಗೆ ಹೋಗಲು ಸಿದ್ಧವಾಗಿಲ್ಲ. ನಾನು ಮೊದಲೇ ಒಂದು

ವಿಷಯ ಖಚಿತಪಡಿಸಿದ್ದೇನೆ. ಈ ಮನೆಯಿಂದ ನಿಮ್ಮನ್ನು ಹೊರಗೆ ಹಾಕು ವುದು ನನ್ನ ಉದ್ದೇಶವಲ್ಲ. ನನಗಿಂತಲೂ ಮೊದಲು ಈ ಮನೆಗೆ ಬಂದವರು ನೀವು. ನೀವೂ ನಾನು ಕೂಡಿಯೇ ಈ ಮನೆಯನ್ನು ನಡಸಿಕೊಂಡು ಹೋಗೋಣ. ನಾವಿಬ್ಬರೂ ಸ್ನೇಹಿತರಾಗಿರಲು ಸಾಧ್ಯವಿಲ್ಲವೇ?"

"ಗವಿಯಪ್ಪನವರೇ, ಅದು ಇತರರಿಗೆ ಸಾಧ್ಯವಾಗಬಹುದು. ನನಗೆ ಸಾಧ್ಯವಿಲ್ಲ. ಕಮಲನನ್ನು ನನ್ನ ಸರ್ವಸ್ವವೆಂದು ಭಾವಿಸಿದ್ದೆ. ಅವಳ ವಿಶ್ವಾಸವನ್ನು ಇತರರಿಗೆ ಹಂಚಿಕೊಡುವುದು ನನ್ನ ಮನಸ್ಸಿಗೊಪ್ಪದ ಮಾತು."

"ಪ್ರಪಂಚದ ನಡೆವಳಿಕೆಗೆ ನೀವು ಹೊಂದಿಕೊಳ್ಳಬೇಕಲ್ಲದೆ, ಅದು ನಿಮ್ಮ ಮನಸ್ಸಿನಂತೆ ನಡೆಯಬೇಕೆಂದು ನಿರೀಕ್ಷಿಸುವುದು ಯೋಗ್ಯವಲ್ಲ."

"ಪ್ರಪಂಚ ಸತ್ಯಮಾರ್ಗದಲ್ಲಿ ಹೋಗಬೇಕೆಂದು ನಿರೀಕ್ಷಿಸುವುದು ಅಯೋಗ್ಯವೆಂದು ನಾನು ಭಾವಿಸಿಲ್ಲ."

"ನೀವು ಬುದ್ಧಿವಂತರು – ನಿಮಗೆ ಉತ್ತರ ಕೊಡುವಷ್ಟು ನಾನು ಸಮರ್ಥನಲ್ಲ."

"ಗವಿಯಪ್ಪನವರೇ – ಯಾವ ವಿಧಿಯೋ ನಿಮ್ಮನ್ನು ಎಳತಂದು ನನ್ನ ಜೀವನಕ್ಕೆ ಗಂಟುಹಾಕಿದೆ. ಸ್ವಾವಲಂಬಿಯಾದ ನಾನು ಇಂದು ಪರಾವಲಂಬಿ ಯಾಗಬೇಕಾಗಿದೆ. ಸ್ವಾಭಿಮಾನಕ್ಕೆ ಕಟ್ಟುಬಿದ್ದು ನಾನು ನನ್ನ ತಂದೆಗೂ ತಲೆಬಾಗಿಸಲಿಲ್ಲ – ನಿಮಗೆ ತಲೆಬಾಗಿಸುತ್ತೇನೆ. ಯಾರನ್ನೂ ಬೇಡದಿದ್ದ ಕೈಗಳನ್ನು ನಿಮ್ಮ ಮುಂದೆ ಜೋಡಿಸುತ್ತೇನೆ. ನಿಮ್ಮ ಕೃಪಾಭಿಕ್ಷೆಗಾಗಿ ಕಾತುರನಾಗಿದ್ದೇನೆ. ನೀವು ಲೋಕದ ರೀತಿನೀತಿಗಳನ್ನು ಬಲ್ಲವರು – ಅನುಭವಿಕರು – ಶ್ರೀಮಂತರು. ಒಂದಲ್ಲ ಹತ್ತು ಸ್ನೇಹ ಬೆಳಸಬಲ್ಲಿರಿ. ನಾನು ನಿರ್ಗತಿಕ – ಪ್ರೇಮವನ್ನು ಸರ್ವಸ್ವವೆಂದು ಭಾವಿಸುವ ಅನನುಭವಿ. ನನ್ನ ಪ್ರಪಂಚ ಬಹಳ ಸಣ್ಣ ಪ್ರಪಂಚ – ಅದರಲ್ಲಿ ಕಮಲ ಬಿಟ್ಟು ಬೇರೆಯ ವರಿಗೆ ಸ್ಥಳವಿಲ್ಲ. ದೊಡ್ಡ ಮನಸ್ಸುಮಾಡಿ ಕಮಲನನ್ನು ಬಿಟ್ಟುಕೊಡಿ – ಯಾವಜ್ಜೀವವೂ ನಿಮ್ಮ ಉಪಕಾರ ಸ್ಮರಿಸುತ್ತೇನೆ. ನನ್ನ ಪ್ರಾಣ, ಮಾನ – ಸಾಹಿತ್ಯ ಶಕ್ತಿ ಉಳಿಸಿದ ಕೀರ್ತಿ ನಿಮ್ಮದಾಗುತ್ತದೆ."

ಶ್ರೀನಾಥನ ಕಳಕಳಿಯ ನಿವೇದನೆ ಗವಿಯಪ್ಪನ ಮೇಲೆ ಪರಿಣಾಮ

ವನ್ನುಂಟುಮಾಡದೆ ಇರಲಿಲ್ಲ. ಅವನ ಹೃದಯದಲ್ಲಿ ಭಯಂಕರ ದೇವಾಸುರ ಕಾಳಗವಾರಂಭವಾಯಿತು. ಒಮ್ಮೆ ಅಂದುಕೊಂಡ 'ಇಂಥ ಮನುಷ್ಯನ ಬಾಳನ್ನು ನಾನೇಕೆ ಮುರಿಯಬೇಕು? ಆತನೇ ಕಮಲನ ಜತೆ ಸುಖವಾಗಿರಲಿ' ಎಂದು. ಮರುಕ್ಷಣವೇ ಮೋಹ ಅಡ್ಡಿ ಬರುತ್ತಿತ್ತು. 'ಕಮಲ ಸಾವಿರದಲ್ಲಿ ಒಂದು ಹೆಣ್ಣು. ಯಾರನ್ನೋ ಮೆಚ್ಚಿಸುವುದಕ್ಕೆ ಹೋಗಿ ನಾನೇಕೆ ಅವಳಿಂದ ದೂರವಾಗಬೇಕು?'

ಗವಿಯಪ್ಪನ ಬಾಯಲ್ಲಿ ಏನು ಬರುವುದೋ ಎಂದು ಶ್ರೀನಾಥ ಆತುರದಿಂದ ಅವನ ಮುಖವನ್ನೇ ನೋಡುತ್ತ ಕುಳಿತಿದ್ದ.

ಏನು ಹೇಳಬೇಕೆಂಬುದು ಗವಿಯಪ್ಪನಿಗ ಹೊಳೆಯಲಿಲ್ಲ. ತನ್ನ ಮೈಮೇಲೆ ಒದಗಿದ್ದ ಪ್ರಸಂಗವನ್ನು ದೂರಮಾಡಲೆತ್ನಿಸಿ

"ಕಮಲನನ್ನು ಒಂದು ಮಾತು ಕೇಳಿಬಿಡಿ. ಅವಳು ಹೇಗೆ ಹೇಳಿದರೆ ಹಾಗೆ ಮಾಡಲು ನಾನು ಸಿದ್ಧನಾಗಿದ್ದೇನೆ. ಅವಳು ಬರಬೇಡನೆಂದರೆ ನಾನು ಬರುವುದಿಲ್ಲ."

ಕಮಲನ ಉತ್ತರಕ್ಕೆ ಶ್ರೀನಾಥ ಅವಳ ಮುಖ ನೋಡಿದ. ಕಮಲ

"ನನಗೆ ಗೊತ್ತಿಲ್ಲ. ನಿಮಗೆ ಹೇಗೆ ತೋರುತ್ತದೆಯೋ ಹಾಗೆ ಮಾಡಬಹುದು."

ಎಂದು ಹೇಳಿ ರೂಮಿನೊಳಗೆ ಹೊರಟುಹೋದಳು.

ವಾತಾವರಣ ಮತ್ತಷ್ಟು ಗಭೀರವಾಯಿತು. ವಾದ ಪ್ರತಿವಾದ ನಿಂತು ಹೋದುದನ್ನು ಕಂಡು ಭಾಗ್ಯಮ್ಮ ಮುಂದೆ ಬಂದು ಶ್ರೀನಾಥನ ಕಡೆ ತಿರುಗಿ

"ಅವರು ಹೇಳಿದ ಹಾಗೆ ಮಾಡಬಹುದಲ್ಲಪ್ಪಾ. ಅವರ ಪಾಡಿಗೆ ಅವರು ಬಂದು ಹೋಗುತ್ತಾರೆ. ನಿಮಗೇನು ತೊಂದರೆ?"

ಎಂದಳು. ಶ್ರೀನಾಥ ಅವಳನ್ನು ನುಂಗಿಬಿಡುವಂತೆ ಒಮ್ಮೆ ನೋಡಿ ಗವಿಯಪ್ಪನನ್ನು

"ನಿಮ್ಮ ನಿರ್ಧಾರ ಬದಲಿಸುವ ಹಾಗಿಲ್ಲವೇ?"

ಎಂದು ಕೇಳಿದ.

"ಇಲ್ಲ ಸ್ವಾಮಿ....ನಾನು ಕಮಲನನ್ನು ಬಿಡಲಾರೆ"

ಎಂದು ಹೇಳಿ ಗವಿಯಪ್ಪ ಅಲ್ಲಿ ನಿಲ್ಲದೆ ಹೊರಟುಹೋದ.

ಶ್ರೀನಾಥ ಹೊರಡಲು ಎದ್ದು ನಿಂತ. ಆ ಸ್ಥಳ ಬೇಗ ಬಿಡಬೇಕಾ ಗಿತ್ತು. ಆದರೆ ಕಾಲುಗಳಲ್ಲಿ ತ್ರಾಣ ಉಳಿದಿರಲಿಲ್ಲ. ಭಾಗ್ಯಮ್ಮ ಅವನು ಹೊರಟುದನ್ನು ನೋಡಿ

"ಏನಪ್ಪಾ – ಹೊರಟುಬಿಟ್ಟಿರಿ?"

"ಇನ್ನು ಈ ಮನೆಯಲ್ಲಿ ನನಗೆ ಸ್ಥಳವಿಲ್ಲ. ಎಲ್ಲರ ಅಭಿಪ್ರಾಯವನ್ನೂ ತಿಳಿದಂತಾಯಿತು. ನಿಮ್ಮ ಸಂತೋಷ ಹೇಗಿದೆಯೋ ಹಾಗೆ ಮಾಡಿಕೊಳ್ಳ ಬಹುದು."

ಎಂದು ಹೊರಟುಬಿಟ್ಟ.

ಅವನು ಹೊರಟುದನ್ನು ಕಂಡ ಕಮಲ ಬಿರುಗಾಳಿಯಂತೆ ಹೊರಗೆ ಬಂದು ಶ್ರೀನಾಥನನ್ನು ಹಿಂಬಾಲಿಸಿದಳು. ಕಮಲ ಹಿಂದೆ ಬರುತ್ತಿರುವುದನ್ನು ಕಂಡು ಶ್ರೀನಾಥ ಓಡಲಾರಂಭಿಸಿದ. ಭಾಗ್ಯಮ್ಮ ಕಮಲನ ಹಿಂದೆ ಓಡಿಹೋಗಿ ಅವಳನ್ನು ಬಲವಂತವಾಗಿ ಹಿಡಿದೆಳೆದುಕೊಂಡು ಬಂದಳು.

ಓಡಲಾರಂಭಿಸಿದ ಶ್ರೀನಾಥ ನಿಲ್ಲಲಿಲ್ಲ. ಅವನ ಮನಸ್ಸು ವಜ್ರಕಠೋರ ವಾಗಿತ್ತು. ನೇರವಾಗಿ ಲಾಲಬಾಗಿಗೆ ಬಂದ. ಕೆರೆಯ ಏರಿಯ ಮೇಲಿದ್ದ ದಿಣ್ಣೆಯನ್ನೇರಿ ಹೋಗಿ ಕಲ್ಲುಬೆಂಚಿನ ಮೇಲೆ ಕುಳಿತ. ಎದುರಿಗೆ ತುಂಬಿದ ಕೆರೆ. ಅಲೆಗಳು ಬಂದು ದಡವನ್ನಪ್ಪಳಿಸುತ್ತ ಶ್ರೀನಾಥನಿಗೆ ಸ್ವಾಗತ ಬಯಸು ತ್ತಿದ್ದಂತಿತ್ತು.

'ಯಾವ ಪುರುಷಾರ್ಥಕ್ಕೆ ಇನ್ನು ಪ್ರಾಣ ಧರಿಸಬೇಕು?'

ಎಂಬ ಭಾವನೆ ಶ್ರೀನಾಥನ ಮನಸ್ಸಿನ ಮೇಲೆ ಮೊಳೆಯಿತು. ಆತ್ಮ ಹತ್ಯೆ ಮಾಡಿಕೊಂಡು ತನ್ನ ದುಃಖದ ಜೀವನವನ್ನು ಕೊನೆಗಾಣಿಸಬೇಕೆಂದು ಯೋಚಿಸಿದ.

'ಮೂಢ – ನಿನ್ನ ಆಸೆಗಳು – ಕನಸುಗಳು – ನಿರ್ಧಾರಗಳು ಏನಾದವು? ಒಂದು ಮೂಲುಹೆಣ್ಣಿಗಾಗಿ ಪ್ರಾಣ ನೀಗಿಕೊಳ್ಳುವೆಯಾ? ಅಪಾತ್ರಳಲ್ಲಿ ವಿಶ್ವಾಸವಿಟ್ಟ ಅಪರಾಧ ಮಾಡಿರುವುದು ಸಾಲದೆಂದು, ಆತ್ಮಹತ್ಯೆ ಮಾಡಿ ಕೊಳ್ಳುವ ಘೋರ ಪಾಪವನ್ನೂ ಆಚರಿಸುವೆಯಾ? ಪ್ರಾಣಸೃಷ್ಟಿ ಮಾಡ ಲಾಗದಿರುವವನಿಗೆ ಪ್ರಾಣಹತ್ಯೆ ಮಾಡುವ ಅಧಿಕಾರವೆಲ್ಲಿಂದ ಬಂತು? ಈ ಪ್ರಾಣ ನಿನಗೆ ನೀನು ಕೊಟ್ಟುಕೊಂಡೆಯಾ? ಇದನ್ನು ಯಾರು

ಕೊಟ್ಟರೋ ಅವರೇ ಅದನ್ನು ಪರಿಗ್ರಹಿಸಲರ್ಹರು. ಹೆಣ್ಣನ್ನು ಪ್ರೇಮವೆಂದು ಭಾವಿಸಿ ದುಃಖವುಂಡೆ. ಇನ್ನು ಪ್ರೇಮವನ್ನೇ ಹೆಣ್ಣೆಂದು ಭಾವಿಸು ಹೆಣ್ಣನ್ನು ಪ್ರೇಮಿಸಬೇಡ – ಪ್ರೇಮವನ್ನು ಪ್ರೇಮಿಸು'

ಎಂದು ಮನಸ್ಸಿನ ಸುವಿಚಾರ ಸಂದೇಶವಿತ್ತಿತು. ಶ್ರೀನಾಥ ಕುಳಿತಿದ್ದ ಸ್ಥಳಬಿಟ್ಟು ರೂಮಿನ ಕಡೆ ಹೊರಟಾಗ ಬೆಳಕು ಮೂಡಿತ್ತು.

೯

ಅಚ್ಚಮ್ಮನ ಬಾಳು ದಡ ಸೇರಿತ್ತು. ಅವಳ ಶೀಲ, ವಿನಯ, ಕಾರುಣ್ಯ ಎಲ್ಲರ ವಿಶ್ವಾಸವನ್ನೂ ದೊರಕಿಸಿತ್ತು. ಶಿವರಾಯನ ಮಕ್ಕಳು ಕೂಡ 'ಹೊಸ ಚಿಕ್ಕಮ್ಮ'ನ ಬಗ್ಗೆ ಸದಭಿಪ್ರಾಯ ತಳೆದಿದ್ದರು. ತಂದೆ ಮಕ್ಕಳ ಮನೆಗೆ ಹೋಗಿ ಬರುತ್ತಿದ್ದರು; ಮಕ್ಕಳು ತಂದೆಯ ಮನೆಗೆ ಬಂದು ಹೋಗುತ್ತಿದ್ದರು. ಶಿವರಾಯ ಅಚ್ಚಮ್ಮನಿಗೆ ಯಾವದಕ್ಕೂ ಕಡಿಮೆಮಾಡಿರಲಿಲ್ಲ. ನಿಲುವಾಭರಣ ಮಾಡಿಸಿಕೊಟ್ಟಿದ್ದ. ಮನೆಯಾಳುಗಳು ಯಜಮಾನಿತಿಯ ಮೈಯಲುಗದಂತ ನೋಡಿಕೊಳ್ಳುತ್ತಿದ್ದರು.

ಇಷ್ಟೆಲ್ಲ ಸುಖ, ಸಂಪತ್ತಿನಲ್ಲಿದ್ದರೂ ಅಚ್ಚಮ್ಮನ ಮನಸ್ಸಿಗೆ ಶಾಂತಿಯಿರಲಿಲ್ಲ. ಆಗಾಗ್ಗೆ ಅವಳು ಅತ್ತು ಕಣ್ಣು ಕೆಂಪಗೆ ಮಾಡಿಕೊಳ್ಳುತ್ತಿದ್ದುದು ಶಿವರಾಯನ ಗಮನಕ್ಕೆ ಬೀಳುತ್ತಿತ್ತು. ಒಂದು ದಿನ ಶಿವರಾಯ ಅಚ್ಚಮ್ಮನನ್ನು ಕೂಡಿಸಿಕೊಂಡು ಕೇಳಿದ

"ಅಚ್ಚಾ, ಇಲ್ಲಿ ನೀನು ಸುಖವಾಗಿರುವೆಯಾ?"

"ಏನು ಹೀಗೆ ಕೇಳುವಿರಿ? ನನಗೆ ಯಾವದಕ್ಕೆ ಕಡಿಮೆಯಾಗಿದೆ? ಒಬ್ಬ ಮಹಾರಾಣಿಯೂ ನನ್ನಷ್ಟು ಸುಖವಾಗಿರುವುದಕ್ಕೆ ಸಾಧ್ಯವಿಲ್ಲ."

"ನೀನು ಸುಖವಾಗಿದ್ದರೆ ಮನಸ್ಸಿನಲ್ಲಿಯೇ ಕೊರಗುವುದೇತಕ್ಕೆ? ಯಾವ ಚಿಂತೆ ನಿನ್ನನ್ನು ಕಾಡುತ್ತಿದೆ ಹೇಳು. ನೀನು ನಿಶ್ಚಿಂತಳಾಗಿರಬೇಕೆಂದೇ ಅಲ್ಲವೇ ನಾನು ಪ್ರಯತ್ನಿಸುತ್ತಿರುವುದು?"

"ನನಗೆ ಯಾವ ಚಿಂತೆಯೂ ಇಲ್ಲ. ನೀವು ಸುಮ್ಮನೆ ಇಲ್ಲದ ವ್ಯಸನ ಏಕೆ ಹಚ್ಚಿಕೊಳ್ಳುವಿರಿ?"

"ಸುಳ್ಳು ಹೇಳುವುದು ನಿನಗೆ ಬರುವುದಿಲ್ಲ, ಹೊಸದಾಗಿ ಏತಕ್ಕೆ ಅಭ್ಯಾಸಮಾಡಿಕೊಳ್ಳುತ್ತಿರುವೆ?"

"ಕ್ಷಮಿಸಿ. ನಿಮಗೆ ಸುಳ್ಳು ಹೇಳಬೇಕೆಂದು ನಾನು ಉದ್ದೇಶಪಟ್ಟಿಲ್ಲ."

"ಚಿಂತೆಯೇತಕ್ಕೆ ಹೇಳು. ಕಾರಣವೇನೇ ಆಗಿರಲಿ, ಮನುಷ್ಯಯತ್ನ ಮೀರಿದ್ದಲ್ಲ. ಅದಕ್ಕೆ ಪರಿಹಾರ ಹುಡುಕೋಣ."

"ನನ್ನ ಮನಸ್ಸಿನಲ್ಲಿರುವುದನ್ನು ಹೇಳಲೇ? ನೀವು ಬೇರೆ ಭಾವಿಸುವುದಿಲ್ಲವೆಂದು ಮಾತು ಕೊಡಿ."

"ಹುಚ್ಚಿ – ನಾನೇ ನಿನ್ನವನಾಗಿರುವಾಗ ಆಣೆ ಪ್ರಮಾಣಗಳೇಕೆ – ಹೇಳು."

"ನನಗೆ ಯಾವದಕ್ಕೂ ಕಡಿಮೆಯಿಲ್ಲ. ಪೂರ್ವಜನ್ಮದ ಸುಕೃತದಿಂದ ನೀವು ನನ್ನನ್ನು ತಿಪ್ಪೆಯಿಂದ ಮೇಲಕ್ಕೆತ್ತಿದಿರಿ. ನಿಮ್ಮ ಉಪಕಾರ ನಾನು ಏಳೇಳು ಜನ್ಮಕ್ಕೂ ತೀರಿಸಲಾರೆ. ಯಾವ ರೀತಿಯಲ್ಲಿಯೂ ನಿಮ್ಮ ಮನಸ್ಸಿಗೆ ನೋವಾಗುವಂತೆ ನಡೆದುಕೊಳ್ಳಲು ನನಗೆ ಇಷ್ಟವಿಲ್ಲ. ನಾನು ಹೇಳುವುದು ನಿಮಗೆ ನೋವು ತರಬಹುದು. ನಿಮ್ಮಲ್ಲಿ ನನ್ನ ಹೃದಯ ತೋಡಿಕೊಳ್ಳದೆ ಇನ್ನು ಯಾರಲ್ಲಿ ತೋಡಿಕೊಳ್ಳಲಿ .... ನನ್ನ ಮಗುವನ್ನು ಬೆಂಗಳೂರಿನಲ್ಲಿ ಬಿಟ್ಟು ಬಂದಿದ್ದೇನೆ. ಅವಳನ್ನು ಬಿಟ್ಟು ನಾಸಿರಲಾರೆ. ಮುತ್ತಮ್ಮ ಎಲ್ಲಿ ಅವಳನ್ನು ತನ್ನ ಹಾದಿಗೇ ಹಚ್ಚುತ್ತಾಳೋ ಎನ್ನುವ ಭಯ ಸದಾ ನನ್ನನ್ನು ಕಾಡುತ್ತಿದೆ."

ಶಿವರಾಯ ದೀರ್ಘಾಲೋಚನ ಮಗ್ನನಾದ.

"ನಾನು ಹೇಳಿದ್ದು ಕೇಳಿ ಅಸಮಾಧಾನವಾಯಿತೇ?"

"ಹುಚ್ಚಿ – ನಿನಗಾಗಿ ಏನು ಬೇಕಾದರೆ ಮಾಡವೆನೆಂದು ನಾನು ಮಾತು ಕೊಟ್ಟಿಲ್ಲವೇ? ನೀನು ಕೇಳುವುದೇನು ಅನ್ಯಾಯವಾದುದಲ್ಲ. ತನ್ನ ಮಗು ತನ್ನ ಬಳಿಯಿರಬೇಕೆಂದು ತಾಯಿ ಬಯಸಿದರೆ ಅದು ಅಪರಾಧವಾಗುವುದಿಲ್ಲ.... ಆದರೆ ಮುತ್ತಮ್ಮ ನಿನ್ನ ಮಗುವನ್ನು ಬಿಟ್ಟುಕೊಡುತ್ತಾಳೆಯೇ?"

"ಪ್ರಯತ್ನ ಮಾಡಿ ನೋಡೋಣ."

" ನಡೀ – ನಾಳೆಯೇ ಬೆಂಗಳೂರಿಗೆ ಹೋಗೋಣ. ನಿನ್ನ ಪೂರ್ವ ಜನ್ಮದ ನೆನಪು ತರುವ ಮಗು ಇಲ್ಲಿ ಏಕೆಂದು ಮೊದಲು ನಾನು ಯೋಚಿಸಿದೆ. ಆದರೆ ತಾಯಿ ಮಕ್ಕಳ ಋಣಾನುಬಂಧ ಬಹಳ ಗಹನವಾದದ್ದು – ಗಾಢ ವಾದದ್ದು. ಆ ದೈವಿಕ ಸಂಬಂಧವನ್ನು ಮನುಷ್ಯ ಕಡಿಯಲೆತ್ನಿಸಬಾರದು."

ಅಚ್ಚಮ್ಮನ ಬಾಯಲ್ಲಿ ಮಾತು ಹೊರಡಲಿಲ್ಲ. ಅವಳ ಹೃದಯ ಕೃತಜ್ಞತೆಯಿಂದ ಬಿರಿದುಹೋಯಿತು. ಶಿವರಾಯನ ಪಾದಗಳ ಮೇಲೆ ತನ್ನ ಮಸ್ತಕವನ್ನಿಟ್ಟು ಭಕ್ತಿಯಿಂದ ನಮಸ್ಕರಿಸಿದಳು.

ಶಿವರಾಯ, ಅಚ್ಚಮ್ಮ ಬೆಂಗಳೂರಿನಲ್ಲಿ ಬೆಳಿಗ್ಗೆ ಇಳಿದವರು ನೇರವಾಗಿ ಮುತ್ತಮ್ಮನ ಮನೆಗೆ ಹೋಗಲಿಲ್ಲ. ' ನ್ಯೂ ಹಿಂದೂ ಹೊಟೇಲಿ 'ನಲ್ಲಿ ಇಳಿದುಕೊಂಡು, ಸ್ನಾನ ಫಲಾಹಾರ ಮುಗಿಸಿಕೊಂಡರು. ಅಚ್ಚಮ್ಮ ದಾರಿ ಯಲ್ಲಿ ಸ್ವಲ್ಪ ಹಣ್ಣು, ಬಿಸ್ಕತ್ತು, ಚಾಕಲೇಟ್ ಕೊಂಡಳು.

ಅಚ್ಚಮ್ಮ ಗಾಡಿಯಿಂದಿಳಿದು ಬಂದು ಮಾತನಾಡಿಸಿದಾಗ ಮುತ್ತಮ್ಮನಿಗೆ ಗುರುತೇ ಸಿಕ್ಕಲಿಲ್ಲ.

" ಹೇಗೆ ಆಗಿಹೋಗಿಬಿಟ್ಟಿದ್ದೀಯೇ ತಾಯಿ. ಸಾಕ್ಷಾತ್ ವರಲಕ್ಷ್ಮಿ ಹಾಗೇ ಇದ್ದೀಯಲ್ಲಮ್ಮ. ನಿನ್ನ ಗುರುತೇ ಸಿಕ್ಕಲಿಲ್ಲ."

" ಎಲ್ಲಾ ನಿಮ್ಮ ಆಶೀರ್ವಾದ ಮುತ್ತಮ್ಮನವರೇ. ನಾಗರಾಜ, ಪುಟ್ಟ ಎಲ್ಲಿ ?"

" ತಿಂಡಿ ಬೇಕೆಂದಳು, ಕೊಡಿಸುವುದಕ್ಕೆ ಕರೆದುಕೊಂಡು ಹೋಗಿದ್ದಾನೆ. ಚೆನ್ನಾಗಿದ್ದೀರೇನಪ್ಪಾ "

" ಇಷ್ಟರ ಮಟ್ಟಿಗಮ್ಮ"

ಮಹಡಿ ಇಳಿದು ಕೆಳಗೆಬಂದ ಗಂಗಮ್ಮನನ್ನು ಕರೆದು ಅಚ್ಚಮ್ಮನಿಗೆ ಪರಿಚಯಮಾಡಿಕೊಟ್ಟಳು. ಗಂಗಮ್ಮ ಎದ್ದುಹೋಗಲು ಶಿವರಾಯ

" ಮುತ್ತಮ್ಮ – ನಿನ್ನಲ್ಲಿ ಒಂದು ಕೆಲಸದ ಸಲುವಾಗಿ ಬಂದಿದ್ದೇನೆ."

" ಏನು ಹೇಳೀಯಪ್ಪಾ."

" ನೀನು ಖಂಡಿತ ಮಾಡಿಕೊಡುತ್ತೀನೆಂದರೆ ಹೇಳುತ್ತೇನೆ."

" ನನ್ನ ಕೈಯಲ್ಲಿ ಸಾಧ್ಯವಾಗುವುದಾದರೆ ಇಲ್ಲವೆನ್ನುತ್ತೇನೆಯೇ ?"

" ನಿನ್ನ ಕೈಯಲ್ಲಿ ಸಾಧ್ಯವಾಗುವದೇ. ನೀನು ಇಲ್ಲವೆನ್ನಬಾರದು."

"ಹೇಳಿ – ನೋಡೋಣ."

"ಅಚ್ಚ ಒಂದೇ ಸಮನಾಗಿ ಕೊರಗುತ್ತಿದ್ದಾಳೆ."

"ಯಾಕಮ್ಮ ಕೊರಗು, ಮಹಾರಾಯರು ಏತಕ್ಕೆ ಕಡಿಮೆಮಾಡಿದ್ದಾರೆ?"

"ಪುಟ್ಟನನ್ನು ಬಿಟ್ಟಿರುವುದು ಅವಳಿಗೆ ಸಾಧ್ಯವಿಲ್ಲ ಮುತ್ತಮ್ಮ."

"ಪುಟ್ಟನನ್ನು ಕಳಿಸಿಕೊಡು ಎಂದು ಸೂಚಿಸುತ್ತಿರುವಿರಾ?"

ನಾಗರಾಜ ಪುಟ್ಟನನ್ನೆತ್ತಿಕೊಂಡು ಬಂದ. ಅಚ್ಚಮ್ಮ ಅವಳನ್ನು ಹತ್ತಿರಕರೆದು, ಮುದ್ದಾಡಿ, ತೊಡೆಯ ಮೇಲೆ ಕೂರಿಸಿಕೊಂಡು ತಾನು ತಂದಿದ್ದ ಹಣ್ಣು, ಚಾಕಲೇಟ್, ಬಿಸ್ಕತ್ತು ಅವಳ ಕೈಗಿತ್ತಳು.

"ಚೆನ್ನಾಗಿದ್ದೀಯೇನಮ್ಮ?"

ಎಂದು ನಾಗರಾಜ ಕೇಳಿದ.

"ಇಸ್ವರ ಮುಟ್ಟಿಗಪ್ಪಾ"

"ಬವಳ ಅಸರೂಪಕ್ಕೆ ಬಂದುಬಿಟ್ಟ."

"ಪುಟ್ಟನನ್ನು ಕರೆದುಕೊಂಡು ಹೋಗುವುದಕ್ಕೆ ಬಂದಿದ್ದಾಳೆ ನಾಗರಾಜ"

ಎಂದು ಮುತ್ತಮ್ಮ ಸ್ವಲ್ಪ ಸಿಡುಕಿನಿಂದಲೇ ನುಡಿದಳು.

"ಕೋಪಮಾಡಿಕೊಳ್ಳಬೇಡಮ್ಮ. ನಿನ್ನ ಮನಸ್ಸು ನೋಯಿಸಿ ಕರೆದುಕೊಂಡು ಹೋಗಬೇಕೆಂಬ ಉದ್ದೇಶವಿಲ್ಲ. ನೀನೇ ಸಂತೋಷವಾಗಿ ಕಳಿಸಿಕೊಟ್ಟರೇ ಚೆನ್ನು. ಎಷ್ಟಾದರೂ ತಾಯಿ, ತನ್ನ ಮಗುವಿಗಾಗಿ ಹಂಬಲಿಸುವುದು ಸಹಜ ತಾನೇ."

"ಈ ವಿಷಯ ಅವಳು ಹೊರಡುವಾಗಲೇ ಇತ್ಯರ್ಥಮಾಡಿದ್ದೆವಲ್ಲಾ."

"ನಿಜ ಆದರೆ ಅಂತಃಕರಣ ಯಾರ ಮಾತು ಕೇಳತ್ತೆ. ಪುಟ್ಟಿ ಅಲ್ಲಿಗೆ ಬರುವುದು ಆಗ ನನಗೂ ಬೇಕಿರಲಿಲ್ಲ. ನಾನೂ ಮನಸ್ಸು ಬದಲಾಯಿಸಬೇಕಾಯಿತು. ಅಚ್ಚಮ್ಮ ಸುಖವಾಗಿದ್ದರೆ ತಾನೆ ನನಗೂ ನೆಮ್ಮದಿ."

"ನನಗಿರೋದು ಅದೊಂದು ಮಗು. ನಾನು ಹೇಗೆ ಬಿಟ್ಟುಕೊಡಲಪ್ಪಾ?"

"ನಾವು ಆತುರಪಡಿಸುತ್ತಿಲ್ಲ ಮುತ್ತಮ್ಮ. ಬೇಕಾದರೆ ಒಂದು ದಿನ

ತಡೆದು ಉತ್ತರ ಹೇಳು. ನೀನು ಕಳುಹಿಸಿಕೊಡಲೊಪ್ಪಿದರೂ ಸಂತೋಷ ವಾಗಿ ಮಗುವಿಗೆ ಆಶೀರ್ವಾದ ಮಾಡಿಯೇ ಕಳುಹಿಸಿಕೊಡ ಬೇಕು."

"ನಾನು ಯೋಚನೆಮಾಡಿ ನಾಗರಾಜನ ಕೈಯಲ್ಲಿ ಹೇಳಿಕಳುಹಿಸುತ್ತೀ ನಪ್ಪಾ. ಎಲ್ಲಿ ಇಳಿದುಕೊಂಡಿದ್ದೀರಿ ?"

"ನ್ಯೂ ಹಿಂದೂ ಹೋಟೆಲಿನಲ್ಲಿ."

ಶಿವರಾಯ, ಅಚ್ಚಮ್ಮ ಅಲ್ಲಿ ಹೆಚ್ಚು ಕಾಲ ನಿಲ್ಲುವ ಆವಶ್ಯಕತೆ ಇರಲಿಲ್ಲ. ಅವರನ್ನು ಗಾಡಿಯ ಬಳಿ ಬಿಟ್ಟು ಹೋಗುವುದಕ್ಕೆ ಬಂದ ನಾಗ ರಾಜನಿಗೆ ಅಚ್ಚಮ್ಮ

"ನೀನು ಸ್ವಲ್ಪ ಸಹಾಯ ಮಾಡಬೇಕು ನಾಗರಾಜ. ಮುತ್ತಮ್ಮ ನನ್ನು ಒಪ್ಪಿಸುವ ಭಾರ ನಿನ್ನದು."

"ಪ್ರಯತ್ನಪಟ್ಟು ನೋಡುತ್ತೇನಮ್ಮಾ"

ಎಂದು ಅವನು ಹೇಳಿದ.

ಮುತ್ತಮ್ಮ ಕಣ್ಣೀರ್ಗರೆಯುತ್ತ ಕುಳಿತಿದ್ದಳು. ಇಂಥ ಪ್ರಸಂಗ ಎಂದಾದರೂ ಬರಬಹುದೆಂದು ಅವಳು ಕನಸು ಮನಸಿನಲ್ಲಿಯೂ ಎಣಿಸಿರಲಿಲ್ಲ. ನಾಗರಾಜ ಅವಳ ಹತ್ತಿರ ಬಂದು

"ಅಳುವುದಕ್ಕೆ ಏನಾಯಿತು ಮುತ್ತಾ ?" ಎಂದು ಕೇಳಿದ.

"ಇಷ್ಟು ಹೊತ್ತೂ ಎಲ್ಲಾ ನೀನೇ ಕೇಳಿದೆಯಲ್ಲಾ."

"ಪುಟ್ಟನನ್ನು ಕಳಿಸಿಕೊಡುವುದು ನಿನಗೆ ಹೇಗೆ ಕಷ್ಟವೋ ಹಾಗೇ ನನಗೂ ಕಷ್ಟ. ಆದರೆ...."

"ಏನು ಆದರೆ...."

"ಹೆತ್ತ ತಾಯಿ ಬಂದು ಕೇಳುವಾಗ ಇಲ್ಲವೆನ್ನುವುದು ಧರ್ಮವೇ ?"

"ನೀನೂ ನನಗೆ ಧರ್ಮ ಹೇಳುವುದಕ್ಕೆ ಶುರುಮಾಡಿದೆ."

"ನಿನಗೆ ಹೇಳಲಿಲ್ಲ ಮುತ್ತಾ – ನನಗೆ ತಿಳಿದದ್ದು ಹೇಳಿದೆ. ನಿನಗೆ ಹೇಗೆ ಸರಿ ತೋರುವುದೋ ಹಾಗೆ ಮಾಡು."

"ಏನು ಮಾಡಲಿ ನೀನೇ ಹೇಳು ನಾಗರಾಜ ?"

"ಅಚ್ಚಮ್ಮನ ಸಂಸಾರ ಅಚ್ಚುಗಟ್ಟು ಮಾಡಿ ಪುಣ್ಯ ಕಟ್ಟಿಕೊಂಡೆ.

ಈ ಉಪಕಾರವೂ ಮಾಡಿಬಿಡು. ಅಚ್ಚಮ್ಮ ಒಂದು ರೀತಿಯಲ್ಲಿ ನಮ್ಮ ಮನೆಯ ಮಗಳು – ಅವಳೇಕೆ ಉಸ್ಸೆಂದುಕೊಳ್ಳಬೇಕು ?"

ಮುತ್ತಮ್ಮ ಉತ್ತರಕೊಡಲಿಲ್ಲ. ಹಾಸಿಗೆ ಹಾಸಿ ಮಲಗಿಬಿಟ್ಟಳು. ಅಂದು ಅವಳಿಗೆ ಊಟವೂ ಬೇಡವಾಯಿತು. ನಾಲ್ಕು ಗಂಟೆಯ ವೇಳೆಗೆ ಗಂಗಮ್ಮ ಬಲವಂತದಿಂದ ಎಬ್ಬಿಸಿ ಸ್ವಲ್ಪ ಊಟ ಮಾಡಿಸಿದಳು.

ಮುತ್ತಮ್ಮ ತಲೆಯ ಮೇಲೆ ಕೈ ಹೊತ್ತು ಕುಳಿತಳು. ಅವಳ ಜತೆ ಆಡಲು ಬಂದ ಪುಟ್ಟನನ್ನೊಮ್ಮೆ ಗದರಿಕೊಂಡಳು. ಮರುಕ್ಷಣವೇ ಪಶ್ಚಾತ್ತಾಪ ಬಂದು ಪುಟ್ಟನನ್ನಪ್ಪಿ ಮುದ್ದಿನ ಮಳೆಗರೆದಳು. ನಾಗರಾಜ ಕೋಟು ಹಾಕಿಕೊಂಡು ಹೊರಗೆ ಹೊರಟಿದ್ದ.

" ಯಾವ ಕಡೆಗೆ ಹೋಗುತ್ತೀಯೋ ನಾಗರಾಜ ?"

" ಮಾರ್ಕೆಟ್ ಕಡೆ. ಮನೆಗೇನಾದರೂ ತರಬೇಕಾಗಿತ್ತೇ ?"

" ಹೂ ! ಸ್ವಲ್ಪ ಹೂವು, ಹಣ್ಣು, ವೀಳೆಯದೆಲೆ, ಲಂಗಕ್ಕೊಂದು ಸಿಲ್ಕ್ ಬಟ್ಟೆ ತೆಗೆದುಕೊಂಡು ಬಾ."

" ಏಕೆ ಮುತ್ತಾ ? "

" ಪುಟ್ಟನನ್ನು ಕಳಿಸಿಬಿಡುತ್ತೇನೆ ನಾಗರಾಜ. ನೀನು ಹೇಳಿದ್ದು ನ್ಯಾಯ. ಹೆತ್ತ ತಾಯಿ ಬಂದು ಕೇಳುವಾಗ ಇಲ್ಲವೆನ್ನುವುದು ಧರ್ಮವಲ್ಲ. —ಮನೆಗೆ ಬರುವಾಗ ಅಚ್ಚಮ್ಮ, ಶಿವರಾಯನನ್ನು ಕರೆದುಕೊಂಡು ಬಾ."

ನಾಗರಾಜನ ಹೃದಯ ಹಗುರವಾಯಿತು. ನೇರವಾಗಿ ಮಾರ್ಕೆಟ್ಟಿಗೆ ಹೋಗದೆ ಬಸ್ ಹತ್ತಿ ಮೆಜೆಸ್ಟಿಕ್ ಚೌಕಕ್ಕೆ ಬಂದು ನ್ಯೂ ಹಿಂದೂ ಹೋಟೆಲಿಗೆ ಬಂದ.

ನಾಜರಾಜನನ್ನು ನೋಡಿ ಹತಾಶಳಾಗಿದ್ದ ಅಚ್ಚಮ್ಮನ ಮುಖದಲ್ಲಿ ಆಸೆ ಅಂಕುರಿಸಿತು.

" ಏನು ಬಂದೆ ನಾಗರಾಜ ?"

ಎಂದು ಶಿವರಾಯ ಕೇಳಿದ.

" ಮುತ್ತಮ್ಮನನ್ನು ಒಪ್ಪಿಸಿದ್ದೇನೆ ಸ್ವಾಮಿ. ನಿಮ್ಮನ್ನು ಕರೆತರಲು ಕಳಿಸಿದ್ದಾಳೆ."

ಅಚ್ಚಮ್ಮನ ಹೃದಯ ಹಿಗ್ಗಿನಿಂದ ಬಿರಿಯಿತು.

" ಹೋಗೋಣವೇ ? "

ಎಂದು ಶಿವರಾಯನನ್ನು ಕೇಳಿದಳು.

" ತಡೀ, ಇಷ್ಟು ಅವಸರ ಪಡಬಾರದು. ತಲೆ ಬಾಚಿಕೊಂಡು, ಬಟ್ಟೆ ಹಾಕಿಕೋ."

" ನಾನು ಮಾರ್ಕೆಟ್ ತನಕ ಹೋಗಬೇಕಾಗಿತ್ತು."

" ಇರು ನಾಗರಾಜ, ನಮ್ಮ ಜತೆಯಲ್ಲಿಯೇ ಬರುವೆಯಂತೆ. ಒಂದು ಟ್ಯಾಕ್ಸಿ ಮಾಡಿಕೊಂಡು ಹೋದರಾಯಿತು."

ಎಂದು ಶಿವರಾಯ ಹೇಳಿದ. ಅಚ್ಚಮ್ಮ ಹೊರಡುವುದಕ್ಕೆ ಸಿದ್ಧವಾಗುತ್ತಿರುವಲ್ಲಿ

" ಮುತ್ತಮ್ಮನ ಸ್ಥಿತಿಯೂ ಚೆನ್ನಾಗಿಲ್ಲ. ಈಗ ಬಹಳ ಕಷ್ಟದಲ್ಲಿದ್ದಾಳೆ ಸ್ವಾಮಿ "

" ಅವಳ ಉಪಕಾರ ನಾನು ಮರೆಯುವುದಿಲ್ಲ ನಾಗರಾಜ "

" ಬಡವ – ನನ್ನ ಯೋಗಕ್ಷೇಮವೂ ನಿಮಗೆ ಸೇರಿದ್ದು ತಾನೇ."

ಶಿವರಾಯ ನಸುನಗುತ್ತ ಪರ್ಸ್ ತೆಗೆದು ನಾಗರಾಜನ ಕೈಗೆ ನೂರು ರೂಪಾಯಿಗಳನ್ನಿತ್ತ.

ಅರೆಕ್ಷಣದಲ್ಲಿ ಅಚ್ಚಮ್ಮ ಸಿದ್ಧವಾದಳು. ಹೋಟೆಲ್ ಟ್ಯಾಕ್ಸಿಯೊಂದನ್ನು ಗೊತ್ತುಮಾಡಿಕೊಂಡು ಮೂವ್ವರೂ ಹೊರಟರು.

ದಾರಿಯಲ್ಲಿ ಅಚ್ಚಮ್ಮ ಸೀರೆ, ಕಣ ವ್ಯಾಪಾರ ಮಾಡಿದಳು. ನಾಗರಾಜ ಲಂಗಕ್ಕೆ ಸಿಲ್ಕುಬಟ್ಟೆ ಕೊಂಡ. ಮಾರ್ಕೆಟ್ಟಿನಲ್ಲಿ ನಾಗರಾಜ ಹಣ್ಣು, ಹೂವು, ವೀಳೆಯದೆಲೆ ತೆಗೆದುಕೊಂಡ. ಅಚ್ಚಮ್ಮನೂ ಒಂದು ಬುಟ್ಟಿ ತುಂಬ ಹಣ್ಣು ತೆಗೆದುಕೊಂಡಳು.

ತೊಟ್ಟಿಯಲ್ಲಿ ಒಂದು ಜಮುಖಾನಾ ಹಾಸಲಾಗಿತ್ತು. ಎಲ್ಲರೂ ಕುಳಿತ ಮೇಲೆ ಅಚ್ಚಮ್ಮ

" ಮುತ್ತಮ್ಮನವರೇ, ನಿಮ್ಮ ಉಪಕಾರ ಯಾವ ಜನ್ಮಕ್ಕೂ ಮರೆಯಲಾರೆ. ನಿಮ್ಮ ಋಣ ಎಂದಿಗೂ ತೀರಿಸಲಾರೆ "

ಎಂದು ಹೇಳಿ, ನಾಗರಾಜನಿಂದ ಒಂದು ತಟ್ಟೆ ತರಿಸಿಕೊಂಡು ಅದರಲ್ಲಿ ಸೀರೆ, ಕಣವಿಟ್ಟಳು. ಶಿವರಾಯ ಕಿಸೆಯಿಂದ ಒಂದು ಕಟ್ಟು ನೋಟು

ತೆಗೆದು ಅದರಲ್ಲಿಟ್ಟ. ಅಚ್ಚಮ್ಮ ಮುತ್ತಮ್ಮನಿಗೆ ವೀಳೆಯ ಕೊಟ್ಟು ಕಾಲು ಮುಟ್ಟಿ ನಮಸ್ಕರಿಸಿದಳು.

ಮುತ್ತಮ್ಮ ನೋಟಿನ ಕಂತೆಯನ್ನು ಕೈಗೆ ತೆಗೆದುಕೊಂಡು ಎಣಿಸುತ್ತಾ

"ಇದೇಕಪ್ಪಾ ಮತ್ತೆ? ಆಗಲೇ ಎಲ್ಲಾ ಕೊಟ್ಟಿದ್ದರಲ್ಲಾ."

"ಇರಲಿ ಮುತ್ತಮ್ಮ. ನಿನ್ನ ಕಷ್ಟಕ್ಕಾಗುತ್ತದೆ."

ಎಂದು ಶಿವರಾಯ ಹೇಳಿದ. ಮುತ್ತಮ್ಮ ಎದ್ದು ಹೋಗಿ ತಾನು ಸಿದ್ಧಗೊಳಿಸಿದ್ದ ಬಾದಾಮಿ ಹಾಲನ್ನು ತಂದು ಎಲ್ಲರಿಗೂ ಕೊಟ್ಟಳು.

ಪುಟ್ಟ ಬಂದು ಮುತ್ತಮ್ಮನ ತೊಡೆಯೇರಿ ಕುಳಿತಳು. ಅವಳಿಗೆ ಹಾಲು ಕುಡಿಸುತ್ತಾ

"ಅಮ್ಮನ ಜತೆ ಹೋಗುತ್ತೀಯೋನೇ?"

"ಎಲ್ಲಿಗೆ?"

"ದೊಡ್ಡ ಊರಿಗೆ – ರೈಲಿನಲ್ಲಿ."

"ನೀನು?"

"ನಾನು ಬರುವುದಿಲ್ಲ – ನೀನೊಬ್ಬಳೇ ಹೋಗಬೇಕು."

"ನೀನೂ ಬರುವ ಹಾಗಿದ್ದರೆ ಹೋಗುತ್ತೇನೆ."

"ನೀನು ಹೋಗಿ ಕಾಗದ ಬರಿ, ನಾನು ಬರುತ್ತೇನೆ."

"ಖಂಡಿತ – ತಪ್ಪಕೂಡದು."

"ಇಲ್ಲ. ತಪ್ಪುವುದಿಲ್ಲ."

ಮುತ್ತಮ್ಮ ಪುಟ್ಟನನ್ನೆಬ್ಬಿಸಿ ಅಚ್ಚಮ್ಮನ ವಶಪಡಿಸಿದಳು. ಸಿಲ್ಕ್ ಬಟ್ಟೆಯ ತುಂಡನ್ನು ಪುಟ್ಟನ ಕೈಯಲ್ಲಿಟ್ಟು ಅಚ್ಚಮ್ಮನಿಗೆ ತಾಂಬೂಲವಿತ್ತಳು. ನಾಗರಾಜ ಪುಟ್ಟನ ಬಟ್ಟೆಯ ಸಣ್ಣ ಟ್ರಂಕೊಂದನ್ನು ಕಾರಿನಲ್ಲಿಟ್ಟು ಬಂದ. ಅಚ್ಚಮ್ಮ ಪುಟ್ಟನ ಕೈ ಹಿಡಿದುಕೊಂಡು ಎದ್ದು ನಿಂತಳು. ಮುತ್ತಮ್ಮನ ಕಣ್ಣಲ್ಲಿ ನೀರು ಉಕ್ಕಿತು. ಅದನ್ನು ಬಲವಂತದಿಂದ ನಿವಾರಿಸಿಕೊಂಡು, ಮೋಟಾರು ತನಕ ಹೋಗಿ ಎಲ್ಲರನ್ನೂ ಬೀಳ್ಕೊಂಡಳು. ಮೋಟಾರ್ ಸ್ಟಾರ್ಟ್ ಮಾಡಿದ ಕೂಡಲೆ ಪುಟ್ಟ ಮುತ್ತಮ್ಮನ ಕುತ್ತಿಗೆಯಪ್ಪಿ 'ಹೋಗುವುದಿಲ್ಲ' ವೆಂದು ಹಟ ಹಿಡಿದಳು. ಮುತ್ತಮ್ಮ ಮೆಲ್ಲನೆ ಅವಳ ಕೈಬಿಡಿಸಿ, ಗಾಡಿಯೊಳಗೆ ಕೂಡಿಸಿದಳು.

ನಾಗರಾಜನ ಮುಖವೂ ಬಣ್ಣಗೆಟ್ಟಿತು.

"ಬರುತ್ತೀಯಾ ನಾಗರಾಜ?" ಎಂದು ಶಿವರಾಯ ಕೇಳಿದ.

ನಾಗರಾಜ ಅನುಮಾನಿಸಿದ.

"ರೈಲು ಹತ್ತಿಸಿ ಬಾ"

ಎಂದು ಪುತ್ತಮ್ಮ ಹೇಳಿದಳು.

ಕಾರು ಕಣ್ಮರೆಯಾಗುವವರೆಗೆ ಪುತ್ತಮ್ಮ ಅದನ್ನೇ ನೋಡುತ್ತ ನಿಂತಿದ್ದು ಕಾಲೆಳೆದುಕೊಂಡು ಒಳಗೆ ಬಂದು ಮಲಗಿಬಿಟ್ಟಳು.

ಹೊಟೇಲ್ ತಲುಪುವ ಹೊತ್ತಿಗೆ ಎಂಟು ಗಂಟೆ ಹೊಡೆದಿತ್ತು. ಶಿವರಾಯ

"ನಾಳೆ ಬೆಳಿಗ್ಗೆ ಏಕೆ ಹೊರಡಬಾರದು?" ಎಂದ.

"ಬೇಡ – ಈಗಲೇ ಹೊರಟುಬಿಡೋಣ. ನೀವೂ, ಮಗೂ ಊಟ ಮಾಡಿ - ನನಗೆ ಊಟ ಬೇಕಿಲ್ಲ."

"ನನಗೂ ಬೇಕಿಲ್ಲ. ಮಗೂ ಊಟ ಮಾಡಲಿ"

ಎಂದು ನಾಗರಾಜನ ಜತೆ ಮಾಡಿ ಪುಟ್ಟನನ್ನು ಊಟಕ್ಕೆ ಕಳುಹಿಸಿಕೊಟ್ಟು ತಾನು ಸಾಮಾನು ಕಟ್ಟಿದ.

ಹೊತ್ತಿಗೆ ಸರಿಯಾಗಿ ಸ್ಟೇಷನ್ ಮುಟ್ಟಿದುದೂ ಆಯಿತು. ಶಿವರಾಯ ಸೆಕೆಂಡ್ ಕ್ಲಾಸ್ ಟಿಕೆಟ್ ತೆಗೆಸಿ, ಅಕ್ಕಮ್ಮ ಪುಟ್ಟನೊಂದಿಗೆ ಒಳಗೆ ಕುಳಿತ. ನಾಗರಾಜ ಅವರ ಜತೆಯಲ್ಲಿಯೇ ಕುಳಿತಿದ್ದು ಮೊದಲನೆಯ ಗಂಟೆಯಾಗಲು ಕೆಳಗಿಳಿದು ನಿಂತು

"ಯೋಗಕ್ಷೇಮಕ್ಕೆ ಕಾಗದ ಬರೆಯುತ್ತಿರಮ್ಮ"

ಎಂದ.

ಪುಟ್ಟ ಕಿಟಿಕಿಯಿಂದಲೇ ನಾಗರಾಜನ ಕುತ್ತಿಗೆಯಪ್ಪಿ ಗೋಳಾಡಿದಳು. ನಾಗರಾಜ ಬಲವಂತದಿಂದ ಬಿಡಿಸಿಕೊಳ್ಳಬೇಕಾಯಿತು. ರೈಲು ಹೊರಟಿತು. ನಾಗರಾಜ ರೈಲನ್ನು ನೋಡುತ್ತ ನಿಂತೇ ಇದ್ದ. ಪುಟ್ಟನ ಅಳುವಿನ ಧ್ವನಿ ಬಂದು ಅವನ ಕಿವಿಯನ್ನಪ್ಪಳಿಸುತ್ತಿತ್ತು.

# ೧೦

ಶ್ರೀನಾಥನ ದುಃಖತಪ್ತ ಕರುಣಾರ್ದ್ರನೋಟ ನಾಗರಾಜನ ಚಿತ್ತಭಿತ್ತಿಯ ಮೇಲೆ ಅಚ್ಚೊತ್ತಿದಂತೆ ಮೂಡಿತ್ತು. ಕಮಲನ ಮೋಸದ ಬದುಕಿನ ಕಥೆ ಹೇಳಿ ತಾನೇ ಶ್ರೀನಾಥನಿಗೆ ಅನ್ಯಾಯ ಬಗೆದೆನೆಂದು ನಾಗರಾಜ ಭಾವಿಸಿದ. ಅಂಥ ಉತ್ತಮಕವಿ, ಮನೋರೋಗಕ್ಕೆ ತುತ್ತಾಗಿ ನಾಶಹೊಂದುತ್ತಿರುವನಲ್ಲಾ ಎಂದು ನಾಗರಾಜನ ಮನಸ್ಸಿಗೆ ದಾರುಣ ವೇದನೆಯಾಯಿತು. ಇಷ್ಟೆಲ್ಲ ಅನರ್ಥಕ್ಕೆ ತಾನೇ ಕಾರಣನೆಂಬುದನ್ನೂ ಅವನು ಮರೆಮಾಜುತ್ತಿರಲಿಲ್ಲ. 'ನಾನು ಗವಿಯಪ್ಪನಿಗೆ ಕಮಲನ ಪರಿಚಯ ಮಾಡಿಕೊಡದಿದ್ದರೆ ಇಷ್ಟು ಅನರ್ಥವಾಗುತ್ತಿರಲಿಲ್ಲ. ಅವರ ಮಧುರ ಪ್ರೇಮಕ್ಕೆ ನಾನೇ ಮುಳ್ಳು ಹಿಂಡಿದೆ' ಎಂದು ಪಶ್ಚಾತ್ತಾಪ ಪಟ್ಟ. ಕಾಲ ಮೀರಿ ಹೋಗಿತ್ತು – ಕೈ ಮಿಂಚಿಹೋಗಿತ್ತು – ಹಾಲು ಒಡೆದು ಹೋಗಿತ್ತು.

ಶ್ರೀನಾಥನನ್ನು ಕಾಣುವುದಕ್ಕೆ ಅವನ ರೂಮಿನ ಬಳಿ ನಾಲ್ಕೆಂಟು ಬಾರಿ ನಾಗರಾಜ ಹೋಗಿ ಬಂದ. ಶ್ರೀನಾಥನ ದರ್ಶನ ಅವನಿಗೆ ಸಿಗಲಿಲ್ಲ. ಹೊಟೇಲ್ ಮಾಲೀಕನನ್ನು ಕೇಳಿದ. 'ಯಾವಾಗಲೋ ಬರುತ್ತಾರೆ, ಯಾವಾಗಲೋ ಹೋಗುತ್ತಾರೆ. ಅವರದು ಯಾವುದೂ ನೆಚ್ಚಿಗೆಯಿಲ್ಲ' ಎಂದು ಅವನು ತಿಳಿಸಿದ. ನಾಗರಾಜನ ಮನಸ್ಸಿಗೆ ದುಗುಡವಾಯಿತು. 'ಶ್ರೀನಾಥನ ಬುದ್ಧಿ ಭ್ರಮಣೆಯಾಗಿರಬಹುದೇ' ಎಂಬ ಯೋಚನೆಯೂ ಹೊಳೆಯಿತು. ನಾಗರಾಜ ಚಿಂತೆಯಲ್ಲಿ ಮನಸ್ಸನ್ನು ತೇಲಿಬಿಟ್ಟು ಸುಮ್ಮನೆ ಕೂಡಲಿಲ್ಲ. ಒಂದು ಸಂಜೆ ಶರ್ಮನನ್ನು ಅವನ ಕಛೇರಿಯಲ್ಲಿ ಭೆಟ್ಟಿಯಾದ. ಕಕ್ಷಿಗಾರರು ಯಾರೂ ಇರಲಿಲ್ಲವಾದ್ದರಿಂದ ಶರ್ಮ ನಿರಾತಂಕವಾಗಿ ಅಲ್ಲಿಯೇ ಮಾತನಾಡಬಹುದಾಗಿತ್ತು.

ಶ್ರೀನಾಥನ ಕಥೆಯನ್ನು ಶರ್ಮನಿಗೆ ವಿವರಿಸಿ "ಅವರ ಪತ್ತೆಯೇ ಇಲ್ಲ ಸಾರ್" ಎಂದ.

ಶರ್ಮನಿಗೂ ಗಾಬರಿಯಾಯಿತು.

"ಹೊಟೇಲಿನಲ್ಲಿ ಕೇಳಿದೆಯಾ ?"

"ಕೇಳಿದೆ. ಅವರು ಬಂದು ಹೋಗುವ ಕಾಲ ನಿಖರವಾಗಿ ಗೊತ್ತಿಲ್ಲ ಎಂದು ಮಾಲಿಕ ಹೇಳಿದ"

"ಅವನು ರಾತ್ರಿ ಎಲ್ಲಿ ಮಲಗುತ್ತಾನೆ ?"

"ಅದೇ ನನಗೂ ದೊಡ್ಡ ಸಮಸ್ಯೆಯಾಗಿರುವುದು" ಎಂದು ನಾಗರಾಜ ಹೇಳಿದ.

"ನಿನಗೆ ತಿಳಿದ ಕಡೆಯಲ್ಲಾ ಹುಡುಕು ನಾಗರಾಜ. ಪತ್ತೆ ಸಿಕ್ಕಿದರೆ ಕೂಡಲೆ ನನಗೆ ತಿಳಿಸು."

"ಆಗಬಹುದು ಸಾರ್."

"ಕಮಲನ ಮನೆಗೆ ಹೋಗಿರಬಹುದೇ ?"

"ಅವರು ಇನ್ನು ಅಲ್ಲಿ ಕಾಲಿಡುವುದಿಲ್ಲ ಸಾರ್."

ಶರ್ಮ ಡಾಕ್ಟರಿಗೆ ಸುದ್ದಿ ಮುಟ್ಟಿಸಿದ. ಅವರಿಬ್ಬರೂ ಗೆಳೆಯನ ಪತ್ತೆಗೆ ಹೆರತರದೂದು ಮಾಡಿದರು.

ನಾಗರಾಜ ನಿರಾಶನಾಗಲಿಲ್ಲ. 'ಶ್ರೀನಾಥ ರೂಮಿಗೆ ಮಲಗಲು ಹೋಗದಿದ್ದರೆ, ಯಾವದಾದರೂ ಹೊಟೇಲಿನಲ್ಲಿರಬೇಕು. ಕಮಲನ ಮನೆಯಲ್ಲಿರುವುದಂತೂ ಅಶಕ್ಯ.' ಎಂದು ತರ್ಕಿಸಿಕೊಂಡು ಈ ವಿಷಯವನ್ನು ತನ್ನ ವೃತ್ತಿ ಬಂಧುಗಳಾದ ರಾಮು, ಧರ್ಮೂ ಅವರಲ್ಲಿ ಪ್ರಸ್ತಾಪಿಸಿದ. ಅವರಿಂದಲೂ ಸಮಾಧಾನಕರವಾದ ಉತ್ತರ ದೊರೆಯಲಿಲ್ಲ.

"ಗಣೇಶನಿಗೂ ಹೊಟೇಲುಗಳಿಗೂ ಗಂಟು ಹೆಚ್ಚು. ಅವನನ್ನು ಕೇಳಿದರೆ ಗೊತ್ತಾಗುತ್ತದೆ"

ಎಂದು ಧರ್ಮೂ ಸಲಹೆಯಿತ್ತ. ನಾಗರಾಜ ಮಾರ್ಕೆಟ್ ಬಳಿ ಗಣೇಶನ ದಾರಿ ನೋಡುತ್ತ ಕುಳಿತ.

ಯಾರ ಜತೆಗೋ ಹೋಗಿದ್ದ ಗಣೇಶ ಏಳು ಗಂಟೆಯ ಸುಮಾರಿಗೆ ತನ್ನ 'ವೃತ್ತಿಕಟ್ಟೆ'ಯ ಬಳಿಗೆ ಬಂದ. ವ್ಯವಹಾರದ ಮಾತುಕತೆ ಮುಗಿದ ಮೇಲೆ ನಾಗರಾಜ

"ಗಣೇಶಾ, ಶ್ರೀನಾಥರಾಯರನ್ನು ನೀನು ಬಲ್ಲೆಯಲ್ಲವೇ ?"

"ಕವಿಗಳು ತಾನೇ ?"

"ಹೊ ! ಕವಿಗಳು."

"ಏನು ಅವರ ಸಮಾಚಾರ ?"

"ಅವರ ಪತ್ತೆಯೇ ಸಿಕ್ಕಿಲ್ಲ. ರೂಮಿಗೆ ಹೋದರೆ ಅಲ್ಲಿಯೂ ಸಿಕ್ಕು ವುದಿಲ್ಲ."

"ರೂಮಿನಲ್ಲಿದ್ದರೆ ಸಿಕ್ಕುತ್ತಾರೆ. ಇಲ್ಲದಿದ್ದರೆ ಹೇಗೆ ಸಿಕ್ಕುತ್ತಾರೆ ಹೇಳು."

ಅವರೆಲ್ಲಿದ್ದಾರೆಂಬುದು ನಿನಗೆ ಗೊತ್ತಿದೆಯೇ ?"

"ಗೊತ್ತಿದೆ."

"ಎಲ್ಲಿದ್ದಾರೆ ಹೇಳು ಮಾರಾಯ."

"ಹೇಳಿದರೆ ಏನು ಕೊಡುತ್ತೀ ?"

"ನೀನು ಕೇಳಿದ್ದು."

"ಕ್ರೌನ್ ಬಾರಿಗೆ ಕರೆದುಕೊಂಡು ಹೋಗುತ್ತೀಯಾ ?"

"ನಾನು ಬರಲು ಸಾಧ್ಯವಿಲ್ಲ. ನೀನು ಹೋಗು – ದುಡ್ಡು ಕೊಡು ತ್ತೀನೆ."

ಎಂದು ಅವನ ಕೈಯಲ್ಲಿ ಎರಡು ರೂಪಾಯಿ ಇಟ್ಟ.

"ಸಿಲ್ವರ್ ಹೋಟೇಲ್ ಗೊತ್ತೋ ? ಮಹಡಿ ಮೇಲೆ ೩೯ ನೆಯ ನಂಬರು ರೂಮು – ಕೊನೆಯದು."

"ಉಪಕಾರ ಮಾಡಿದೆ ಮಾರಾಯ"

ಎಂದು ಗಣೇಶನಿಗೆ ಅಭಿನಂದಿಸಿ ಅಲ್ಲಿ ನಿಲ್ಲದೆ ಹೊರಟುಬಿಟ್ಟ.

ನಾಗರಾಜ 'ಸಿಲ್ವರ್ ಹೋಟೇಲಿನ' ೩೯ ನೆಯ ನಂಬರು ರೂಮಿನ ಮುಂದೆ ನಿಂತ. ಬಾಗಿಲಿಗೆ ಬೀಗ ಬಿದ್ದಿರಲಿಲ್ಲ – ಒಳಗೆ ದೀಪವೂ ಇರಲಿಲ್ಲ. 'ಏಳೂವರೆ ಗಂಟೆಗೇ ಮಲಗಿಬಿಟ್ಟಿದ್ದಾರೆಯೇ' ಎಂದುಕೊಂಡು ನಾಗರಾಜ ಬಾಗಿಲು ತಟ್ಟಿದ. ಒಳಗಿನಿಂದ ಪ್ರತ್ಯುತ್ತರ ಬರಲಿಲ್ಲ. ಎರಡು ಮೂರು ಸಲ ತಟ್ಟಿದ ಮೇಲೆ ಒಳಗಿನಿಂದ ಸಣ್ಣ ಧ್ವನಿಯಲ್ಲಿ 'ಯಾರು' ಎಂದು ಧ್ವನಿ ಬಂದಿತು.

"ನಾನು ಸಾರ್ – ನಾಗರಾಜ"

ಬಾಗಿಲು ತೆಗೆಯಿತು. ದೀಪವೂ ಹೆಚ್ಚಲ್ಪಟ್ಟಿತು. ಶ್ರೀನಾಥನ ಗುರುತೇ ನಾಗರಾಜನಿಗೆ ಸಿಕ್ಕಲಿಲ್ಲ. ಹಾಕಿದ ಬಟ್ಟೆ ಬದಲಾಯಿಸಿರಲಿಲ್ಲ. ಕ್ಷೌರ

ನೋಡಿಸಿಕೊಂಡು ಯಾವ ಯುಗವಾಗಿದ್ದಿತೋ? ಊಟ ಮಾಡಿದ್ದನೋ ಇಲ್ಲವೋ ಅನುಮಾನಕ್ಕೆ ಕಾರಣವಾಗಿದ್ದಿತು.

ಶ್ರೀನಾಥ ಮಂಚದ ಮೇಲೆ ಕುಳಿತುಕೊಂಡು ಎದುರಿಗಿದ್ದ ಕುರ್ಚಿ ತೋರಿಸಿ

"ಕುಳಿತುಕೋ ನಾಗರಾಜ"

ನಾಗರಾಜ ಕುಳಿತುಕೊಂಡು

"ಇದೇನು ಸಾರ್ ನಿಮ್ಮ ಅವಸ್ಥೆ. ಮೈಯಲ್ಲಿ ಆರೋಗ್ಯವಿಲ್ಲವೇ? ರೂಮು ಬಿಟ್ಟು ಇಲ್ಲೇಕೆ ಬಂದು ಹೀಗೆ ಅವಿತುಕೊಂಡಿರುವಿರಿ?"

"ನಾನು ಇಲ್ಲಿರುವುದು ನಿನಗೆ ಹೇಗೆ ಗೊತ್ತಾಯಿತು ನಾಗರಾಜ?"

"ಈ ಹೊಟೇಲಿನಲ್ಲಿ ಕೆಲಸ ಮಾಡುವ ನನ್ನೊಬ್ಬ ಸ್ನೇಹಿತನಿಂದ ಸಾರ್. ನಾನು ಬಂದೆನೆಂದು ಕೋಪವೇ?"

"ಇಲ್ಲ ನಾಗರಾಜ್. ನಿನಗಾದರೂ ನಾನು ಬೇಕಾದೆನಲ್ಲಾ ಎಂದು ಸಂತೋಷಪಡುತ್ತಿರುವೆ. ನಾನು ಇಲ್ಲಿರುವ ವಿಷಯ ನೀನು ಯಾರಿಗೂ ತಿಳಿಸಬಾರದು."

"ತಿಳಿಸುವುದಿಲ್ಲ. ಸ್ನಾನ ಊಟ ಆಯಿತೇ ಸಾರ್?"

"ಎಲ್ಲಾ ಆಯಿತಪ್ಪಾ."

ನಾಗರಾಜ ಅಧಿಕಾರವನ್ನು ತನ್ನ ಕೈಗೆ ತೆಗೆದುಕೊಂಡು ಮೊದಲು ಎರಡು ಕಪ್ ಕಾಫಿ ತರಿಸಿದ. ಇಬ್ಬರೂ ಕಾಫಿ ಮುಗಿಸಿದ ಮೇಲೆ ಹೊಟೇಲಿನ ಹಜಾಮನನ್ನು ಬರಮಾಡಿಕೊಂಡು ಶ್ರೀನಾಥನಿಗೆ ಕ್ಷೌರ ಮಾಡಿಸಿದ. ಅವನ ನ್ನೆಬ್ಬಿಸಿ, ತಾನೇ ಬಚ್ಚಲು ಮನೆಗೆ ಕರೆದೊಯ್ದು ನೀರು ತುಂಬಿ ಹಾಕಿ, ಮೈ ಯುಜ್ಜಿ ಚೆನ್ನಾಗಿ ಸ್ನಾನ ಮಾಡಿಸಿ, ಬಟ್ಟೆ ಬದಲಾಯಿಸಿದ.

ಶ್ರೀನಾಥನಿಗೆ ಹೊಸ ಜೀವ ಬಂದಂತಾಯಿತು. ಊಟವೂ ರೂಮಿಗೇ ಬಂತು. ನಾಗರಾಜ ಶ್ರೀನಾಥನೊಂದಿಗೆ ಊಟ ಮಾಡಿದ.

ಶ್ರೀನಾಥನ ಮುಖದ ಮೇಲೆ ಸ್ವಲ್ಪ ಜೀವಕಳೆ ಬಂದಿತು.

"ಸಿಗರೇಟ್ ತರಿಸು ನಾಗರಾಜ"

ಎಂದು ಹೇಳಿದ.

ಮಾಣಿ ಸಿಗರೇಟ್ ತಂದುಕೊಡಲು ಶ್ರೀನಾಥ ಸಿಗರೇಟ್ ಹಚ್ಚಿ

"ಯಾವುದೋ ಜನ್ಮದಲ್ಲಿ ನೀನು ನನ್ನ ಋಣ ತಿಂದಿದ್ದೆ ನಾಗರಾಜ. ಈಗ ನನ್ನ ಶಿಶ್ರೂಷೆ ಮಾಡುವ ಕರ್ಮ ನಿನಗೆ ಗಂಟುಬಿತ್ತು."

"ಈ ಜನ್ಮದಲ್ಲಿಯೂ ನಿಮ್ಮ ಋಣ ಸಾಕಷ್ಟು ತಿಂದಿದ್ದೇನೆ ಸಾರ್. ಅದನ್ನು ತೀರಿಸುವ ಯೋಗ್ಯತೆ ನನಗೆಲ್ಲಿ ಬರಬೇಕು?"

"ಯಾರಿಗೆ ಯಾರ ಋಣವೂ ಇರುವುದಿಲ್ಲ ನಾಗರಾಜ. ಅದೆಲ್ಲಾ ಬಯಲು ಭ್ರಾಂತಿ."

"ಬಹಳ ತಿಳಿದವರಿಗೆ ಏನೂ ತಿಳಿಯದವರೂ ವಿವೇಕ ಹೇಳುವ ಪ್ರಸಂಗಗಳೂ ಬರುತ್ತದಲ್ಲವೇ ಸಾರ್?"

"ಹಾಗಂದರೇನು ನಾಗರಾಜ? ನಿನ್ನ ಅನ್ಯೋಕ್ತಿ ನನಗೆ ಅರ್ಥವಾಗಲಿಲ್ಲ"

"ನಿಮ್ಮ ವಿಷಯಕ್ಕೇ ಹೇಳಿದೆ. ನನಗೆ – ನನ್ನಂಥ ಸಾವಿರಾರು ಜನರಿಗೆ ವಿವೇಕ ಹೇಳಿ, ಸನ್ಮಾರ್ಗ ತೋರಿಸುವ ಯೋಗ್ಯತೆಯುಳ್ಳ ನೀವು ಹೀಗೆ ಕ್ಷಯಿಸುತ್ತಿರುವುದು ನನಗೊಂದು ಸೋಜಿಗವಾಗಿದೆ"

"ದುರ್ಬಲ ಮನಸ್ಸು ಶಿಕ್ಷೆಯನ್ನನುಭವಿಸಬೇಕು ನಾಗರಾಜ."

"ಯಾರೋ ಮಾಡಿದ ತಪ್ಪಿಗೆ ನೀವು ಶಿಕ್ಷೆಯನ್ನನುಭವಿಸಬೇಕೇ? ಇದು ಯಾವ ನ್ಯಾಯ?"

"ಅದನ್ನು ಚರ್ಚಿಸಿ ಫಲವೇನು?"

"ಫಲವಿದೆ. ನೀವು ಚೇತರಿಸಿಕೊಳ್ಳಬೇಕು. ಒಬ್ಬ ಸಾಮಾನ್ಯ ಹೆಂಗಸಿಗೆ ಹೀಗೆ ನೀವು ಪ್ರಾಣ ಒಪ್ಪಿಸುವುದು ನಿಮಗೆ ಮಾತ್ರವೇ ಅಲ್ಲ–ನಮಗೆಲ್ಲಾ ನೀವು ಮಾಡುತ್ತಿರುವ ಅನ್ಯಾಯ."

"ನಿಮಗೇನು ಅನ್ಯಾಯಮಾಡುತ್ತಿರುವೆ?"

"ನಿಮ್ಮ ಕಥೆ, ಕಾದಂಬರಿ, ನಾಟಕ ಬರುವುದು ನಿಂತು ಹೋದರೆ ನಮಗೆ ನಷ್ಟವಲ್ಲವೇ?"

"ಹಾಗೆ ಹೇಳುವುದು ನಿನ್ನ ಔದಾರ್ಯ. ನಾನು ಹುಟ್ಟುವುದಕ್ಕೆ ಮುಂಚೆ ಸಹಸ್ರಾರು ಕವಿಗಳು ಈ ಲೋಕದಲ್ಲಿ ಆಗಿಹೋದರು – ನನ್ನ ತರುವಾಯ ಸಹಸ್ರಾರು ಕವಿಗಳು ಹುಟ್ಟುತ್ತಾರೆ. ನಾನೇ ಲೋಕದ ಬೆಳಗು ಎಂದು ಭಾವಿಸುವವನು ಪರಮ ಮೂರ್ಖ."

"ನಿಮ್ಮಿಂದಲೇ ಬೆಳಕು ಕಂಡವರು ಪಲವರಿದ್ದಾರೆ. ಅವರ ಹಿತಾಹಿತ ನಿಮ್ಮದಲ್ಲವೇ ?"

"ನನ್ನ ಕ್ರಿಯಾಶಕ್ತಿ ನಾಶವಾಗಿಹೋಯಿತು ನಾಗರಾಜ್. ಇನ್ನು ನಾನು 'ಬೆಳಕು ನೀಡುವ' ಕೃತಿಯನ್ನು ವಿರಚಿಸಲಾರೆ. ನನ್ನನ್ನು ಅನುಗ್ರಹಿಸಿದ ತಾಯಿಗೆ ದ್ರೋಹಬಗೆದೆ – ಅದಕ್ಕೆ ಶಿಕ್ಷೆ ಅನುಭವಿಸಲೇ ಬೇಕು"

"ನಿಮ್ಮನ್ನು ಅನುಗ್ರಹಿಸಿದ ತಾಯಿ ನಿಮ್ಮ ಲೋಪದೋಪಗಳನ್ನು ಮನ್ನಿಸಬಲ್ಲ ಉದಾರಿಯೂ ಆಗಿದ್ದಾಳೆ."

"ಅದು ನಿಜವಾದರೆ ನನ್ನ ಭಾಗ್ಯಕ್ಕೆ ಎಣೆಯೇ ಇಲ್ಲ."

"ನಿಜ ಸಾರ್. ಆದರೆ ನೀವು ಈಗಿನ ಕಹಿ ಅನುಭವ ಮರೆತುಬಿಡಬೇಕು."

"ಹೇಗೆ ಮರೆಯಲಿ ನಾಗರಾಜ ?"

"ಜಗತ್ತಿನಲ್ಲಿರುವ ಸ್ತ್ರೀಯರೆಲ್ಲಾ ವಂಚಕಿಯರೇ ?"

"ಛಿ ! ಛಿ ! ಆ ಮಾತು ನಾನೆಂದಿಗೂ ಆಡಲಾರೆ."

"ನಿಮ್ಮ ಯೋಗ್ಯತೆಯನ್ನು ಅರ್ಥಮಾಡಿಕೊಳ್ಳುವ ಹೆಣ್ಣನ್ನು ಕಂಡುಹಿಡಿದು ಅವಳಲ್ಲಿ ನಿಮ್ಮ ದುಃಖ ಮರೆಯಲಾಗುವುದಿಲ್ಲವೇ ?"

"ಅದಕ್ಕೆ ಬೇಕಾದ ತಾಳ್ಮೆಯನ್ನೆಲ್ಲಿಂದ ತರಲಿ ? ಒಂದು ವೇಳೆ ನನಗೆ ಅಂಥ ಹೆಣ್ಣು ದೊರೆತರೆ, ಅವಳ ಪವಿತ್ರ ಜೀವನಕ್ಕೆ ವಿನಿಮಯವಾಗಿ ನನ್ನ ಪಾಪಜೀವನವನ್ನು ಹೇಗೆ ನೀಡಲಿ ?"

"ನಿಮ್ಮ ವಿಚಾರ ಒಮ್ಮೆಳ ಸೂಕ್ಷ್ಮವಾಯಿತು. ನನ್ನ ಬುದ್ಧಿ ಅಷ್ಟು ದೂರ ಎಟಕುವುದಿಲ್ಲ. ನನ್ನದೊಂದು ಸಲಹೆಯಿದೆ – ಕೇಳುವಿರಾ ?"

"ಏನದು ಹೇಳು."

"ನನ್ನೊಂದಿಗೆ ಹೊರಡಿ."

"ಎಲ್ಲಿಗೆ ?"

"ಯಾವ ಪ್ರಶ್ನೆಯನ್ನೂ ಕೇಳಬೇಡಿ. ನನಗೆ ಈಯೊಂದು ಉಪಕಾರ ಮಾಡಿ."

"ಅಷ್ಟೇಕೆ ದೊಡ್ಡಮಾತು. ಬಾರೆಂದರೆ ಬರುತ್ತೇನೆ."

ನಾಗರಾಜ ವೇಳೆಕಳೆಯದೆ ಶ್ರೀನಾಥನನ್ನೆಬ್ಬಿಸಿ ಅವನ ಹೆಗಲ ಮೇಲೆ

ಒಂದು ಟವಲು ಹಾಕಿ, ರೂಮಿನ ದೀಪ ಆರಿಸಿ, ಬೀಗ ಹಾಕಿ, ಬೀಗದ ಕೈಯನ್ನು ಶ್ರೀನಾಥನ ಕಿಸೆಯಲ್ಲಿ ಹಾಕಿದ.

ಕೆಳಗಿಳಿದು ಬಂದ ಮೇಲೆ ನಾಗರಾಜ ಗುಟ್ಟೆಹಳ್ಳಿಗೆ ಒಂದು ಗಾಡಿ ಗೊತ್ತುಮಾಡಿದ.

ಮುತ್ತಮ್ಮನ ಮನೆ ಸಮೀಪಿಸುತ್ತ ಬರಲು

"ಎಲ್ಲಿಗೆ ನಾಗರಾಜ ?"

"ನಮ್ಮ ಮನೆಗೆ."

"ಮುತ್ತಮ್ಮನಿಗೆ ನನ್ನ ಮೇಲೆ ತುಂಬ ಕೋಪವಿದೆ."

"ಅದಕ್ಕೆ ನಾನು ಸಮಾಧಾನ ಹೇಳುತ್ತೇನೆ. ನೀವು ಯೋಚನೆ ಮಾಡಬೇಡಿ."

ಮನೆಗೆ ಸ್ವಲ್ಪ ದೂರದಲ್ಲಿ ಗಾಡಿ ನಿಲ್ಲಿಸಿ ನಾಗರಾಜ ಕೆಳಗಿಳಿದು

"ನೀವು ಸ್ವಲ್ಪ ಗಾಡಿಯಲ್ಲೇ ಇರಿ. ನಾನು ಬಂದು ಕರೆದುಕೊಂಡು ಹೋಗುತ್ತೇನೆ"

ಎಂದು ಹೇಳಿ ಮನೆ ಪ್ರವೇಶಿಸಿದ.

ಮುತ್ತಮ್ಮನಿಗೆ ನಾಲ್ಕೇ ಮಾತಿನಲ್ಲಿ ಶ್ರೀನಾಥನ ಸ್ಥಿತಿಗತಿಯನ್ನು ವರ್ಣಿಸಿ

"ನೀನು ಅವರನ್ನು ಏನೂ ಅನ್ನಕೂಡದು. ಅವರು ತುಂಬ ನೊಂದಿದ್ದಾರೆ"

ಎಂದು ಎಚ್ಚರಿಕೆ ಕೊಟ್ಟು, ಮಹಡಿಯ ಮೇಲಕ್ಕೆ ಹತ್ತಿಹೋದ. ಗಂಗಮ್ಮ ಬೆಡ್ ಲ್ಯಾಂಪಿನ ಬೆಳಕಿನಲ್ಲಿ ಒಂದು ಪುಸ್ತಕ ಓದುತ್ತ ಕುಳಿತಿದ್ದಳು.

"ಗಂಗಮ್ಮಾ"

"ಏನಣ್ಣಾ !"

"ಓದುವುದಕ್ಕೆ ನಿನಗೆ ನಾನು ಕೆಲವು ಪುಸ್ತಕಗಳನ್ನು ಕೊಟ್ಟಿದ್ದೆ— ಜ್ಞಾಪಕವಿದೆಯೇ ?"

"ಶ್ರೀನಾಥ ಅವರದು."

"ಹೌದು ! – ಅವರ ಪರಿಚಯ ಮಾಡಿಕೊಡುತ್ತೇನೆ. ಅವರು ಬಹಳ ದುಃಖದಲ್ಲಿದ್ದಾರೆ. ಅವರ ಮನಸ್ಸಿಗೆ ಸ್ವಲ್ಪವೂ ನೋವಾಗದಂತೆ ನೀನು

ನಡೆದುಕೊಳ್ಳಬೇಕು. ನನಗೆ ಈ ಉಪಕಾರ ನೀನು ಮಾಡಬೇಕು."

"ಏನಣ್ಣ ಹೀಗೆ ಹೇಳುವೆ."

"ಹೇಳಿದ ಮಾತು ಜ್ಞಾಪಕದಲ್ಲಿರಲಿ."

"ಅವರು ಯಾವಾಗ ಬರುತ್ತಾರೆ?"

"ಈಗಲೇ"

ಎಂದು ಹೇಳಿ ಕೆಳಗಿಳಿದು ಹೋದ.

ನಾಗರಾಜ ಹಿಂದಿರುಗುತ್ತಲೇ ಶ್ರೀನಾಥ

"ಏಕೆ ಇಷ್ಟು ಹೊತ್ತು ನಾಗರಾಜ?"

ಎಂದು ಕೇಳಿದ. ನಾಗರಾಜ ಉತ್ತರಕೊಡದೆ ಗಾಡಿಯವನಿಗೆ ಬಾಡಿಗೆ ಕೊಟ್ಟು ಶ್ರೀನಾಥನನ್ನು ಒಳಕ್ಕೆ ಕರೆದುಕೊಂಡು ಹೋದ.

ಮುತ್ತಮ್ಮ ಹಸನ್ಮುಖಿಯಾಗಿ ಶ್ರೀನಾಥನಿಗೆ ಸ್ವಾಗತ [illegible]ಗಳು.

ಶ್ರೀನಾಥ ತೊಟ್ಟಿಯಲ್ಲಿ ಕುಳಿತುಕೊಂಡು

"ಕ್ಷೇಮವೇ ಮುತ್ತಮ್ಮ?" ಎಂದು ಕೇಳಿದ.

"ನಿಮ್ಮ ದಯದಿಂದ. ನಿಮಗೆ ಮೈಯಲ್ಲಿ ಚೆನ್ನಾಗಿಲ್ಲವೆಂದು ನಾಗ ರಾಜ ಹೇಳಿದ – ಏನಾಗಿತ್ತಪ್ಪ?"

"ಏನೂ ಇಲ್ಲ. ಆರೋಗ್ಯವಾಗಿದ್ದೇನೆ. ಪುಟ್ಟ ಮಲಗಿಬಿಟ್ಟಳೇ?"

"ಅವರಮ್ಮ ಬಂದು ಕರೆದಳು. ಕಳಿಸಿಕೊಟ್ಟೆ."

"ಒಳ್ಳೆಯ ಕೆಲಸ ಮಾಡಿದೆ. ನನ್ನ ಮೇಲೆ ನಿನಗೆ ಕೋಪವಿರಬಹುದು ಎಂದು ಭಾವಿಸಿದ್ದೆ."

"ಸರಿ! ಮಾತು ಬರುತ್ತದೆ, ಮಾತು ಹೋಗುತ್ತದೆ. ಅದಕ್ಕೆಲ್ಲಾ ಕೋಪಮಾಡಿಕೊಂಡು ಕೂಡುವುದಕ್ಕಾಗುತ್ತದೆಯೇ? ನೀನೂ ನಮ್ಮ ಮನೆಗೆ ಬಂದು ಬಹಳ ದಿವಸವಾಯಿತು."

"ನಿಜ ಹೇಳಬೇಕೆಂದರೆ ನಿನ್ನ ಮನೆಗೆ ಬರಲು ಮುಖವಿರಲಿಲ್ಲ."

"ಮರೆತುಬಿಡಪ್ಪ ಹೋಗಲಿ."

ನಾಗರಾಜ ಮೆಲ್ಲನೆ ಶ್ರೀನಾಥನಿಗೆ

"ಬನ್ನಿ ಸಾರ್" ಎಂದು ಕರೆದ.

ಶ್ರೀನಾಥ ಅವನನ್ನು ಹಿಂಬಾಲಿಸಿ ಮಹಡಿಯ ಮೇಲಕ್ಕೆ ಹೋದ.

ಆ ವೇಳೆಗೆ ಗಂಗಮ್ಮ ತಲೆ ಸರಿಪಡಿಸಿಕೊಂಡು, ಬೇರೆ ಸೀರೆ ಧರಿಸಿದ್ದಳು. ಬೆಳಕು ಸಾಲದೆಂದು ನಾಗರಾಜ ಅಲ್ಲಿಯೇ ಇದ್ದ ದೊಡ್ಡ ದೀಪ ಹೊತ್ತಿಸಿದ.

ನೆಲದಮೇಲೆ ಒಂದು ಮಗ್ಗುಲಲ್ಲಿ ಗಂಗಮ್ಮನ ಹಾಸಿಗೆ ಹಾಸಿತ್ತು. ಗೋಡೆಯಂಚಿಗೆ ಒಂದು ಜಮಖಾನಾ ಹಾಸಿತ್ತು. ಶ್ರೀನಾಥ ಜಮಖಾನದ ಮೇಲೆ ಕುಳಿತುಕೊಂಡ.

ಗಂಗಮ್ಮ ನಿಂತಿದ್ದಳು. ಒಂದೆಡೆಯಿಂದ ದೊಡ್ಡ ದೀಪದ ಬೆಳಕು, ಇನ್ನೊಂದೆಡೆಯಿಂದ ಬೆಡ್‌ಲ್ಯಾಂಪಿನ ಕಿರಿಬೆಳಕು ಅವಳ ಮುಖದಮೇಲೆ ಚೆಲ್ಲಾಟವಾಡಿದ್ದವು. ಶ್ರೀನಾಥ ಅವಳನ್ನು ಕಣ್ತುಂಬ ನೋಡಿದ. ಗಂಗಮ್ಮ ನಿಸ್ಸಂದೇಹವಾಗಿ ಸುಂದರಿಯಾಗಿದ್ದಳು. ನಸುನೀಳವಾದ ಅವಳ ಮೂಗು, ಮಾಟವಾದ ತುಟಿ, ಬಾಯಿ, ತುಂಬಿದ ತುರುಬು, ಹಾಲುಕೆನೆಯಂಥ ಮೈಬಣ್ಣ ಅವಳ ಸೌಂದರ್ಯವನ್ನು ಸಾರುತ್ತಿದ್ದವು.

ನಾಗರಾಜ ಗಂಗಮ್ಮನ ಕಡೆ ತಿರುಗಿ

"ಇವರು ಯಾರು ಗೊತ್ತೇ?"

ಎಂದು ಕೇಳಿದ. 'ಗೊತ್ತು' ಎನ್ನುವಂತೆ ಗಂಗಮ್ಮ ತಲೆಯಳ್ಳಾಡಿಸಿದಳು.

"ಸರಿಯಾಗಿ ನೋಡಿಕೋ"

ಎಂದು ಹೇಳಿ ಶ್ರೀನಾಥನಿಗೆ

"ಎಲ್ಲವನ್ನೂ ಮರೆತು ಸುಖವಾಗಿ ನಿದ್ರೆಮಾಡಿ ಸಾರ್. ನಾನು ತೊಟ್ಟಿಯಲ್ಲಿ ಮಲಗಿರುತ್ತೇನೆ. ಏನಾದರೂ ಬೇಕಾದರೆ ನನ್ನ ಎಬ್ಬಿಸಿ."

ಎಂದು ಹೇಳಿ ಅಲ್ಲಿ ನಿಲ್ಲದೆ, ಶ್ರೀನಾಥನ ಉತ್ತರಕ್ಕೂ ಕಾಯದೆ ಕೆಳಗಿಳಿದು ಹೋದ.

ಶ್ರೀನಾಥ ಕುಳಿತಲ್ಲಿಯೇ ಕುಳಿತೇ ಇದ್ದ. ಗಂಗಮ್ಮ ದೊಡ್ಡ ದೀಪ ವಾರಿಸಿ ಅವನ ಸಮೀಪದಲ್ಲಿ ಬಂದು ನಿಂತಳು. ಶ್ರೀನಾಥ ಅವಳನ್ನು ಹತ್ತಿರ ಕರೆಯಲಿಲ್ಲ. ಗಂಗಮ್ಮನೇ ಹತ್ತಿರ ಬಂದು ಕುಳಿತಳು. ಮೌನವಾವರಿಸಿತ್ತು. ಶ್ರೀನಾಥ ಬಾಯಿಬಿಡುವ ಲಕ್ಷಣವೇ ಕಾಣಲಿಲ್ಲ.

"ನೀವು ಬಂದದ್ದು ಬಹಳ ಸಂತೋಷ. ನಿಮ್ಮ ಪುಸ್ತಕಗಳನ್ನು ಓದಿ

ದಾರಭ್ಯ ನಿಮ್ಮನ್ನು ನೋಡಬೇಕೆಂದು ಬಯಸುತ್ತಿದ್ದೆ. ದೇವರೇ ಇವತ್ತು ನಿಮ್ಮನ್ನಿಲ್ಲಿಗೆ ಕರೆತಂದ."

"ನನ್ನನ್ನು ಕರೆದುಕೊಂಡು ಬಂದವನು ದೇವರಲ್ಲ – ನಾಗರಾಜ. ನಿನ್ನ ಹೆಸರೇನು ?"

"ಗಂಗಾ"

"ಗಂಗಾ, ನೀನು ನನ್ನ ಎಷ್ಟು ಪುಸ್ತಕಗಳನ್ನೋದಿರುವೆ ?"

"ನಾಗರಾಜಣ್ಣನ ಹತ್ತಿರವಿರುವ ಎಲ್ಲಾ ಪುಸ್ತಕಗಳನ್ನೂ ಓದಿದ್ದೇನೆ."

"ಅವುಗಳನ್ನೋದಿ ನಾನೊಬ್ಬ ಮಹರ್ಷಿ ಎಂದು ಭಾವಿಸಿಕೊಂಡಿದ್ದೆಯಲ್ಲವೇ ?"

"ಹೌದು ಹೌದು. ನೀವು ಬಹಳ ವಯಸ್ಸಾದವರು....ನಿಮಗೆ ಉದ್ದವಾದ ಗಡ್ಡವಿರಬಹುದು ಎಂದು ಭಾವಿಸಿದ್ದೆ."

"ನಿನ್ನ ಭಾವನೆ ತಪ್ಪೆಂದು ಈಗ ಹೊಳೆಯಿತಲ್ಲವೇ ? ದೊಡ್ಡದೊಡ್ಡ ತತ್ತ್ವಗಳನ್ನು ಪ್ರತಿಪಾದಿಸುವ ನಾನೂ ಒಬ್ಬ ಸಾಮಾನ್ಯ ಮನುಷ್ಯ – ಒಬ್ಬ ಪಾಪಿ ಎಂದು ತಿಳಿಯಿತಲ್ಲವೇ ?"

"ನೀವು ಹೇಳುತ್ತಿರುವುದು ನನಗೆ ಅರ್ಥವಾಗುತ್ತಿಲ್ಲ. ಹಾಗೆ ನಾನು ಹೇಳಿದೆನೇ ?"

"ಛಿ ! ನೀನು ಹೇಳಲಿಲ್ಲ. ಹೇಳಬೇಕಾಗಿತ್ತೆಂದು ನಾನೇ ಸೂಚಿಸಿದೆ"

"ನೀವು ಬಹಳ ದುಃಖದಲ್ಲಿದ್ದೀರೆಂದು ಅಣ್ಣಯ್ಯ ಹೇಳಿದುದು ನಿಜ."

"ನಾನೇನು ! ಇಡೀ ಜಗತ್ತೇ ದುಃಖದಲ್ಲಿದೆ."

"ದುಃಖ ಮರೆತುಬಿಡಿ."

"ಅದೇ ಪ್ರಯತ್ನದಲ್ಲಿದ್ದೇನೆ."

"ನನ್ನ ನೋಡಿ ಮರೆಯಲಾಗುವುದಿಲ್ಲವೇ ?"

"ಗಂಗಾ, ನಿನ್ನ ಮುಖ ಸರಳವಾಗಿದೆ, ಕಾಪಟ್ಯವಿಲ್ಲ, ಕೊಂಕಿಲ್ಲ. ಈ ಜೀವನಕ್ಕೆ ನಿನ್ನನ್ನು ಯಾರು ಎಳೆದರು ? ಇಲ್ಲಿಗೆ ಹೇಗೆ ಬಂದೆ ?"

"ಅದು ಒಂದು ದೊಡ್ಡ ಕಥೆ. ಈಗೇತಕ್ಕೆ ಆ ವಿಷಯ ?"

"ನಿನಗೆ ಬೇಸರವಾಗದಿದ್ದರೆ ಹೇಳು."

ಗಂಗಮ್ಮ ತನಗೆ ಲಗ್ನವಾದ ದಿನದಿಂದ ಅಂದಿನವರೆಗೆ ನಡೆದ ಘಟನೆಗಳನ್ನು ಸೂಕ್ಷ್ಮವಾಗಿ ನಿರೂಪಿಸಿದಳು.

"ಗಂಗಾ, ಈ ಬಾಳು ನಿನಗೆ ಪ್ರಿಯವಾಗಿದೆಯೇ ?"

"ಮೊದಮೊದಲು ಇದರಲ್ಲಿ ಏನೋ ಸುಖವಿದೆ ಎಂದು ಭ್ರಮಿಸಿದ್ದೆ. ಈಚಿನ ನನ್ನ ಅನುಭವ ಆ ಸುಖವೆಂಥದು ಎನ್ನುವುದನ್ನು ಚೆನ್ನಾಗಿ ತಿಳಿಸಿಕೊಟ್ಟಿದೆ."

"ಹೊಟ್ಟೆಹೊರೆಯುವುದು ಅಷ್ಟು ಕಷ್ಟವಲ್ಲ ಗಂಗಾ. ಮೈಮುರಿದು ದುಡಿದು ತನ್ನ ಅನ್ನ ತಾನು ಸಂಪಾದಿಸಿಕೊಂಡರೆ ಅಗೌರವವಾಗುವುದಿಲ್ಲ."

"ಕಾಲುಜಾರಿ ಭಾವಿಗೆ ಬಿದ್ದಿದ್ದೇನೆ. ನನ್ನನ್ನು ಮೇಲಕ್ಕೆತ್ತುವವರು ಯಾರು ?"

"ದೇವರು ಅವತಾರಮಾಡಿ ಮನುಷ್ಯರನ್ನು ಉದ್ಧಾರಮಾಡುತ್ತಾನೆಂದು ಪುರಾಣಗಳು ಹೇಳಿವೆ. ದೇವರು ಸ್ವರ್ಗದಿಂದ ಬರುವುದಿಲ್ಲ, ನಮ್ಮ ಹೃದಯದಿಂದಲೇ ಬರುತ್ತಾನೆ. ಯಾರ ಉದ್ಧಾರ ಯಾರಿಂದಲೂ ಆಗುವುದಿಲ್ಲ. ಪ್ರತಿಯೊಬ್ಬರೂ ತಮ್ಮ ಉದ್ಧಾರ ಮಾರ್ಗವನ್ನು ತಾವೇ ಕಂಡುಕೊಳ್ಳಬೇಕು. ನನ್ನನ್ನು ಶುಷ್ಕ ಅರಸಿಕನೆಂದು ನೀನು ಭಾವಿಸಬಹುದು. ಸುಖವಾಗಿ ರಾತ್ರಿಯನ್ನು ಕಳೆಯದೆ ನಿನಗೆ ವೇದಾಂತ ಉಪದೇಶಮಾಡುತ್ತಿರುವೆನಲ್ಲವೇ ?"

ಗಂಗಮ್ಮನ ಮುಖ ಗಂಭೀರ ಮುದ್ರೆ ತಳೆದಿತ್ತು. ಕಣ್ಣಂಚಿನಲ್ಲಿ ಹನಿಗೂಡಿತ್ತು.

"ನಿನ್ನನ್ನೂ ದುಃಖಕ್ಕೀಡುಮಾಡಿದೆನಲ್ಲಾ. ನನ್ನ ಬಾಳಿನಿಂದ ಯಾರಿಗೂ ಶಾಂತಿ, ತೃಪ್ತಿ ದೊರೆಯುವಂತಿಲ್ಲ. ದುಃಖಿ, ದುಃಖವನ್ನಲ್ಲದೆ ಸುಖ ಕೊಡಬಲ್ಲನೇ ?"

ಶ್ರೀನಾಥನ ಮಾತುಗಳು ಮರ್ಮಘಾತಕವಾಗಿದ್ದವು. ಅವುಗಳ ಕಠೋರ ಸತ್ಯ ಗಂಗಮ್ಮನ ಹೃದಯವನ್ನು ಇರಿದಿದ್ದವು. ಧೈರ್ಯ ತಂದುಕೊಂಡು

"ನನ್ನನ್ನು ನಿಮ್ಮ ದಾಸಿಯಾಗಿ ಸ್ವೀಕರಿಸಿ. ನಿಮ್ಮ ಸೇವೆಮಾಡಿ ಧನ್ಯಳಾಗುತ್ತೇನೆ."

"ನಾನಷ್ಟು ದೊಡ್ಡವನಲ್ಲ ಗಂಗಾ. ಒಂದು ವಿಷಗಳಿಗೆಯಲ್ಲಿ ಈ ಮನಸ್ಸನ್ನು ಒಬ್ಬಳಿಗೆ ಒಪ್ಪಿಸಿದೆ. ಅಗ್ನಿಸಾಕ್ಷ್ಯವಾಗಿ ನಾವು ಲಗ್ನವಾಗ ಲಿಲ್ಲ. ಪುರೋಹಿತರು ಹೇಳಿಕೊಟ್ಟ 'ಧರ್ಮೇಚ, ಅರ್ಥೇಚ, ಕಾಮೇಚ' ಶಪಥ ತೊಡಲಿಲ್ಲ. ಆದರೆ ತ್ರಿಕರಣ ಪೂರ್ವಕವಾಗಿ ಧರ್ಮ, ಅರ್ಥ, ಕಾಮ ಗಳಲ್ಲಿ ನಾವು ಒಂದಾಗಿರಬೇಕೆಂದು ನಿರ್ಧರಿಸಿಕೊಂಡೆವು. ಆ ನಿರ್ಧಾರ ಗಾಳಿಗೆ ತೂರಿ ಹೋಯಿತು. ಒಮ್ಮೆ ಅರ್ಪಿತವಾದ ಮನಸ್ಸನ್ನು ಇನ್ನೊಮ್ಮೆ ಅರ್ಪಿಸಲು ಸಾಧ್ಯವೇ ?"

"ನಾನು ನಿಮ್ಮಿಂದ ಏನನ್ನೂ ನಿರೀಕ್ಷಿಸುವುದಿಲ್ಲ – ಬಯಸುವುದಿಲ್ಲ. ನಿಮ್ಮ ಸೇವೆ ಮಾಡುವ ಅವಕಾಶಕೊಡಿ."

"ನನ್ನ ಕಣ್ಣಿನಲ್ಲಿ ಹೆಣ್ಣು ಎಂದಿಗೂ ದಾಸಿಯಲ್ಲ ಗಂಗಾ. ಅವಳೇ ಜಗದ್ಧಾತ್ರಿ. ಅವಳು ಎಂಥವಳೇ ಆಗಿರಲಿ – ಎಷ್ಟೇ ಕನಿಷ್ಠಳಾಗಿರಲಿ ನಾನು ಅವಳನ್ನು ಪೂಜಿಸುತ್ತೇನೆ."

ಗಂಗಮ್ಮನಿಗೆ ಏನೋ ಅನುಮಾನ ಬಂದು, ಶ್ರೀನಾಥನ ಮುಖವನ್ನು ದಿಟ್ಟಿಸಿ ನೋಡಿದಳು. ಶ್ರೀನಾಥ ಸಂಶಯಗ್ರಸ್ತನಾಗಿ

"ಏಕೆ ಗಂಗಾ, ಹೀಗೆ ನೋಡುತ್ತಿರುವೆ ?"

"ಏಕೂ ಇಲ್ಲ. ನನ್ನ ಮುಂದೆ ಕುಳಿತು ಈ ಮಾತುಗಳನ್ನಾಡುತ್ತಿರು ವವರು ಮನುಷ್ಯರೋ ದೇವರೋ ಎಂದು ಸಂದೇಹ ಬಂತು."

ಶ್ರೀನಾಥ ಹೊರಡಲನುವಾಗಿ ಎದ್ದು ನಿಂತ. ಗಂಗಮ್ಮ ಭಕ್ತಿಯುತ ವಾಗಿ ಅವನ ಪಾದಗಳಿಗೆ ಪ್ರಣಾಮ ಮಾಡಿದಳು.

"ಹೋಗಿ ಬರಲೇ ?" ಎಂದು ಕೇಳಿದ.

"ಹೋಗಿ ಬನ್ನಿ" ಎಂದು ಹೇಳಿದಳು.

ಕರುಣಾಪೂರಿತನಾಗಿ ಶ್ರೀನಾಥ ಅವಳ ತಲೆಯನ್ನೊಮ್ಮೆ ನೇವರಿಸಿ ಮೆಟ್ಟಿಲು ಇಳಿದು ಕೆಳಗೆ ಹೋದ. ನಾಗರಾಜನಿಗೆ ನಿದ್ರೆ ಬಂದಿರಲಿಲ್ಲ.

"ಏನು ಸಾರ್ ?"

"ಬಾಗಿಲು ತೆಗೆ"

ನಾಗರಾಜ ಬಾಗಿಲು ತೆಗೆಯಲು ಶ್ರೀನಾಥ ಹೊರಕ್ಕೆ ಬಂದ.

"ಏಕೆ ಸಾರ್, ಹೊರಟುಬಿಟ್ಟಿರಿ ? ಏನಾಯಿತು ?"

"ಏನೂ ಇಲ್ಲ ನಾಗರಾಜ. ನಾನು ಯಾರನ್ನೂ ಮುಖವೆತ್ತಿ ನೋಡ ಲಾರೆ. ಗಂಗಮ್ಮನನ್ನು ಆಕ್ಷೇಪಿಸಬೇಡ – ಅವಳು ನಿಜವಾಗಿ ಒಳ್ಳೆಯ ಹೆಂಗಸು."

ಎಂದು ಅಲ್ಲಿ ನಿಲ್ಲದೆ ಹೊರಟೇಬಿಟ್ಟ.

ತಾನು ಮಾಡಿದ ಪ್ರಯತ್ನವೆಲ್ಲಾ ನಿಸ್ಸಾರ್ಥಕವಾದುದಕ್ಕೆ ನಾಗರಾಜ ವ್ಯಥೆಗೊಂಡ.

ಗಂಗಮ್ಮ ತನಗೂ ಶ್ರೀನಾಥನಿಗೂ ನಡೆದ ಮಾತುಕತೆಯನ್ನು ವಿವರಿಸಿ

"ಅವರ ಮನಸ್ಸಿನಲ್ಲೇತಕ್ಕೆ ಇಂಥ ನೋವು ಅಣ್ಣಯ್ಯಾ?"

ಎಂದು ಕೇಳಿದಳು.

ನಾಗರಾಜ ಅವಳಿಗೆ ಕಮಲನ ಪ್ರಕರಣವನ್ನು ಸವಿಸ್ತಾರವಾಗಿ ನಿರೂಪಿಸಿದ.

ಮಾರನೆಯ ಬೆಳಿಗ್ಗೆ ಎಂಟುಗಂಟೆಗೇ ಶ್ರೀನಾಥನ ರೂಮಿನ ಬಾಗಿಲನ್ನು ಯಾರೋ ತಟ್ಟಿದರು. ಶ್ರೀನಾಥ ಗೊಣಗಿಕೊಂಡೇ ಎದ್ದು ಬಾಗಿಲು ತೆಗೆದ. ನಾಗರಾಜ, ಶರ್ಮ, ಡಾಕ್ಟರ್ ನೀಲಕಂಠರಾಯ ಒಳಕ್ಕೆ ಬಂದು ಕುಳಿತರು. ಶ್ರೀನಾಥ ಮುಖತೊಳೆದುಕೊಂಡು ಬಂದು ನಾಗರಾಜನಿಗೆ

"ಕಾಫಿ ಹೇಳಿ ಬಾ"

ಎಂದು ತಿಳಿಸಿ ಶರ್ಮನಿಗೆ

"ಕೊನೆಗೂ ನಾಗರಾಜ ನನಗೆ ಕೈಕೊಟ್ಟ."

"ಏಕೆ?"

"ನನ್ನ ವಿಷಯ ಯಾರಲ್ಲಿಯೂ ಹೇಳುವುದಿಲ್ಲವೆಂದು ಮಾತು ಕೊಟ್ಟಿದ್ದ."

"ನಿನ್ನ ಸಿಲ್ವರ್ ಹೊಟೇಲಿಗೆ ಹೋಗಿ, ಅಲ್ಲಿ ಇಲ್ಲದುದನ್ನು ಕಂಡು ಇಲ್ಲಿಗೆ ಬಂದೆವು."

"ನೀನು ನಮಗೆ ಬಹಳ ಅನ್ಯಾಯ ಮಾಡುತ್ತಿರುವೆ ಶ್ರೀನಾಥ."

ಎಂದು ನೀಲಕಂಠ ಸೂಚಿಸಿದ.

ನಾಗರಾಜ ಕಾಫಿ ತೆಗೆಸಿಕೊಂಡು ಬಂದ. ನಾಲ್ವರೂ ಕಾಫಿ ಸೇವಿಸಿ ಮಾಣಿಯನ್ನು ಕಳಿಸಿಕೊಟ್ಟರು.

" ಈ ಅಜ್ಞಾತವಾಸ ಇನ್ನೆಷ್ಟುದಿನ ಶ್ರೀನಾಥ ? "

ಎಂದು ಶರ್ಮ ಕೇಳಿದ.

" ನನ್ನ ಜೀವಾವಧಿ. ಯಾವ ಸುಖ, ಸಂತೋಷ ಸಾಧಿಸುವುದಕ್ಕೆ ನಾನು ಬದುಕಿರಬೇಕು ? "

" ನೀನೇ ಹೀಗೆ ಮಾತನಾಡಿದರೆ ನಾವೇನು ಹೇಳಲು ಸಾಧ್ಯ ?"

" ಶರ್ಮಾ – ಡಾಕ್ಟರ್, ನೀವೇಕೆ ನನ್ನ ಮರೆಯಲೊಲ್ಲಿರಿ ? "

" ನಿನ್ನ ಯಾರು ಮರೆಯುವುದಕ್ಕಾಗುತ್ತದೆ ಶ್ರೀನಾಥ? ನಿನ್ನೆ ರಾತ್ರಿ ಮುತ್ತಮ್ಮನ ಮನೆಯಲ್ಲಿ ನಡೆದುದನ್ನು ನಾಗರಾಜ ಹೇಳಿದ. ಅದನ್ನು ಕೇಳಿದ ನಮ್ಮ ಮನಸ್ಸಿನ ಮೇಲೆ ಯಾವ ಪರಿಣಾಮವಾಯಿತೆನ್ನುವುದನ್ನು ನೀನೇ ಊಹಿಸಿಕೊಳ್ಳಬೇಕು."

" ನೀನು ಮಾಡಿರುವ ಕೆಲಸಕ್ಕೆ ನನಗೆ ತುಂಬ ಕೋಪಬಂದಿದೆ ನಾಗರಾಜ."

" ಬಂದರೂ ಬರಲಿ ಸಾರ್. ನನ್ನ ಬಯ್ದರೂ ಸರಿಯೆ – ಹಿಡಿದು ಕೊಂಡು ನಾಲ್ಕು ಬಿಗಿದರೂ ಸರಿಯೆ. ನೀವು ಈ ರೀತಿ ಕೊರಗುತ್ತಿರುವು ದನ್ನು ನಾನು ನೋಡಿ ಸಹಿಸಲಾರೆ."

" ನಿನಗಾಗಿ ನಿನ್ನ ತಂಗಿ ತುಂಬ ಚಿಂತಿಸುತ್ತಿದ್ದಾಳೆ. ನಿತ್ಯ ಕಣ್ಣೀರು ಹಾಕುತ್ತಾಳೆ"

ಎಂದು ಡಾಕ್ಟರು ತಿಳಿಸಿದ. ಶ್ರೀನಾಥನ ಮುಖ ವಿವರ್ಣವಾಯಿತು.

" ಅಷ್ಟಕ್ಕೆ ನಾನು ಅರ್ಹನಲ್ಲ ಡಾಕ್ಟರ್."

" ನೀನು ಹೋದ ದಾರಿಗೆ ನಿನ್ನನ್ನು ಬಿಟ್ಟದ್ದು ನಮ್ಮ ತಪ್ಪು. ಇನ್ನಾದರೂ ನೀನು ಸ್ವಲ್ಪ ನಮ್ಮ ಮಾತು ಕೇಳಬೇಕು."

" ಹೇಳು ಶರ್ಮಾ. ಕೇಳುತ್ತೇನೆ."

" ಕಮಲನನ್ನು ಮರೆತುಬಿಡಬೇಕು. ಅವಳು ಸತ್ತುಹೋದಳೆಂದು ಭಾವಿಸಿಕೊಂಡು ಬಿಡು."

ಶ್ರೀನಾಥ ನಕ್ಕು

" ಈ ಉಪದೇಶಕೊಡುವುದು ಸುಲಭ ಶರ್ಮಾ. ಆಚರಣೆಗೆ ತರುವುದು ತುಂಬ ಕಷ್ಟ."

"ನಾನು ಬಲ್ಲೆ ಶ್ರೀನಾಥ. ಇದು ಸುಲಭಸಾಧ್ಯವೆಂದು ನಾನು ಹೇಳುತ್ತಿಲ್ಲ – ಆದರೆ ನೀನು ನಿರ್ವಹಿಸಬಲ್ಲೆಯೆಂಬ ಧೈರ್ಯದಿಂದ ಹೇಳುತ್ತಿದ್ದೇನೆ."

"ಈ ಊರು ನಿನ್ನ ಸುಮ್ಮನೆ ಕಾಡುತ್ತಿದೆ. ಕೆಲವು ದಿವಸವಾದರೂ ನೀನು ಎಲ್ಲಿಯಾದರೂ ಹೋಗಿ ಬರುವುದು ಒಳ್ಳೆಯದು."

"ಎಲ್ಲಿಗೆ ಹೋಗಲಿ ಡಾಕ್ಟರ್? ಶನಿಕಾಟ ತಪ್ಪಿಸಿಕೊಳ್ಳುವುದಕ್ಕೆ ದೇಶಾಂತರ ಹೋದವನ ಕಥೆಯಂತಾಗುತ್ತದೆ ನನ್ನ ಪಾಡು. ಎಲ್ಲಿ ಹೋದರೆ ತಾನೆ ಏನು, ನೆನಪು ನನ್ನೊಂದಿಗೇ ಬರುವುದಿಲ್ಲವೇ?"

"ನನಗಾಗಿ ಈ ಪ್ರಯತ್ನಮಾಡು."

"ಆಗಬಹುದು. ನನ್ನನ್ನು ಎಲ್ಲಿಗೆ ಕಳುಹಿಸಿಕೊಡುತ್ತೀರಿ?"

"ಚೆಟ್ಟಿಯಾರರು ಮದರಾಸಿನಿಂದ ಕಾಗದ ಬರೆಯುತ್ತಲೇ ಇದ್ದಾರೆ. ಅವರ ಕಛೇರಿಯಲ್ಲಿ ನಿನಗೆ ಒಂದು ಸ್ಥಳ ಕಾದಿಟ್ಟಿದ್ದಾರೆ."

"ಹಿಂದೆ ನನ್ನಲ್ಲಿ ಉತ್ಸಾಹವಿತ್ತು, ಚೇತನವಿತ್ತು. ಚೆಟ್ಟಿಯಾರರು ಮೆಚ್ಚುವಂತೆ ಕೆಲಸಮಾಡಲು ಸಾಧ್ಯವಾಯಿತು. ಈಗ ನಾನು ಹೋದರೆ ಅವರಿಗೆ ಹೊರೆಯಾಗುತ್ತೇನೆ."

"ಹಾಗೆಂದು ಅವರು ಭಾವಿಸುವುದಿಲ್ಲ."

"ನನಗೇನು ಬೆಂಗಳೂರೂ ಒಂದೇ – ಮದರಾಸೂ ಒಂದೇ! ನೀವು ಹೋಗೆಂದರೆ ಹೋಗುತ್ತೇನೆ. ಎಂದು ನನ್ನ ಪ್ರಯಾಣ?"

"ನಾಳೆ ರಾತ್ರಿ ಹೊರಡಬಹುದು. ಇಂದೇ ನಾನು ಚೆಟ್ಟಿಯಾರರಿಗೆ ಕಾಗದ ಬರೆಯುತ್ತೇನೆ."

"ಆಗಬಹುದು."

"ಮನೆಯ ಕಡೆ ಬರುವುದಿಲ್ಲವೇ ಶ್ರೀನಾಥ?"

ಎಂದು ಡಾಕ್ಟರು ದೈನ್ಯದಿಂದ ಕೇಳಿದ.

"ಮದರಾಸಿನಿಂದ ಹಿಂದಿರುಗಿದ ಮೇಲೆ ಬರುತ್ತೇನೆ"

"ಇಲ್ಲೇ ಇರುವೆಯಷ್ಟೇ?"

ಎಂದು ಶರ್ಮ ಕೇಳಿದ.

"ಇರುತ್ತೇನೆ – ನನ್ನ ಪತ್ತೆ ಸಿಕ್ಕಿಬಿಟ್ಟಿತು. ಇನ್ನು ನಾನು ತಲೆ ಮರಸಿಕೊಂಡೇನು ಪ್ರಯೋಜನ?"

ಎಂದು ಶ್ರೀನಾಥ ನಸುನಗುತ್ತ ಉತ್ತರವಿತ್ತ.

ಶರ್ಮ, ಡಾಕ್ಟರು, ನಾಗರಾಜ ಅವನ ಅಪ್ಪಣೆ ಪಡೆದು ಹೊರಟರು.

ನಾಗರಾಜ ಮನೆ ತಲುಪಿದ ಕೂಡಲೆ ಶ್ರೀನಾಥ ಪಾಂಡರಾಸಿಗೆ ಪ್ರಯಾಣ ಬೆಳಸುವ ಸುದ್ದಿಯನ್ನು ಮುತ್ತಮ್ಮನಿಗೂ, ಗಂಗಮ್ಮನಿಗೂ ತಿಳಿಸಿದ. ಮುತ್ತಮ್ಮ ಸ್ನಾನಕ್ಕೆ ಹೋದ ಸಮಯ ಸಾಧಿಸಿ ಗಂಗಮ್ಮ

"ಅಣ್ಣಯ್ಯ, ನೀನು ನನಗೊಂದು ಉಪಕಾರಮಾಡಬೇಕು."

"ಏನು ಹೇಳಮ್ಮಾ."

"ಇನ್ನೊಮ್ಮೆ ನನಗೆ ಕವಿಗಳ ದರ್ಶನಮಾಡಿಸು."

"ಏಕೆ ?"

"ಏಕೆಯೆಂದು ಹೇಳಲಾರೆ. ಅವರನ್ನು ನೋಡಬೇಕೆಂದು ಮನಸ್ಸು ತವಕಪಡುತ್ತಿದೆ."

"ಅವರು ನಿನ್ನ ಸ್ನೇಹ ಬೆಳಸುವುದಿಲ್ಲ ಗಂಗಮ್ಮ. ನಿನ್ನೆಯೇ ಎಲ್ಲಾ ನಿನಗೆ ವಿದಿತವಾಗಲಿಲ್ಲವೇ ?"

"ಆಯಿತು. ಅದಕ್ಕೇ ನಾನು ಅವರನ್ನು ನೋಡಬೇಕು. ಇವತ್ತು ಇಲ್ಲಿಗೆ ಕರೆದುಕೊಂಡು ಬರುವೆಯಾ ?"

"ಅವರು ಬರುವುದಿಲ್ಲ."

"ಅವರಿರುವಲ್ಲಿಗೆ ನನ್ನನ್ನೇ ಕರೆದುಕೊಂಡು ಹೋಗು."

"ನನ್ನ ಮೇಲೆ ಕೋಪಮಾಡಿಕೊಳ್ಳುವರು ಗಂಗಾ. ಮುತ್ತಮ್ಮನಿಗೆ ತಿಳಿದರೆ ಅವಳು ನಮ್ಮಿಬ್ಬರನ್ನೂ ಹರಿದು ತಿಂದುಬಿಡುತ್ತಾಳೆ."

"ಸಂಜೆ ಸಿನೀಮಾಕ್ಕೆ ಹೋಗಬೇಕೆನ್ನುತ್ತೇನೆ. ನೀನು ನನ್ನ ಕರೆದು ಕೊಂಡು ಹೋಗಬಹುದು."

"ಬೇಡ ಗಂಗಾ -- ನನ್ನ ಮಾತು ಕೇಳು."

"ನನ್ನ ಪ್ರಾರ್ಥನೆ ನಿರಾಕರಿಸಬೇಡ ಅಣ್ಣಯ್ಯ -- ನಿನ್ನ ಕಾಲಿಗೆ ಬಿದ್ದು ಕೇಳಿಕೊಳ್ಳುತ್ತೇನೆ."

ನಾಗರಾಜ ಅರೆಮನಸ್ಸಿನಿಂದ ಒಪ್ಪಿಕೊಂಡ.

ಸಂಜೆ ಸಿನೀಮಾ ವ್ಯಾಜಮಾಡಿಕೊಂಡು ಗಂಗಮ್ಮ ಹೊರಗೆ ಹೊರಟಳು.

ನಾಗರಾಜ ಜತೆಯಲ್ಲಿ ಹೋಗುವುದೆಂದು ಇತ್ಯರ್ಥವಾಯಿತು. ಲೋಕಾಭಿರಾಮವಾಗಿ ಮುತ್ತಮ್ಮನನ್ನೂ ಕರೆದರು.

'ಕಣ್ಣು ಚೆನ್ನಾಗಿಲ್ಲ. ಸಿನೀಮಾ ನೋಡಿದರೆ ಹಿಂಸೆಯಾಗುತ್ತದೆ' ಎಂದು ಮುತ್ತಮ್ಮ ತಪ್ಪಿಸಿಕೊಂಡಳು.

ಸಂಜೆ ಆರು ಗಂಟೆ ಸಮಯ. ಮುಸಕು ಕತ್ತಲೆ ಕವಿಯುತ್ತ ಬಂದಿತ್ತು. ನಾಗರಾಜ ಗಂಗಮ್ಮನೊಂದಿಗೆ ಬಂದುದನ್ನು ಕಂಡು ಶ್ರೀನಾಥ ದಿಗ್ಗನೆದ್ದ.

"ನಾನು ಕರೆದುಕೊಂಡು ಬರಲಿಲ್ಲ ಸಾರ್. ಅವಳೇ ಬಲವಂತಮಾಡಿ ನನ್ನ ಕರೆದುಕೊಂಡು ಬಂದಿದ್ದಾಳೆ"

ಎಂದು ನಾಗರಾಜ ಹೇಳಿದ.

ಗಂಗಮ್ಮ ನೆಲದ ಮೇಲೆ ಕುಳಿತಳು. ಅವಳ ದೃಷ್ಟಿ ಸುತ್ತಲೂ ಹರಿಯಿತು.

ಶ್ರೀನಾಥನ ನೆನಪು ಬಹಳ ಹಿಂದಕ್ಕೆ ಜಾರಿತು. ಓಗೇ – ಅವಳೂ ಒಂದು ದಿನ ಬಂದಿದ್ದಳು – ಇದು ಕವಿಗಳ ಕೋಣೆಯ ಹಾಗಿಲ್ಲವಲ್ಲಾ ಎಂದು ಹಾಸ್ಯಮಾಡಿದ್ದಳು. ನೆನಪನ್ನು ಉದ್ದೇಶಪೂರ್ವಕವಾಗಿ ತಳ್ಳಿಹಾಕಿ

"ಏನು ಬಂದೆ ಗಂಗಾ?" ಎಂದು ಕೇಳಿದ.

"ನಾಳೆ ಮದರಾಸಿಗೆ ಪ್ರಯಾಣ ಮಾಡುತ್ತೀರಂತೆ!"

"ಹೌದು. ನನ್ನ ಸ್ನೇಹಿತರು ಗಡೀಪಾರು ಆಜ್ಞೆ ವಿಧಿಸಿದ್ದಾರೆ."

"ಸ್ವಾಮಿ, ನಾನು ಬಂದುದಕ್ಕೆ ಕೋಪ ಬಂದಿತೇ?"

"ಇಲ್ಲ ಗಂಗಾ. ಮನುಷ್ಯ ಸಂಘಜೀವಿ. ಜನರನ್ನು ಬಿಟ್ಟು ದೂರವಿರಬೇಕೆಂದು ಅವನು ಎಷ್ಟು ಪ್ರಯತ್ನಿಸಿದರೂ, ಅದು ಸೂಜಿಗಲ್ಲಿನಂತೆ ಅವನನ್ನು ಎಳೆಯುತ್ತದೆ."

"ನೀವು ರಾತ್ರಿ ಹೇಳಿದ ಮಾತುಗಳನ್ನು ಕುರಿತು ಆಲೋಚನೆ ಮಾಡಿದೆ."

"ನಾನು ಏನು ಆಡಿದೆನೋ ನೆನಪಿಲ್ಲ. ಹುಚ್ಚನ ಮಾತಿಗಿಷ್ಟೇಕೆ ಬೆಲೆ ಕೊಡುತ್ತೀ? ಮರೆತುಬಿಡು."

"ಹೇಗೆ ಮರೆಯಲಿ ಸ್ವಾಮಿ? ಒಂದು ಗಳಿಗೆಯಲ್ಲಿ ನನ್ನ ಜನ್ಮ ಪಾವನ ಮಾಡಿದಿರಿ. ನಾನೂ ಮನುಷ್ಯಳೆಂದು ತೋರಿಸಿಕೊಟ್ಟಿರಿ."

"ಗಂಗಾ, ನನ್ನ ಹುಚ್ಚು ಮಾತಿಗೆ ನೀನು ಇಷ್ಟು ಬೆಲೆಕೊಟ್ಟರೆ ನೀನು ಪೂರಯಿಸುವುದಿಲ್ಲ. ಲೋಕದ ರೀತಿನೀತಿಗೆ ಹೊಂದಿಕೊಳ್ಳದ ನನ್ನ ಸ್ಥಿತಿ ಯೇನಾಗಿದೆ ನೋಡು."

"ಎಲ್ಲರೂ ಲೋಕದ ರೀತಿನೀತಿಗೆ ಹೊಂದಿಕೊಂಡರೆ ಅದಕ್ಕೆ ದಾರಿ ತೋರಿಸುವವರು ಯಾರು ?"

"ಯಾರೋ ನಾನು ಕಾಣೆ. ನಾನಂತೂ ಖಂಡಿತವಾಗಿ ಅಲ್ಲ.... ನೀನು ಬಂದದ್ದೇಕೆ ಹೇಳು."

"ಮದರಾಸಿಗೆ ಹೋಗುವ ವಿಷಯ ನಿರ್ಧರಿಸಿದ್ದೀರಾ ?"

"ನಿರ್ಧರಿಸಿದ್ದೇನೆ — ನಿರ್ಧರಿಸಿದ್ದಾರೆ."

"ಜತೆಯಲ್ಲಿ ನನ್ನನ್ನೇಕೆ ಕರೆದುಕೊಂಡು ಹೋಗಬಾರದು ?"

"ಆ ವಿಷಯ ನಿನ್ನೆಯೇ ಚರ್ಚೆಮಾಡಿದೆವಲ್ಲವೇ ?"

"ಸಾಧ್ಯವಿಲ್ಲವೆಂದು ಹೇಳಿದಿರಿ. ಆದರೂ ಕುಟುಕು ಆಸೆ ನನ್ನಲ್ಲಿ ಉಳಿದಿತ್ತು."

"ಗಂಗಾ, ಅಲ್ಲಿ ನೋಡು – ಎದುರಿಗೆ ಕಾಣುತ್ತಿರುವುದು ನನ್ನ ಕಮಲನ ಭಾವಚಿತ್ರ. ನನ್ನ ಹೃದಯ ತೆರೆದು ಅವಳನ್ನು ಅಲ್ಲಿ ಪ್ರತಿಷ್ಠಾಪನ ಮಾಡಿದೆ. ನನ್ನ ಹೃದಯದಲ್ಲಿ ಮೂಡಿದ ಕಮಲಾ ಇಂದು ಕಣ್ಮರೆಯಾಗಿದ್ದಾಳೆ. ಅವಳು ಬೇರೆ – ಇಂದಿರುವ ಕಮಲಾ ಬೇರೆ ಬೇರೆ ವ್ಯಕ್ತಿಗಳು. ನನ್ನ ಕಮಲನಿಗೆ ನಾನು ಎರಡು ಬಗೆಯಲಾರೆ ಗಂಗಾ – ಅವಳನ್ನು ಎಂದೆಂದಿಗೂ ನನ್ನ ಹೃದಯ ಪೀಠದಿಂದ ಹೊರದೂಡಲಾರೆ."

"ಸ್ವಾಮಿ, ನಾನು ಕೇಳುತ್ತಿರುವುದು ನಿಮ್ಮ ಹೃದಯ ಪೀಠದಲ್ಲಿ ಸ್ಥಾನವನ್ನಲ್ಲ – ಪಾದದ ಬಳಿ ಸ್ಥಳವನ್ನು."

"ನಾವು ಶಿವನನ್ನು ದೇವರೆಂದು ಪೂಜಿಸುತ್ತೇವೆ. ಅವನ ತಪೋಜ್ಜ್ವಲ ಜೀವನವನ್ನು ಆದರ್ಶ ಜೀವನವೆಂದು ಭಾವಿಸುತ್ತೇವೆ. ಏಕೆ ಬಲ್ಲೆಯಾ – ಹೆಣ್ಣಿಗೆ ತನ್ನ ಅರ್ಧ ದೇಹವನ್ನೇ ಹಂಚಿಕೊಟ್ಟ ಮಹಾನುಭಾವ ಅವನು; ಹೆಣ್ಣನ್ನು ತಲೆಯ ಮೇಲೇರಿಸಿಕೊಂಡು ಮೆರೆಸಿದ ಮಹಾಪುರುಷ ಅವನು. ಹೆಣ್ಣಿನ ಸ್ಥಾನ ಯಾವಾಗಲೂ ಪುರುಷನ ತಲೆಯಮೇಲೇ ವಿನಾ ಕಾಲಿನ ಬಳಿಯಲ್ಲ."

ಗಂಗಮ್ಮನಿಗೆ ಕಣ್ಣುಗತ್ತಲೆ ಕವಿದು ಬಂದಿತು. ಯಾವದೋ ಭವ್ಯ ಪ್ರಕಾಶವನ್ನು ನೋಡುತ್ತಿರುವಂತೆ ಅವಳಿಗೆ ಭಾಸವಾಯಿತು. ಕಣ್ಣುತುಂಬ ನೀರು ತುಂಬಿತ್ತು. ಕೈಜೋಡಿಸಿಕೊಂಡು ವಿನಯದಿಂದ

"ನನ್ನನ್ನು ಆಶೀರ್ವಾದಮಾಡಿ." ಎಂದಳು.

"ಮನಃಪೂರ್ವಕವಾಗಿ ಆಶೀರ್ವಾದ ಮಾಡುತ್ತೇನೆ. ಜತೆಗೊಂದು ಮಾತೂ ಹೇಳುತ್ತೇನೆ. ಮುತ್ತಮ್ಮನ ಮನೆಯ ಜೀವನ ಬಿಟ್ಟುಬಿಡು. ಬಡತನ, ಸಿರಿತನ ಲೆಕ್ಕಿಸದೆ ಯಾರಾದರೊಬ್ಬರನ್ನು ನಂಬಿಕೊಂಡು ಬಾಳು ಸಾಗಿಸು – ದೇವರು ನಿನಗೆ ಒಳ್ಳೆಯದನ್ನು ಮಾಡಲಿ."

ಶ್ರೀನಾಥನ ಲಕ್ಷ್ಯ ನಾಗರಾಜನ ಕಡೆ ಸಾಗಿತು. ಅವನನ್ನು ಹತ್ತಿರ ಕರೆದು

"ನಾಗರಾಜ. ನನ್ನ ಬಗ್ಗೆ ವಿಶೇಷ ವಿಶ್ವಾಸ ತೋರಿಸಿ ಉಪಕಾರ ಮಾಡಿರುವೆ. ನಾನಿಂದು ನಿನಗೆ ಪ್ರತ್ಯುಪಕಾರ ಮಾಡುವ ಸ್ಥಿತಿಯಲ್ಲಿಲ್ಲ. ಆದರೆ ನಿನಗೆ ಒಂದು ಬುದ್ಧಿಯ ಮಾತು ಹೇಳದೆ ಹೋದರೆ ನಿನ್ನ ವಿಶ್ವಾಸಕ್ಕೆ ನಾನು ಅಪಚಾರಮಾಡಿದಂತಾಗುತ್ತದೆ. ಹೇಳೆಂದರೆ ಹೇಳುತ್ತೇನೆ."

"ಹೇಳಿ ಸಾರ್."

"ನೀನೂ ಒಂದು ಅರಿಯದ ಹೆಣ್ಣನ್ನು ಲಗ್ನವಾದೆ. ವಿನಾಕಾರಣ ಅವಳನ್ನು ಬಿಟ್ಟು ಬಂದು ಮುತ್ತಮ್ಮನ ಮನೆ ಸೇರಿದೆ. ಗೌರವವಾಗಿ ಜೀವನ ಸಾಗಿಸುವ ಹಲವು ದಾರಿಗಳಿದ್ದರೂ ಅವುಗಳನ್ನು ದುರ್ಲಕ್ಷಿಸಿ ಹೆಣ್ಣಿನ ವ್ಯಾಪಾರಕ್ಕೆ ನಿಂತೆ. ಆಗಿಹೋದುದಕ್ಕೆ ನಾನು ಆಕ್ಷೇಪಿಸುತ್ತಿಲ್ಲ. ಹೇಗೋ ನಿನ್ನ ಜೀವನ ಸಾಗುತ್ತಿದೆ – ಇದರಲ್ಲಿ ನಿನಗೆ ಸುಖವೂ ಇರಬಹುದು. ಆದರೆ ನಿನ್ನ ಕೈಹಿಡಿದ ಆ ಹುಡುಗಿಯ ಗತಿಯೇನು ಎಂದು ನೀನು ಆಲೋಚಿಸಬೇಕು. ತಾತ್ಸಾರಮಾಡಿ ನೀನೇ ಅವಳನ್ನು ತಪ್ಪುದಾರಿಗೆಳೆಯುತ್ತಿಲ್ಲವೇ? ನೀನು ನಿನ್ನ ಹೆಂಡತಿಯನ್ನು ಕೂಡಿಕೊಂಡು ಮರ್ಯಾದೆಯಾಗಿ ಜೀವನ ಸಾಗಿಸಿದರೆ ನನಗೆ ಬಹಳ ಸಂತೋಷವಾಗುತ್ತದೆ. ಈ ವಿಷಯ ಸ್ವಲ್ಪ ಯೋಚಿಸುವೆಯಾ ನಾಗರಾಜ?"

"ಖಂಡಿತ ಯೋಚಿಸುತ್ತೇನೆ ಸಾರ್."

ನಾಗರಾಜ, ಗಂಗಮ್ಮ ಹೊರಟು ನಿಂತರು. ಶ್ರೀನಾಥನು ಅವರನ್ನು ಬೀಳ್ಕೊಡಲು ಎದ್ದು ನಿಂತ.

"ರೈಲಿಗೆ ನೀವು ಹೋಗುವುದರೊಳಗಾಗಿ ಬಂದು ನೋಡುತ್ತೇನೆ ಸಾರ್."

"ಹಾಗೇ ಮಾಡು."

ಗಂಗಮ್ಮ ಶ್ರೀನಾಥನ ಪಾದಕ್ಕೆ ಮಣಿದಳು.

ಮಾರನೆಯ ಬೆಳಿಗ್ಗೆ ಶರ್ಮ, ಡಾಕ್ಟರು ಶ್ರೀನಾಥನನ್ನು ನೋಡಲು ಬಂದರು. ಶ್ರೀನಾಥ ನಗುತ್ತ

"ತಪ್ಪಿಸಿಕೊಂಡಿಲ್ಲಪ್ಪಾ. ಇಲ್ಲಿಯೇ ಇದ್ದೇನೆ"

ಎಂದು ಹೇಳಿದ.

ಪ್ರಯಾಣದ ವಿವರ ತಿಳಿಸಿ

"ನಿನಗೇನಾದರೂ ಬಟ್ಟೆ ಬರೆ ಬೇಕಾಗಿತ್ತೇ ಶ್ರೀನಾಥ?"

ಎಂದು ಶರ್ಮ ಕೇಳಿದ.

"ಏನೂ ಬೇಡಪ್ಪ. ಎಲ್ಲಾ ಇವೆ. ಶರ್ಮಾ – ಒಂದು ಕೆಲಸ ನೀನು ಮಾಡಬೇಕು."

"ಹೇಳು. ಅಗತ್ಯವಾಗಿ ಮಾಡುತ್ತೇನೆ."

"ನಾಗರಾಜನ ಮಾವನವರನ್ನು ಬಲ್ಲೆಯಾ?"

"ಬಲ್ಲೆ. ಆತ ರೆವಿನ್ಯೂ ಸೆಕ್ರೆಟೇರಿಯಟ್‌ನಲ್ಲಿ ಗುಮಾಸ್ತ. ಆತನಿಂದ ಏನು ಕೆಲಸವಾಗಬೇಕಾಗಿದೆ?"

"ನನಗೆ ಏನೂ ಆಗಬೇಕಾಗಿಲ್ಲ. ನಿನ್ನೆ ನಾಗರಾಜನ ಜತೆ ಮಾತನಾಡಿದ್ದೇನೆ. ಅವನ ಮಾವನವರೂ ಸ್ವಲ್ಪ ಪ್ರಯತ್ನಿಸಿದರೆ ನಾಗರಾಜನ ಜೀವನ ನೇರವಾಗಬಹುದು. ಹಿಂದೆ ಆದುದನ್ನೆಲ್ಲಾ ಮರೆತು ನಾಗರಾಜನನ್ನು ಮನೆಗೆ ಕರೆದುಕೊಂಡು ಹೋಗಿ ಎಂದು ಹೇಳು. ಮುರಿದುಹೋಗಿರುವ ನಾಗರಾಜನ ದಾಂಪತ್ಯ ಕೂಡಿಸುವುದು ನಿನ್ನ ಭಾರ."

"ಪ್ರಯತ್ನಿಸಿ ನೋಡುತ್ತೇನೆ."

ಸಂಜೆಗೆ ನಾಗರಾಜನೂ ಶ್ರೀನಾಥನ ರೂಮಿಗೆ ಬಂದ. ಶ್ರೀನಾಥ ಹೊಟೇಲ್ ಮಾಲಿಕನ ಕೈಯಲ್ಲಿ ರೂಮಿನ ಬೀಗದ ಕೈ ಇತ್ತ. ಶರ್ಮ,

ಡಾಕ್ಟರು ಬಂದು ಅವನನ್ನು ಸ್ಟೇಷನ್ನಿಗೆ ಕರೆದುಕೊಂಡು ಹೋಗಿ ರೈಲು ಹತ್ತಿಸಿದರು. ರೈಲು ಹೊರಡುವ ಮುನ್ನ ನಾಗರಾಜ ಕೇಳಿದ

"ಕಾಗದ ಬರೆದರೆ ಉತ್ತರ ಕೊಡುವಿರಾ ಸಾರ್?"

"ಖಂಡಿತವಾಗಿ ಉತ್ತರ ಬರೆಯುತ್ತೇನೆ ನಾಗರಾಜ"

ಎಂದು ಶ್ರೀನಾಥ ಹೇಳಿದ.

## ೧೧

ಗವಿಯಪ್ಪನಿಗೂ ಶ್ರೀನಾಥನಿಗೂ ವಾದವಿವಾದ ನಡೆದು ಶ್ರೀನಾಥ ರೇಗಿ ಹೋಗಿದ್ದರೂ, ಅವನು ಪುನಃ ಬಂದೇ ಬರುವನು ಎಂಬ ಧೈರ್ಯ ಕಮಲನಲ್ಲಿ ಮನೆ ಮಾಡಿತ್ತು. ಬೆಳಿಗ್ಗೆಯಿಂದ ಸಂಜೆಯವರೆಗೂ ಅವನಿಗೆ ಕಾಯುವಳು. ಬಾಗಿಲು ಶಬ್ದವಾದರೆ ತಾನೇ ಧಡಕ್ಕನೆ ಬಾಗಿಲು ತೆಗೆದು ನೋಡುವಳು. ಒಂದು ದಿನ ಕಳೆಯಿತು – ಎರಡನೆಯ ದಿನ ಕಳೆಯಿತು – ಮೂರನೆಯ ದಿನ ಕಳೆಯಿತು. ಶ್ರೀನಾಥ ಅತ್ತ ಸುಳಿಯಲಿಲ್ಲ. 'ಶ್ರೀನಾಥ ಇನ್ನು ಬರುವುದಿಲ್ಲವೇನೋ' ಎಂಬ ಅನುಮಾನ ಕಮಲಳ ಮನಸ್ಸಿನಲ್ಲಿ ಸುಳಿಯಿತು. ಮತ್ತೆ ಒಂದೆರಡು ದಿನ ಅವನ ಆಗಮನವನ್ನು ನಿರೀಕ್ಷಿಸಿದಳು.

ಕಮಲನ ಮನಸ್ಸಿನಲ್ಲಿ ಆಗುತ್ತಿದ್ದ ಹೊಯ್ದಾಟವನ್ನು ಭಾಗ್ಯಮ್ಮ ಚೆನ್ನಾಗಿ ಅರಿತಿದ್ದಳು. ಸಮಯ ದೊರೆತಾಗ ಒಂದು ಕುಟುಕು ಮುಳ್ಳು ಇಡದೆ ಬಿಡುತ್ತಿರಲಿಲ್ಲ. ಐದನೆಯ ದಿನವೂ ಕಾದುಕಾದು ನಿರಾಶಳಾಗಿ ಕಮಲ 'ಇವತ್ತೂ ಬರಲಿಲ್ಲ' ಎಂದು ನಿಟ್ಟುಸಿರ್ಗರೆದಳು.

"ಬರದಿದ್ದರೆ ಬಿಡಲಿ. ಅನಿಷ್ಟ ಕಳೆದು ಹೋಯಿತು"

ಎಂದು ಭಾಗಮ್ಮ ತನ್ನ ಮನಸ್ಸಿನಲ್ಲಿದ್ದುದನ್ನಾಡಿದಳು. ಒಳಗೇ ಕವರುತ್ತಿದ್ದ ಅಗ್ನಿ ಆಸ್ಫೋಟನವಾಯಿತು.

"ಅವರೇಕೆ ಅನಿಷ್ಟವಾದಾರು – ನೀನು ಅನಿಷ್ಟ – ಮಹಾ ಅನಿಷ್ಟ"

"ಯಾರನ್ನೇ ಅನಿಷ್ಟವೆನ್ನುತ್ತೀ?"

"ಯಾರನ್ನೂ ಅಲ್ಲ. ನನ್ನ ತಾಯಿ ಅನಿಸಿಕೊಳ್ಳುವ ಮಹಾ ಮಾರಿಯನ್ನು."

ಭಾಗ್ಯಮ್ಮನಿಗೆ ಸಹನೆ ಉಳಿಯಲಿಲ್ಲ. ಮೂಲೆಯಲ್ಲಿ ಒರಗಿಸಿದ್ದ ಮಡಿಯ ಕೋಲು ತೆಗೆದುಕೊಂಡು ಮಗಳನ್ನು ಚೆನ್ನಾಗಿ ಥಳಿಸಿದಳು. ತಾಯಿಯ ಮೇಲೆ ತಿರುಗಿಬಿದ್ದು, ಅವಳನ್ನು ಸೀಳಿಬಿಡಬೇಕೆನ್ನುವಷ್ಟು ಕಮಲನಿಗೆ ಕೋಪ ಬಂತು. ಆದರೆ ತಾಯಿಯ ಮೇಲೆ ಕೈಮಾಡಲು ಧೈರ್ಯ ವಾಗಲಿಲ್ಲ.

ತಾಯಿ, ಮಗಳ ಕದನ ನಡೆದಿದ್ದಾಗ ಗವಿಯಪ್ಪ ಒಳಗೆ ಬಂದ. ಇಬ್ಬರಿಗೂ ಬುದ್ಧಿ ಹೇಳಿ ವ್ಯಾಜ್ಯ ಉಪಶಮನ ಮಾಡಿದ.

ತಾತ್ಕಾಲಿಕವಾಗಿ ವ್ಯಾಜ್ಯ ಕೊನೆಗಂಡರೂ ಕಮಲ ತಾಯಿಯ ಕಟು ಮಾತನ್ನು ಮರೆಯಲಿಲ್ಲ. ಅವಳ ಮನಸ್ಸಿನಿಂದ ಶ್ರೀನಾಥನ ನೆನಪೂ ಮರೆಯಾಗಲಿಲ್ಲ. ಗವಿಯಪ್ಪ ಬಂದಾಗ ಮನೆಯಲ್ಲಿರುತ್ತಿದ್ದಳು. ಉಳಿದ ವೇಳೆಯನ್ನು ಪಾಪಕ್ಕನ ಮನೆಯಲ್ಲಿ ಕಳೆಯುವುದಕ್ಕಾರಂಭಿಸಿದಳು.

'ನಾಗರಾಜ ಬರಬಹುದು – ಅವನು ಬಂದರೆ ಹೇಳಿ ಕಳಿಸಬೇಕು' ಎಂದು ಕಮಲ ಯೋಚಿಸಿದಳು. ನಾಗರಾಜನೂ ಅತ್ತ ಸುಳಿದಿರಲಿಲ್ಲ.

'ನಾಗರಾಜ ಮನೆಗೆ ಬರದಿದ್ದರೂ ಥಿಯೇಟರಿಗಾದರೂ ಹೋಗುತ್ತಿರ ಬಹುದು' ಎಂದು ಆಲೋಚಿಸಿ ಗವಿಯಪ್ಪನ ಹತ್ತಿರಲೇ ಪ್ರಸ್ತಾಪಿಸಿದಳು

"ಥಿಯೇಟರಿಗೆ ನಾಗರಾಜ ಈಚೆಗೆ ಬರಲಿಲ್ಲವೇ ?"

"ಬರಲಿಲ್ಲ – ಏಕೆ ?"

"ಸ್ವಲ್ಪ ಕೆಲಸವಿತ್ತು."

"ಏನು ಕೆಲಸ ಅವನ ಹತ್ತಿರ ನಿನಗೆ ?"

"ಇನ್ನೇನೂ ಇಲ್ಲ – ಅನುಮಾನಪಡಬೇಡಿ. ಒಂದು ಗಜ ಬ್ರೊಕೇಡ್ ಬೇಕೆಂದು ಹಣ ಕೊಟ್ಟಿದ್ದೆ. ಅವನಿನ್ನೂ ಬಟ್ಟೆ ತಂದುಕೊಟ್ಟಿಲ್ಲ."

"ಬಂದರೆ ಹೇಳುತ್ತೇನೆ."

ಶ್ರೀನಾಥ ಮದರಾಸಿಗೆ ಪ್ರಯಾಣಮಾಡಿದ ಮಾರನೆಯ ದಿವಸವೇ ನಾಗರಾಜ ಥಿಯೇಟರ್ ಬಳಿಗೆ ಹೋದ. ಕಮಲ ಅವನನ್ನು ನೋಡ ಬೇಕೆಂದಿರುವ ವಿಷಯ ತಿಳಿಸಿ ಗವಿಯಪ್ಪ ಅವನನ್ನು ಮನೆಗೆ ಕಳಿಸಿಕೊಟ್ಟ.

ನಾಗರಾಜನ ಮುಖಕಂಡು ಕಮಲನಿಗೆ ಹೋದ ಜೀವ ಬಂದಂತಾಯಿತು.

" ಎಲ್ಲಿ ಹೋಗಿಬಿಟ್ಟಿದ್ದಿಯೋ ಇಷ್ಟುದಿವಸ ? "

" ನನಗೆ ಯಾವ ದುಡ್ಡು ಕೊಟ್ಟಿದ್ದೆ ಕಮಲಾ ? "

" ದುಡ್ಡೂ ಇಲ್ಲ – ದುಗ್ಗಾಣಿಯೂ ಇಲ್ಲ. ನಿನ್ನ ನೋಡಬೇಕಾಗಿತ್ತು. ಅವರ ಹತ್ತಿರ ಇನ್ನೇನು ಹೇಳಲಿ ? "

" ಏನು ಅಂಥ ರಾಜಕಾರ್ಯ ?"

" ಅವರನ್ನು ಈಚೆಗೆ ಕಂಡಿದ್ದೆಯಾ ?"

" ಕಂಡಿದ್ದೆ."

" ಹೇಗಿದ್ದಾರೆ ?"

" ಚೆನ್ನಾಗಿದ್ದಾರೆ."

" ನನ್ನನ್ನು ಜ್ಞಾಪಿಸಿಕೊಂಡರೇ ?"

" ನಿನ್ನ ಹೆಸರೇ ಎತ್ತಲಿಲ್ಲ."

ಕಮಲಾ ಅದನ್ನು ಕೇಳಿ ಭೂಮಿಗಿಳಿದು ಹೋದಳು.

" ನನಗೆ ಒಂದು ಕೆಲಸ ಮಾಡಿಕೊಡುತ್ತೀಯಾ ನಾಗರಾಜ ? "

" ಏನು ಕೆಲಸ ? ಅವರನ್ನು ಇಲ್ಲಿ ಕರೆದುಕೊಂಡು ಬರುವುದುತಾನೇ !"

" ಹೂ ! ಒಂದು ಸಲ ಕರೆದುಕೊಂಡು ಬರಬೇಕು."

" ಅವರು ರೂಮು ಬಿಟ್ಟಿದ್ದಾರೆ. ಎಲ್ಲಿದ್ದಾರೋ ಗೊತ್ತಿಲ್ಲ."

" ನೀನು ಪ್ರಯತ್ನಮಾಡಿದರೆ ಸಿಗುವುದಿಲ್ಲವೇ ?"

" ಕಮಲಾ, ಇನ್ನೇಕೆ ಅವರ ಚಿಂತೆ ಮಾಡುತ್ತೀ ? ಅವರು ಈ ಊರು ಬಿಟ್ಟು ಹೊರಟುಹೋದರು."

" ಎಲ್ಲಿಗೆ ?"

" ಬೊಂಬಾಯಿಗೋ ಕಲ್ಕತ್ತೆಗೋ ಸರಿಯಾಗಿ ಗೊತ್ತಿಲ್ಲ."

" ನಿನಗೆ ಯಾರು ಹೇಳಿದರು ? "

" ಅವರ ಸ್ನೇಹಿತರು ಶರ್ಮಾ."

" ಯಾವಾಗ ಹಿಂದಿರುಗುವರಂತೆ ? "

" ಪುನಃ ಬೆಂಗಳೂರು ಮುಖ ನೋಡುವುದಿಲ್ಲ ಎಂದು ಶಪಥಮಾಡಿಯೇ ಊರು ಬಿಟ್ಟರಂತೆ."

"ಇದು ನಿಜವೇ ನಾಗರಾಜ ?"

"ನಿನ್ನ ಪತ್ರಿರ ಸುಳ್ಳು ಏಕೆ ಹೇಳಲಮ್ಮ."

"ಅವರ ಅಡ್ರೆಸ್ ತಿಳಿದುಕೊಳ್ಳಲು ಸಾಧ್ಯವಿಲ್ಲವೇ ?"

"ಪ್ರಯತ್ನಿಸಿ ನೋಡುತ್ತೇನೆ."

"ಹೇಗಾದರೂ ಮಾಡಿ ನೀನು ನನಗೆ ಅಡ್ರೆಸ್ ತಂದುಕೊಡಲೇಬೇಕು."

ದಾಕ್ಷಿಣ್ಯಕ್ಕೆ 'ಆಗಲಿ' ಎಂದು ನಾಗರಾಜ ಉತ್ತರವಿತ್ತ. ಅಡ್ರೆಸ್ ಸಿಕ್ಕುತ್ತದೆಂಬ ಪೂರ್ಣ ನಂಬಿಕೆಯೂ ಕಮಲನಿಗಿರಲಿಲ್ಲ. ಶ್ರೀನಾಥ ಊರು ಬಿಟ್ಟುಹೋದ ಸುದ್ದಿ ಕೇಳಿ ಕಮಲ ತಳಮಳಕ್ಕೀಡಾದಳು. 'ಕೊನೆಗೊ ಮ್ಮೆಯೂ ಬರದೆ ಹೊರಟು ಹೋಗಿ ಬಿಟ್ಟರಲ್ಲಾ' ಎಂದು ದುಃಖಿಸಿದಳು. 'ಹೋದರೆ ಹೋದರು. ನನಗೇನು ?' ಎಂದು ಮನಸ್ಸಿಗೆ ಸಮಾಧಾನ ತಂದುಕೊಳ್ಳಲೆತ್ನಿಸಿದಳು. ಆ ಸಮಾಧಾನ ಹುಣ್ಣಿನ ಮೇಲೆ ಬರೆಯೆಳೆ ದಂತಾಯಿತು.

ಕಮಲನ ಮನಃಶಾಂತಿ ನುಚ್ಚುನೂರಾಯಿತು. ಅವಳನ್ನು ಮಾತನಾಡಿ ಸುವುದಕ್ಕೇ ಭಾಗ್ಯಮ್ಮ ಅಂಜುತ್ತಿದ್ದಳು.

ಕಮಲನ ಮನಃಸ್ಥಿತಿಯ ಬಿಸಿ ಗವಿಯಪ್ಪನನ್ನು ಮುಟ್ಟದೆ ಇರಲಿಲ್ಲ. ವಿನಾಕಾರಣ ಅವನ ಮೇಲೆ ಕೋಪಮಾಡಿಕೊಳ್ಳುತ್ತಿದ್ದಳು. ಕಾರಣವನ್ನವನು ಬಿಡಿಸಿ ಕೇಳಿದರೆ ಯಾವದೋ ಒಡವೆ ಬೇಕೆನ್ನುತ್ತಿದ್ದಳು. 'ಗವಿಯಪ್ಪ - ಅವನ ಹಣ ಮಧ್ಯೆ ಬಂದಲ್ಲವೇ ತನಗೂ ಶ್ರೀನಾಥನಿಗೂ ವೈಮನಸ್ಯ ಹುಟ್ಟಿದ್ದು' ಎಂದು ತರ್ಕಮಾಡಿಕೊಂಡ ಕಮಲ ಗವಿಯಪ್ಪನ ಹಣವನ್ನು ನಿರ್ದಾಕ್ಷಿಣ್ಯವಾಗಿ ಹೀರುವುದಕ್ಕಾರಂಭಿಸಿದಳು. ಅಂಗಡಿಗೆ ಹೋಗಿ ಪ್ರೀತಿ ಯಿಂದ ಒಂದು ಸೀರೆ ತರುವಳು. ಅದನ್ನು ಒಂದು ಸಲ ಉಟ್ಟು, ಬೇಸರ ದಿಂದ ಪಾಪಕ್ಕನಿಗೋ, ಮನೆಯಮ್ಮನಿಗೋ ಕೊಟ್ಟುಬಿಡುತ್ತಿದ್ದಳು. ಈ 'ದಂಧರ ಹಾಳು' ಸಂಸಾರ ಶಾಶ್ವತವಾಗಿ ಉಳಿಯುವುದಿಲ್ಲವೆಂದು ಭಾಗ್ಯಮ್ಮ ನಿರ್ಧರಿಸಿಕೊಂಡಳು.

ಕಮಲ, ಭಾಗ್ಯಮ್ಮನಷ್ಟೇ ಕುಡಿಯುವುದರಲ್ಲಿ ತಿನ್ನುವುದರಲ್ಲಿ ನಿಸ್ಸೀಮ ಳಾಗಿದ್ದಳು. ದಿನವೂ ಮನೆಯಲ್ಲಿ ಮಾಂಸದ ಅಡಿಗೆಯಾಗಲೇ ಬೇಕು. ಅದರ ಜತೆಗೆ ಬ್ರ್ಯಾಂದಿಯೋ ವಿಸ್ಕಿಯೋ ಇರಲೇ ಬೇಕು. ಬ್ರ್ಯಾಂದಿ

ಬಾಟಲು ಕಳಿಸಲು ನಿಸ್ಸಂಕೋಚವಾಗಿ ಸಿದ್ದನ ಕೈಯಲ್ಲಿ ಗವಿಯಪ್ಪನಿಗೆ ಹೇಳಿ ಕಳಿಸುತ್ತಿದ್ದಳು.

ತಾನು ಸಾಕಿರುವುದು ಜೂಜಿನ ಕುದುರೆ ಎಂದು ಗವಿಯಪ್ಪನಿಗೆ ತಿಳಿಯಲು ಬಹಳ ದಿವಸ ಬೇಕಾಗಲಿಲ್ಲ. ಅವನು ಹಣ ಕೊಡದ ದಿವಸ–ಬ್ರ್ಯಾಂದಿ ಬಾಟಲ್ ಕಳಿಸದ ದಿನ ಹಣಾಹಣಿ ವ್ಯಾಜ್ಯವಾಗುತ್ತಿತ್ತು. ಗವಿಯಪ್ಪನ ಮೂತಿ ಮುಖ ನೋಡದೆ ಹಂಗಿಸಿ, ಹೀಯಾಳಿಸಿ, ಛೀಮಾರಿ ಮಾಡುತ್ತಿದ್ದಳು.

ಗವಿಯಪ್ಪನಿಗೂ ಬೇಸರವಾಗುತ್ತಿತ್ತು. 'ಎಲ್ಲಿಯ ಹಾಳು ಸಹವಾಸ. ಇದರಿಂದ ದೂರವಾಗುವುದೇ ಲೇಸು' ಎಂದುಕೊಳ್ಳುತ್ತಿದ್ದ. ಆದರೆ ಕಮಲನ ಮುಖ ಕಂಡ ಕೂಡಲೆ ಬೇಸರ ಹೋಗಿಬಿಡುತ್ತಿತ್ತು. ಮೋಹ ಮುಸುಕುತ್ತಿತ್ತು.

ಪಾಪಕ್ಕನ ಸ್ನೇಹ ದಿನದಿನಕ್ಕೆ ಬೆಳದುದನ್ನು ಕಂಡು ಭಾಗ್ಯಮ್ಮ ಗುರುಗುಟ್ಟಿದಳು.

"ದಿನವೂ ಹೋಗಿ ಅವಳ ಮನೆಯಲ್ಲಿ ಗಂಟೆಗಟ್ಟಳೆ ಕೂತಿದ್ದು ಬರುವುದು ನ್ಯಾಯವಲ್ಲ ಕಮಲ. ನೋಡಿದವರು ಏನನ್ನುತ್ತಾರೆ? ಅವರು ಏನಂದುಕೊಳ್ಳುತ್ತಾರೆ?"

"ಏನು ಬೇಕಾದರೂ ಅಂದುಕೊಳ್ಳಲಿ. ನನ್ನ ಅಡ್ಡಿಪಡಿಸುವುದಕ್ಕೆ ಅವರು ಯಾರು?"

"ಯಾರೇ! ನಿನ್ನ ಯಜಮಾನರು. ನಿನಗೆ ಹೊಟ್ಟೆಗೆ ಬಟ್ಟೆಗೆ ಕೊಡುತ್ತಿರುವ ಧಣಿ–ಬಿರಿಯಾನಿಗೆ ಬ್ರ್ಯಾಂದಿಗೆ ಅನುಕೂಲ ಮಾಡಿಕೊಟ್ಟಿರುವ ಪುಣ್ಯಾತ್ಮ."

"ನೀನು ಹಾಗೆಲ್ಲಾ ಭಾವಿಸಿಕೊಳ್ಳಬಹುದು. ನಿನ್ನ ಭಾವನೆ ನನ್ನ ತಲೆಯಲ್ಲಿ ತುಂಬಲು ಪ್ರಯತ್ನಪಡಬೇಡ."

"ನಿನಗೆ ತಲೆಯಿದ್ದರಲ್ಲವೇ ತುಂಬುವುದು. ನೀನೊಂದು ಮೃಗ."

"ಹೌದು. ಮೃಗದ ಹೊಟ್ಟೆಯಲ್ಲಿ ಮೃಗವಲ್ಲದೆ ಮನುಷ್ಯ ಹುಟ್ಟುತ್ತಾನೆಯೇ?"

ಎಂದು ತಾಯಿಯ ಎದುರಿಗೇ ನೇರವಾಗಿ ಪಾಪಕ್ಕನ ಮನೆಗೆ ನಡೆದು ಬಿಡುತ್ತಿದ್ದಳು.

ಕಮಲನ ಬುದ್ಧಿಗೇನೋ ಬಡಿದಿದೆ ಎಂದು ಭಾಗ್ಯಮ್ಮ ಭಾವಿಸಿ ಕಂಡ ಕಂಡ ದೇವರಿಗೆ ಹರಕೆ ಹೊರಲಾರಂಭಿಸಿದಳು.

ಕಮಲನ ಬುದ್ಧಿ ಸ್ಥಿರವಾಗಿಲ್ಲವೆಂದು ಪಾಪಕ್ಕನೂ ತಿಳಿದಿದ್ದಳು. ಇದೇ ಅವಕಾಶವನ್ನುಪಯೋಗಿಸಿಕೊಂಡು ತನ್ನ ಬಡತನ ನೀಗಿಕೊಳ್ಳಲು ಪಾಪಕ್ಕ ಹಿಂಜರಿಯಲಿಲ್ಲ. ಅವಳ ಮನಸ್ಸು ಮೆಚ್ಚಿಸಲು ಕಮಲ ಅವಳ ಮನೆಗೆ ಬರುತ್ತಿದ್ದ ಅತಿಥಿಗಳನ್ನಾದರಿಸಬೇಕಾಗುತ್ತಿತ್ತು.

ಸಿದ್ದ ಮನೆಯಲ್ಲಿ ನಡೆಯುತ್ತಿದ್ದುದನ್ನೆಲ್ಲಾ ಗವಿಯಪ್ಪನಿಗೆ ಕಾಲ ಕಾಲಕ್ಕೆ ಮುಟ್ಟಿಸುತ್ತಿದ್ದ. ಕಮಲ ಪಾಪಕ್ಕನ ಮನೆಯಲ್ಲಿ ನಡೆಸುತ್ತಿದ್ದ ವ್ಯವಹಾರವನ್ನೂ ಧಣಿಯ ಕಿವಿಗೆ ಮುಟ್ಟಿಸಿದ್ದ. ಅವಳು ಹೊತ್ತುಗಳೆಯಲು ಪಾಪಕ್ಕನ ಮನೆಗೆ ಹೋಗಿ ಬರುತ್ತಾಳೆಂಬ ಭಾವನೆ ಗವಿಯಪ್ಪನ ಮನಸ್ಸಿನಿಂದ ಬೇಗ ಅಳಿಸಿ ಹೋಗಲಿಲ್ಲ. ಈ ಚಿದಂಬರ ರಹಸ್ಯವನ್ನು ಭೇದಿಸಬೇಕೆಂದು ನಿಶ್ಚಯಮಾಡಿದ.

ಒಂದು ದಿನ ಸಿದ್ದನನ್ನು ಪಾಪಕ್ಕನ ಮನೆಯ ಮೇಲೆ ಪಹರೆ ಹಾಕಿದ. 'ಕಮಲ ಒಳಗೆ ಹೋದ ಮೇಲೆ, ಇನ್ನು ಯಾರಾದರೂ ಗಂಡಸರು ಹೋದುದನ್ನು ಕಂಡರೆ ಕೂಡಲೆ ಬಂದು ತಿಳಿಸು' ಎಂದು ಹೇಳಿದ್ದ.

ಮಧ್ಯಾಹ್ನಾನಂತರ ನಾಲ್ಕುಗಂಟೆ ಸಮಯ. ಗವಿಯಪ್ಪ ಮನೆಯಿಂದ ಥಿಯೇಟರಿಗೆ ಬಂದು ಕುಳಿತಿದ್ದಾನೆ. ಸಿದ್ದ ಓಡಿ ಬಂದ. ಗವಿಯಪ್ಪನ ಕಿವಿಯಲ್ಲಿ ಪಿಸುಗುಟ್ಟಿದ. ಗವಿಯಪ್ಪ ತನ್ನ ವಾಕಿಂಗ್ ಸ್ಟಿಕ್ ಹಿಡಿದು ನೇರವಾಗಿ ಪಾಪಕ್ಕನ ಮನೆಗೆ ಹೋದ. ಕಮಲ ಸಿಕ್ಕಿಬಿದ್ದಳು. ಗವಿಯಪ್ಪ ತನ್ನ ಬೆತ್ತದಿಂದ ಕಮಲನನ್ನು, ಪಾಪಕ್ಕನನ್ನು, ಹೊಸಬನನ್ನು ಚೆನ್ನಾಗಿ ಥಳಿಸಿ, ಕಮಲನನ್ನು ದರದರನೆ ಮನೆಗೆ ಎಳೆದುಕೊಂಡು ಬಂದು ಕೆಡಹಿದ.

ಕೋಪ, ದುಃಖಗಳಿಂದ ಗವಿಯಪ್ಪ ಆಪಾದಮಸ್ತಕ ಬೆವರುತ್ತಿದ್ದ. ಅವನ ಕಣ್ಣುಗಳಿಂದ ಕಿಡಿಗಳುದುರುತ್ತಿದ್ದವು. ಬಾಯಲ್ಲಿ ತೊದಲು ಮಾತು. ಕೈಕಾಲುಗಳು ಥರಥರನೆ ನಡುಗುತ್ತಿದ್ದವು.

ಮೈ ಬಾಸುಂಡೆ ಬರುವವರೆಗೆ ಏಟು ಬಿದ್ದಿದ್ದರೂ ಕಮಲ 'ಕಮಕ್ ಕಿಮಕ್' ಎಂದಿರಲಿಲ್ಲ. ಅವಳ ಕಣ್ಣಲ್ಲಿ ನೀರು ಬಂದಿರಲಿಲ್ಲ. ಮುಖ

ಮಾತ್ರ ಉಗ್ರವಾಗಿತ್ತು. ವಿಶಾಲವಾದ ಅವಳ ಕಣ್ಣುಗಳು ಕಾದ ಕಬ್ಬಿಣದಂತಾಗಿದ್ದವು.

"ಭಾಗ್ಯಮ್ಮ – ನಿನ್ನ ಮಗಳು ಪಾಪಕ್ಕನ ಮನೆಯಲ್ಲಿ ಏನು ಮಾಡುತ್ತಿದ್ದಳು ವಿಚಾರಿಸು"

"ನಾನು ವಿಚಾರಿಸಿ ಏನಪ್ಪಾ ಪ್ರಯೋಜನ. ಅವಳು ನನ್ನ ಮಾತು ಕೇಳಿದರೆ ತಾನೆ ನಾನು ವಿಚಾರಿಸುವುದು. ಹೀನ ಮುಂಡೇದು – ತಿಪ್ಪೆಯ ಮೇಲೆ ಹುಟ್ಟಿತು, ತಿಪ್ಪೆಯ ಮೇಲೆ ಹೊರಳಾಡುತ್ತದೆ."

"ನೀನೇನು ಸುಪ್ಪತ್ತಿಗೆ ಮೇಲೆ ಹುಟ್ಟಿದೆಯೋ ?"

ಎಂದು ಕಮಲ ಕೇಳಿದಳು.

"ಮುಚ್ಚೇಬಾಯಿ, ತೊಣ್ಣೂರ ರಾಕ್ಷಸಿ. ನಿನ್ನ ಕಣ್ಣಿಂಗಿ ಕಪಾಳ ಸಿಡಿಯ."

"ಸ್ವಂತ ಮಗಳ ಗಂಡನನ್ನೇ ಮಗ್ಗುಲಿಗೆ ಕರೆದ ಮಹಾ ಪತಿವ್ರತೆ ಕಣೇ ನೀನು"

ಎಂದಳು. ಭಾಗ್ಯಮ್ಮ ಕೋಪ ಸಹಿಸಲಾಗದೆ ಕೈಗೆ ಸಮೀಪವಾಗಿದ್ದ ಒಂದು ತಟ್ಟೆಯನ್ನೆತ್ತಿಕೊಂಡು ಕಮಲನ ಕಡೆ ಬೀಸಿದಳು. ತಟ್ಟೆ ಹಣೆಗೆ ಬಡಿದು, ರಕ್ತ ಕಾಣಿಸಿತು. ಕಮಲ ಸೆರಗಿನ ತುದಿಯಲ್ಲಿ ರಕ್ತ ಒರಸಿಕೊಂಡು

"ನೀನೂ ಅವರೂ ನನ್ನನ್ನು ಕೊಲ್ಲಲು ನಿಶ್ಚಯಿಸಿದ್ದೀರಿ. ಕೊಂದು ಬಿಡಿ. ನಾನು ಸತ್ತ ಮೇಲೆ ನೀನು ಬೀದಿ ತಿರುಪೇಗೆ ಹೋಗುವೆಯಂತೆ."

"ಹಾಳು ಮಾತು ಸಾಕುಮಾಡು ಕಮಲಾ"

ಎಂದು ಗವಿಯಪ್ಪ ಗದರಿಸಿದ.

"ನನ್ನ ಹೊಡೆಯುವುದಕ್ಕೆ ನೀವು ಯಾರ್ರೀ ?"

"ಯಾರು ನೀನೇ ಹೇಳು."

"ಯಾರೋ ನನಗೆ ಗೊತ್ತಿಲ್ಲ. ನನ್ನ ಹೊಡೆಯುವ ಹಕ್ಕು ಯಾರಿಗೂ ಇಲ್ಲ. ನಾನು ಎಲ್ಲಿಗೆ ಹೋಗುತ್ತೇನೆ, ಏನು ಮಾಡುತ್ತೇನೆ ಎಂದು ಕೇಳುವ ಅಧಿಕಾರ ನಿಮಗಿಲ್ಲ."

"ನೀನು ಎಲ್ಲಿಗೆ ಬೇಕಾದರೂ ಹೋಗುವೆ – ಏನು ಬೇಕಾದರೂ ಮಾಡುವೆ."

" ಮಾಡುತ್ತೇನೆ. ಅದು ನನ್ನ ಇಷ್ಟ. ಸಂತೋಷವಿದ್ದರೆ ನೀವು ಬರಬಹುದು – ಸಂತೋಷವಿಲ್ಲದಿದ್ದರೆ ಬಿಡಬಹುದು. ನಾನೇನು ನಿಮ್ಮನ್ನು ಬನ್ನಿಯೆಂದು ಕರೆಯಲಿಲ್ಲ. ಯಾರು ನಿಮ್ಮನ್ನು ಕರೆದರೋ ಅವರನ್ನು ಕೇಳಿ – ಅವರನ್ನು ದಂಡಿಸಿ. ಬೇಕಾದರೆ ನೀವು ಕೊಟ್ಟಿರುವ ಒಡವೆ ವಸ್ತ್ರ ತೆಗೆದುಕೊಂಡು ಹೋಗಿ "

ಎಂದು ಕೈ ಬಳೆಗಳನ್ನು ಕಳಚಿ, ಕುತ್ತಿಗೆಯ ಸರ ತೆಗೆದು ಗವಿಯಪ್ಪನ ಕಡೆ ಎಸೆದಳು.

ಗವಿಯಪ್ಪ ಮಾತನಾಡಲಿಲ್ಲ. ಎದ್ದು ನಿಂತು ಸಿದ್ದನನ್ನು ನೋಡಿ ' ಬಾರೋ ' ಎಂದು ಕರೆದು ಹೊರಟುಬಿಟ್ಟ. ಕಮಲ ಅವನಿಗೆ ಕೇಳುವಂತೆ ಧಡಾರನೆ ಬಾಗಿಲು ಹಾಕಿ ರೂಮು ಸೇರಿದಳು. ಶೀಷೆಯಲ್ಲಿ ಬ್ರ್ಯಾಂದಿ ಅರ್ಧದಷ್ಟಿತ್ತು. ಅದನ್ನು ಒಂದು ಗ್ಲಾಸಿಗೆ ಬಗ್ಗಿಸಿ ಕುಡಿದು ಮಲಗಿದಳು.

ಮಾರನೆಯ ದಿನ ಭಾಗ್ಯಮ್ಮ ಶಾಂತಿಸಂಧಾನ ನಡೆಸಲಾರಂಭಿಸಿದಳು. ಕಮಲನ ಬಳೆ, ಸರ ತಂದು ಅವಳಿಗೆ ತೊಡಿಸಿ ಉಪಚರಿಸಿದಳು. ಮಗಳನ್ನೆಬ್ಬಿಸಿ ಕರೆದುಕೊಂಡು ಹೋಗಿ ಸ್ನಾನ ಮಾಡಿಸಿದಳು. ಬಿಸಿ ಬಿಸಿ ಕಾಫಿ ಮಾಡಿ ಕುಡಿಸಿದಳು.

ಮಗಳಿಗೆ ಅಡಿಗೆಯ ಕೆಲಸ ಒಪ್ಪಿಸಿ ಭಾಗ್ಯಮ್ಮ ಹೊರಗೆ ಹೊರಟಳು. ಥಿಯೇಟರಿನಲ್ಲಿ ಗವಿಯಪ್ಪನನ್ನು ಕಂಡು ' ಮನೆಗೆ ಬರಬೇಕು ' ಎಂದು ಅಂಗಲಾಚಿದಳು. ಗವಿಯಪ್ಪ ಅವಳು ಹೇಳಿದುದನ್ನೆಲ್ಲಾ ಕೇಳಿ

" ಭಾಗ್ಯಮ್ಮ.... ಇನ್ನು ನಾನು ಯಾವ ಸುಖಕ್ಕೆ ಬರಬೇಕು ? ಕಮಲ ಬೇರೆ ದಾರಿ ಹಿಡಿದಿದ್ದಾಳೆ. ಅದನ್ನು ಬಿಡಿಸುವುದಕ್ಕೆ ಬ್ರಹ್ಮನಿಂದಲೂ ಸಾಧ್ಯವಿಲ್ಲ. ನನಗೆ ಈ ಪ್ರಾಯಶ್ಚಿತ್ತ ಆದುದು ಒಳ್ಳೆಯದೇ ಆಯಿತು. ಅವಳ ಶ್ರೀನಾಥರಾಯರ ವಿಶ್ವಾಸಕ್ಕೆ ಅಡ್ಡಿಬಂದೆ – ದೊಡ್ಡ ಮನುಷ್ಯ ಆದಿನ ನನ್ನ ಕಾಲು ಹಿಡಿದುಕೊಂಡು ಪ್ರಾರ್ಥಿಸಿದರು – ಅವರ ಪ್ರಾರ್ಥನೆ ನಿರಾಕರಿಸಿದೆ. ಆ ಮನುಷ್ಯನ ಜೀವನವನ್ನೇ ನಾನು ಹಾಳುಮಾಡಿಬಿಟ್ಟೆ. ಈ ಮಹಾಪರಾಧಕ್ಕೆ ದೇವರು ನನಗೆ ತಕ್ಕ ಶಿಕ್ಷೆ ವಿಧಿಸಿದ. ನಿನ್ನ ಮಗಳು ನನಗೆ ಬುದ್ಧಿ ಗಲಿಸಿದಳು – ಅದಕ್ಕೆ ನಾನು ಋಣಿಯಾಗಿದ್ದೇನೆ."

" ಮುಂದೆ ನಮ್ಮ ಗತಿ ? "

“ಅದಕ್ಕೆ ನಾನಲ್ಲ ಹೊಣೆ. ನಿನ್ನ ಮಗಳು ಈಗ ಸರ್ವಶಕ್ತಳಾಗಿದ್ದಾಳೆ. ಅವಳು ನಿಮ್ಮಿಬ್ಬರ ಹೊಣೆಯನ್ನು ಮಾತ್ರವೇ ಅಲ್ಲ – ನನ್ನ ಹೊಣೆಯನ್ನು ಕೂಡ ಹೊರಲು ಸಮರ್ಥಳಾಗಿದ್ದಾಳೆ. ಹೋಗು – ಇನ್ನು ಇಲ್ಲಿಗೆ ಬರಬೇಡ. ನಮ್ಮ ಋಣಾನುಬಂಧ ನಿನ್ನೆಗೆ ಮುಗಿದುಹೋಯಿತು.”

ಎಂದು ಅಲ್ಲಿ ನಿಲ್ಲದೆ ಹೊರಟೇಹೋದ. ಭಾಗ್ಯಮ್ಮ ಕೆಟ್ಟಮುಖ ಹಾಕಿಕೊಂಡು ಮನೆ ಸೇರಿದಳು.

ಕಮಲನ ಬಾಳು ಕಟ್ಟುಹರಿದ ಪಂಜಿನಂತಾಯಿತು. ಪಾಪಕ್ಕನ ಮನೆಯೇ ಶಾಶ್ವತವಾಯಿತು. ಅಲ್ಲಿಗೆ ಬರುತ್ತಿದ್ದವರು ಧಾರಾಳವಾಗಿ ಭಾಗ್ಯಮ್ಮನ ಮನೆಗೂ ಬರುತ್ತಿದ್ದರು. ಬೆಳಿಗ್ಗೆ ಎದ್ದು ಬಾಟಲಿಗೆ ಕೈಹಾಕಿದರೆ, ರಾತ್ರಿ ಮಲಗಿ ನಿದ್ರೆ ಬಂದಾಗಲೇ ವಿಶ್ರಾಂತಿ.

ಕಮಲನ ಜೀವನದ ನಂದಾದೀಪದ ಎಣ್ಣೆ ಬಹುಬೇಗ ಮುಗಿಯುತ್ತ ಬಂತು. ಕೈಯಲ್ಲಿದ್ದ ಹಣ ಮುಗಿದುಹೋಯಿತು. ಮೈಮೇಲಿದ್ದ ಒಡವೆಗಳು ಒಂದೊಂದಾಗಿ ಕರಗುತ್ತ ಬಂದವು. ಕುಡಿತಕ್ಕೆ ಕಾಸಿಲ್ಲದ ದಿನ ಕೈಗೆ ಸಿಕ್ಕದ ಸೀರೆಯನ್ನು ಒತ್ತೆಯಿಡುತ್ತಿದ್ದಳು. ಈ ಮಹಾ ಪ್ರವಾಹದ ಎದುರು ನಿಂತು ಹೋರಾಡಲು ಸಾಧ್ಯವಿಲ್ಲವೆಂದು ಭಾಗ್ಯಮ್ಮನೂ ಪ್ರವಾಹದ ಗತಿಗನುಗುಣವಾಗಿ ತನ್ನ ನೌಕೆ ಸಾಗಿಸಿದಳು.

ಭಾಗ್ಯಮ್ಮನ ಮನೆ ‘ಕದವಿಲ್ಲದ ಮನೆ’ ಎಂದು ಪ್ರಸಿದ್ಧವಾಯಿತು. ‘ಬಂದವರು ಬಂದ ಹಾಗೆ; ಹೋದವರು ಹೋದಹಾಗೆ!’

ಮೂರೇ ತಿಂಗಳಲ್ಲಿ ಭಾಗ್ಯಮ್ಮ, ಕಮಲ ನಿರ್ಗತಿಕರಾದರು. ಹೊತ್ತಿಗೆ ಅಷ್ಟು ಊಟ, ಕುಡಿತಕ್ಕೆ ಒಂದಿಷ್ಟು ಮದ್ಯ ಒದಗಿಸಿದವರು ಅಂದು ಮನೆಯ ಯಜಮಾನರಾಗುತ್ತಿದ್ದರು.

ಒಂದೊಂದು ದಿನ ಅಂಥ ಯಜಮಾನರಿಗೂ ಬರಗಾಲ ಬರುತ್ತಿತ್ತು. ವಿಸ್ಕಿ, ಬ್ರ್ಯಾಂದಿ ಕೊಳ್ಳುವ ಕಾಲ ಮುಗಿದು ಹೋಗಿತ್ತು. ಭಾಗ್ಯಮ್ಮ, ಕಮಲ ಸಾರಾಯಿ, ಹೆಂಡದಲ್ಲಿ ತೃಪ್ತರಾಗಬೇಕಾಗಿತ್ತು.

ಪೋಲೀಸ್ ಸ್ಟೇಷನ್ನಿನ ಮುಖಾವಲೋಕನವೂ ಆಯಿತು.

ಕಮಲನನ್ನು ನೋಡಿದವರು ಯಾರೂ ಅವಳನ್ನು ಗುರುತಿಸುವಂತಿರಲಿಲ್ಲ. ತಲೆ ತಿದಿ ;

ಗಂಟುಗಳು ಬಿದ್ದಿದ್ದವು. ಮುಖ ಬಾತು ಕಾಂತಿಹೀನವಾಗಿದ್ದವು. ಕಣ್ಣುಗಳ ಕೆಳಗೆ ಆಳವಾದ ಕಪ್ಪು ಗುಣಿಗಳು ಕಾಣಿಸಿಕೊಂಡಿದ್ದವು.

ಕಮಲ ಒಮ್ಮೊಮ್ಮೆ ರೂಮಿನಲ್ಲಿ ಒಬ್ಬಳೇ ಕುಳಿತು ಶ್ರೀನಾಥನ ಭಾವಚಿತ್ರವನ್ನು ದಿಟ್ಟಿಸಿ ನೋಡುವಳು. ಅವಳ ಕಣ್ಣಿಂದ ಒಂದೆರಡು ಹನಿಗಳು ಜಾರುತ್ತಿದ್ದವು. ಕೈಗೆ ಕಾಸು ಸಿಕ್ಕಿದ ದಿನ ಒಂದು ಚೂರು ಹೂವು ಕೊಂಡು ತಂದು ಪುರಕ್ಕೇರಿಸುತ್ತಿದ್ದಳು. ಆ ಗಳಿಗೆಯಲ್ಲಿ ಮಾತ್ರ ಅವಳ ಮನಸ್ಸಿಗೆ ಸ್ವಲ್ಪ ಶಾಂತಿ ಲಭಿಸುತ್ತಿತ್ತು.

## ೧೨

ಮೊದಲು ಶ್ರೀನಾಥ ವಾಸಿಸುತ್ತಿದ್ದ ರೂಮೇ ಅವನಿಗೆ ಮದರಾಸಿನಲ್ಲಿ ಮೀಸಲಾಗಿತ್ತು. ರತ್ನಂ ಶುಶ್ರೂಷೆಗೆ ಸಿದ್ಧವಾಗಿದ್ದ. ಆಫೀಸಿನ ಯಜಮಾನಿಕೆಯನ್ನು ಚೆಟ್ಟಿಯಾರರು ಶ್ರೀನಾಥನಿಗೆ ಒಪ್ಪಿಸಿದರು.

ಶ್ರೀನಾಥ ಮದರಾಸ್ ತಲುಪಿದ ಕೂಡಲೆ ರಮಾನಿಗೂ ಡಾಕ್ಟರಿಗೂ ಪತ್ರ ಬರೆದು ತನ್ನ ಬಗ್ಗೆ ಯಾವ ಯೋಚನೆಯನ್ನೂ ಇಟ್ಟುಕೊಳ್ಳಬಾರದಾಗಿ ತಿಳಿಸಿದ.

ನಾಲ್ಕೈದು ದಿನಗಳಲ್ಲಿ ನಾಗರಾಜನಿಂದ ಕಾಗದ ಬಂತು. ಅವನು ಕೊನೆಯಲ್ಲಿ

"ಗಂಗಮ್ಮ ನಿಮ್ಮನ್ನು ದೇವರೆಂದು ಪೂಜಿಸುತ್ತಾಳೆ"

ಎಂದು ಬರೆದಿದ್ದ. ಶ್ರೀನಾಥ ಅದನ್ನು ನೋಡಿ

"ಅಯ್ಯೋ – ಮೂಢ ಜಗತ್ತೇ"

ಎಂದುಕೊಂಡ.

ಮದರಾಸು ಶ್ರೀನಾಥನಿಗೆ ಹೊಸ ಹುರುಪನ್ನು ತಂದುಕೊಟ್ಟಿತು. ತನ್ನ ಹಳೆಯ ಜೀವನವನ್ನು ಮರೆತು, ಹೊಸ ಜೀವನವನ್ನಾರಂಭಿಸಬೇಕೆಂಬ ಆಕಾಂಕ್ಷೆ ಅವನ ಮನದಲ್ಲಿ ಮೂಡಿತು. ಹೊಸ ಕಾದಂಬರಿಯೊಂದು ಅವನ ಚಿತ್ತದಲ್ಲಿ ರೂಪುಗೊಳ್ಳಲಾರಂಭಿಸಿತು. ಜೀವನದ ಅನೇಕ ಗಹನ ತತ್ತ್ವ

ಗಳನ್ನು, ಸಮಸ್ಯೆಗಳನ್ನು ಶ್ರೀನಾಥ ಆಳವಾಗಿ ವಿಚಾರಿಸಲಾರಂಭಿಸಿದ್ದ. ವರ್ಷಾಕಾಲದ ಕಾರ್ಮೋಡ ಜಾರಲು ತಿಳಿಯಾಗಿ ಬೆಳಗುವ ಬೆಳಕಿನಂತೆ, ಅವನ ಚಿತ್ತದಲ್ಲಿ ಬೆಳಕು ಮೂಡಿತ್ತು. ಹಿಂದಣ ಅನುಭವ ವ್ಯರ್ಥವಾಗಿರಲಿಲ್ಲ. ಅದು ಸ್ಫುಟಗೊಂಡು ಅವನ ಜೀವನಾದರ್ಶದೊಂದಿಗೆ ಸಮಾವೇಶವಾಗಿತ್ತು.

ಮಾನವ ಜೀವನಕ್ಕೆ ಆಹಾರ, ನಿದ್ರಾ, ಭಯ, ಮೈಥುನ ಬೇಕು. ಅವೇ ಜೀವನ ದೇಹದ ಅಂಗಾಂಗಗಳು. ಆದರೆ ಮಾನವ ಕೇವಲ ಅಂತಃಕರಣ ಚತುಷ್ಟಯಗಳಿಂದಲೇ ಬದುಕಬಲ್ಲನೇ ? ಜೀವನದ ಎಲ್ಲ ಅಂಗಗಳೂ ಪರಿಪುಷ್ಟವಾಗಿದ್ದರೂ ಅದಕ್ಕೆ ಆತ್ಮ ಬೇಕು. ಆ ಆತ್ಮ ಯಾವದು ? ವಿವೇಕವೇ – ಕರುಣೆಯೇ – ಪ್ರೇಮವೇ ? ಶ್ರೀನಾಥನ ಹೊಸ ಕಾದಂಬರಿ ಮಾನವ ಜೀವನದ ಕ್ರತುಶಕ್ತಿಯನ್ನು, ಆದ್ಯವಸ್ತುವನ್ನು ಹುಡುಕುವ ಸಾಹಸಕ್ಕೆ ಕೈ ಹಾಕಿತು. ಅದಕ್ಕೆ ' ಜೀವನದ ಕಣ್ಣು ' ಎಂದು ನಾಮಕರಣ ಮಾಡಿದ.

ಶ್ರೀನಾಥನ ಅಂತರಂಗದಲ್ಲಿ ಹುದುಗಿದ್ದ ಕ್ರಿಯಾಶಕ್ತಿ ಸ್ಫೋಟನವಾದಂತಾಯಿತು. ಅವನ ಬರವಣಿಗೆಯ ವೇಗ ಮನೋವೇಗದೊಂದಿಗೆ ಪ್ರತಿಸ್ಪರ್ಧಿಸಲಾರಂಭಿಸಿತು.

ಕಾದಂಬರಿಯ ಪ್ರಗತಿ ಕಂಡು ಶ್ರೀನಾಥನೇ ಬೆರಗಾದ. ' ನಾನು ಹೀಗೆ ಬರೆಯ ಬಲ್ಲೆನೇ ? – ಇಷ್ಟು ಬರೆಯ ಬಲ್ಲೆನೇ ?' ಎಂದು ಆಶ್ಚರ್ಯಪಟ್ಟುಕೊಂಡ.

ಮೂರು ತಿಂಗಳಲ್ಲಿ ಕಾದಂಬರಿ ಮುಗಿಯಿತು. ಆರು ನೂರು ಪುಟಗಳಲ್ಲಿ ಕಥೆ ಅವ್ಯಾಹತವಾಗಿ ಸಾಗಿತ್ತು. ಶ್ರೀನಾಥ ಅದಕ್ಕೆ ಸಾಣೆಯಿಡತೊಡಗಿದ.

ಶ್ರೀನಾಥನ ಸಾಹಿತ್ಯ ಪ್ರಗತಿ ಕೇಳಿ ಶರ್ಮ, ಡಾಕ್ಟರು ಸಂತೋಷಪಟ್ಟರು.

" ಇನ್ನು ಯೋಚನೆ ಇಲ್ಲಪ್ಪ. ನಮ್ಮ ಆಸಾಮಿ ದಾರಿಗೆ ಬಂದ."

ಎಂದು ಶರ್ಮ ತೃಪ್ತಿಯನ್ನು ವ್ಯಕ್ತಪಡಿಸಿದ.

ಕಾದಂಬರಿಯ ಹಸ್ತಪ್ರತಿಯನ್ನು ತೆಗೆದುಕೊಂಡು ಬೆಂಗಳೂರಿಗೆ ಹೋಗಿ ಬರಬೇಕೆಂದು ಶ್ರೀನಾಥನಿಗೆ ಮನಸ್ಸಾಯಿತು. ಆ ಆಸೆಯನ್ನು ಅಂಕುರದಲ್ಲಿಯೇ ಮುರಿದು ' ಈಗ ಬೇಡ. ಮನಸ್ಸು ಈಗೀಗ ಹತೋಟಿಗೆ ಬರುತ್ತಿದೆ.

ಪುನಃ ವಿಕ್ಷೋಭೆಗೆ ಅದನ್ನು ಒಡ್ಡಬಾರದು. ಇನ್ನೂ ನಾಲ್ಕು ಕಾದಂಬರಿಗಳನ್ನು ಮುಗಿಸಿ ಹೋಗಿ ಬಂದರಾಯಿತು ' ಎಂದು ನಿರ್ಧರಿಸಿದ.

ಕೆಲವು ದಿವಸಗಳಾನಂತರ ನಾಗರಾಜನಿಂದ ಬಂದ ಪತ್ರವೊಂದು ಶ್ರೀನಾಥನಿಗೆ ವಿಶೇಷ ಆನಂದವನ್ನಿತ್ತಿತ್ತು.

" ಗುರುದೇವ,

ನಿಮಗೆ ಒಂದು ವಿಶೇಷ ಸುದ್ದಿ ತಿಳಿಸಲು ನನಗೆ ತುಂಬ ಸಂತೋಷವಾಗುತ್ತದೆ.

ನಿಮ್ಮ ಸ್ನೇಹಿತರು ಮ|| ರಾ|| ಶರ್ಮ ನನ್ನ ಮಾವನವರನ್ನು ಕಂಡು ಮಾತನಾಡಿದರು. ಅವರ ಕಛೇರಿಯಲ್ಲಿಯೇ ನಮ್ಮ ಭೆಟ್ಟಿಯಾಯಿತು. ಮಾವನವರು ನನ್ನ ಹಿಂದಿನ ನಡತೆಯನ್ನು ಕ್ಷಮಿಸಿ ಮನೆಯಲ್ಲಿಟ್ಟುಕೊಳ್ಳಲೊಪ್ಪಿದರು. ಇದೇ ಸೋಮವಾರ ನಾನು ಮನೆ ಸೇರಿದೆ. ನೀವೇ ತನ್ನ ಭಾಗದ ದೇವರು ಎಂದು ನನ್ನ ಹೆಂಡತಿ ಹೇಳಿದಳು.

ನಾನು ಹೋಗುವುದಕ್ಕೆ ಅಡ್ಡಿ ಬರದ ಹಾಗೆ ಶರ್ಮರು ಮುತ್ತಮ್ಮನನ್ನು ಕಂಡು ಮಾತನಾಡಿ ಅವಳನ್ನೂ ಒಪ್ಪಿಸಿದರು. ಮುತ್ತಮ್ಮ ಸಂತೋಷದಿಂದ ಒಪ್ಪಿ ನನ್ನನ್ನು ಕಳಿಸಿಕೊಟ್ಟಳು. ನಾನೂ ಅವಳಿಗೆ ಅನ್ಯಾಯ ಮಾಡಲಿಲ್ಲ. ನನ್ನ ಹತ್ತಿರ ಸ್ವಲ್ಪ ಹಣವಿತ್ತು. ಅದರಲ್ಲಿ ಮುನ್ನೂರು ರೂಪಾಯಿ ಖರ್ಚು ಮಾಡಿ ಒಂದು ಎಮ್ಮೆ ಕೊಂಡುಕೊಟ್ಟೆ. ಕೆಲಸಕ್ಕೆ ಒಬ್ಬ ಆಳನ್ನೂ ಗೊತ್ತು ಮಾಡಿಕೊಟ್ಟೆ. ಮುತ್ತಮ್ಮ ಸುಖವಾಗಿ ಜೀವನ ಮಾಡುವುದಕ್ಕೆ ಯಾವ ತೊಂದರೆಯೂ ಇಲ್ಲ.

ನೀವು ಆದಷ್ಟು ಬೇಗ ಒಮ್ಮೆ ಬೆಂಗಳೂರಿಗೆ ಬಂದು ಹೋಗಬೇಕೆಂದು ನನ್ನ ಪ್ರಾರ್ಥನೆ. ನನ್ನ ಸಂಸಾರ ನೀವು ನೋಡಿ ಒಮ್ಮೆ ಹರಸಿ ಹೋಗಬೇಕು.

' ಗಂಗಮ್ಮನ ವಿಷಯ ಏನಾಯಿತೆಂ'ದು ಹಿಂದಿನ ಕಾಗದದಲ್ಲಿ ಬರೆದಿದ್ದಿರಿ. ನೀವು ಮದರಾಸಿಗೆ ಹೋದ ಕೆಲವು ದಿವಸಗಳ ಹಿಂದೆ ಅವಳು ಮಾಗಡಿಗೆ ಪ್ರಯಾಣ ಬೆಳಸಿದಳು. ಅವಳು ಹೋಗುವ ಮುನ್ನ ' ನಾಲ್ಕು ದಿವಸ ಇಲ್ಲಿಯೇ ಇರು. ಯಾರಾದರೂ ಸರಿಯಾದವರನ್ನು ನೋಡಿ ಗುರುತು ಮಾಡಿ ಕೊಡುತ್ತೇನೆ. ನಿನ್ನ ಜೀವನವನ್ನು ಮರ್ಯಾದೆಯಿಂದ ನಡಸುವ

ಯಾರಾದರೂ ಸಿಕ್ಕಿಯೇ ಸಿಕ್ಕುತ್ತಾರೆ' ಎಂದು ನಾನು ಹೇಳಿದೆ. ಅದಕ್ಕೆ ಅವಳು 'ಅಣ್ಣಯ್ಯಾ, ನನಗೆ ಗುರೂಪದೇಶವಾಗಿದೆ. ನನಗೆ ಯಾವ ಸಂಬಂಧವೂ ಬೇಕಾಗಿಲ್ಲ. ಮಾಗಡಿಗೆ ಹೋಗಿ ಅತ್ತೆ ಮಾವಂದಿರ ಸೇವೆ ಶಿಶ್ರೂಷೆ ಮಾಡಿ ಈ ಬಾಳು ಮುಗಿಸುತ್ತೇನೆ. ಅವರು ಇಲ್ಲಿಗೆ ಬಂದಾಗ, ಒಂದು ದಿನ ಮಟ್ಟಿಗಾದರೂ ಮಾಗಡಿಗೆ ಕರೆದುಕೊಂಡು ಬಾ. ನನ್ನನ್ನು 'ತಂಗೀ' ಎಂದು ಕರೆದು ಹೃದಯಕ್ಕೆ ಹಾಲೆರೆದರು. ಈ ಬಡ ತಂಗಿ ನೀಡುವ ಹಾಲು ಹಣ್ಣನ್ನು ನನ್ನ 'ಅಣ್ಣ' ಸ್ವೀಕರಿಸಿದರೆ ನಾನು ಧನ್ಯಳಾಗುತ್ತೇನೆ' ಎಂದು ಹೇಳಿದಳು.

ಗುರುದೇವಾ, ಮುಟ್ಟಿದ್ದನ್ನು ಬಂಗಾರ ಮಾಡಿದಿರಿ. ಪಶುಗಳಾಗಿದ್ದ ನಮ್ಮನ್ನು ಮನುಷ್ಯರನ್ನಾಗಿ ಮಾಡಿದಿರಿ. ನಾನು ಬಹಳ ಸಣ್ಣವನು– ಅವಿದ್ಯಾವಂತ. ನಿಮಗೆ ಯಾವ ರೀತಿಯಲ್ಲಿ ಬರೆಯಬೇಕೋ ಕೃತಜ್ಞತೆಯನ್ನು ತಿಳಿಸಬೇಕೋ ಕಾಣೆ. ತಪ್ಪು ಇದ್ದರೆ ಕ್ಷಮಿಸಿ. ಕೂಡಲೆ ಉತ್ತರ ಬರೆಯ ಬೇಕಾಗಿ ಬೇಡುವ

ನಿಮ್ಮ ಪಾದಧೂಳಿ 'ನಾಗರಾಜ'"

ನಾಗರಾಜನ ಪತ್ರವನ್ನೋದುತ್ತ ಶ್ರೀನಾಥನ ಕಣ್ಣು, ಮನಸ್ಸು ತುಂಬಿ ಬಂತು. ನಾಲ್ಕು ಪಂಕ್ತಿ ಉತ್ತರ ಬರೆದಲ್ಲದೆ ಅವನ ಮನಸ್ಸು ಶಾಂತವಾಗುವಂತಿರಲಿಲ್ಲ.

"ಪ್ರಿಯ ಆತ್ಮ,

ನಿನ್ನ ಕಾಗದ ಕೈಸೇರಿತು. ನನ್ನ ಮನಸ್ಸಿಗಾದ ಆನಂದವನ್ನು ಬರೆಯಲಾರೆ. ನನ್ನನ್ನೇಕೆ ಗೌರಿಶಂಕರದ ಮೇಲೆ ಕೂಡಿಸುವೆ? ನಾನೂ ಮನುಷ್ಯ– ಅನೇಕ ತಪ್ಪುಗಳನ್ನು ಮಾಡಿದ್ದೇನೆ. ಅದಕ್ಕಾಗಿ ಪಶ್ಚಾತ್ತಾಪ ಪಟ್ಟಿದ್ದೇನೆ. ನಾವು ಯಾರನ್ನು ಪಾಪಿಗಳೆಂದು ಕರೆಯುತ್ತೇವೆಯೋ ಅವರಲ್ಲಿಯೂ ಪುಣ್ಯ ರಾಶಿ ಇರುತ್ತದೆ. ಆದರದು ಗೋಪ್ಯವಾಗಿರುತ್ತದೆ. ಕೆದಕಿ ನೋಡಿದರೆ ಗೋಚರವಾಗುತ್ತದೆ. ಕೆದಕಿ ನೋಡುವ ಸಹನೆ, ಶ್ರದ್ಧೆ ಜನಕ್ಕೆ ಬರಬೇಕು. ನನ್ನ 'ತಂಗಿ' ಹೇಳಿದ್ದು ಕೇಳಿ ನನ್ನ ಅಂತಃಕರಣ ಉಕ್ಕಿಬಂತು. ನಾನು ಬೆಂಗಳೂರಿಗೆ ಬಂದಾಗ ಮಾಗಡಿಗೆ ಅಗತ್ಯವಾಗಿ ಹೋಗಿ ಬರೋಣ.

ಇಂತು ವಿಶ್ವಾಸಿ 'ಶ್ರೀನಾಥ'"

ನಾಗರಾಜ ಶ್ರೀನಾಥನ ಕಾಗದವನ್ನು ತಲೆಯ ಮೇಲಿಟ್ಟುಕೊಂಡು ಮೆರೆದ್ದಾಡಿದ. ಶರ್ಮ, ಡಾಕ್ಟರಿಗೆ ಅದನ್ನು ತೋರಿಸಿ ಬಂದ. ತನ್ನ ಹೆಂಡತಿಗೆ ಹತ್ತು ಸಾರಿ ಓದಿ ಹೇಳಿದರೂ ಅವನಿಗೆ ತೃಪ್ತಿಯಿಲ್ಲ. ನಾಗರಾಜ ಮುತ್ತಮ್ಮನ ಮನೆಬಿಟ್ಟು ಹೋದರೂ ಅವಳನ್ನು ಪೂರ್ತಿ ನಿರಾಕರಿಸಲಿಲ್ಲ. ದಿನಕ್ಕೊಮ್ಮೆಯಾದರೂ ಹೋಗಿ ಅವಳ ಯೋಗಕ್ಷೇಮ ವಿಚಾರಿಸುತ್ತಿದ್ದ. ಅವಳು ಹೇಳಿದ ಕೆಲಸ ಮಾಡಿಕೊಟ್ಟು ಬರುತ್ತಿದ್ದ. ಇದು ಮುತ್ತಮ್ಮನಿಗೂ ತೃಪ್ತಿಯನ್ನುಂಟುಮಾಡಿತ್ತು.

ಒಂದು ದಿನ ನಾಗರಾಜ ಮುತ್ತಮ್ಮನ ಮನೆಯಲ್ಲಿದ್ದಾಗಲೇ ಭಾಗ್ಯಮ್ಮ ದೀರ್ಘವಾಗಿ ಅಳುತ್ತ ಬಂದಳು. ಮುತ್ತಮ್ಮ ಅವಳ ಸ್ಥಿತಿ ನೋಡಿ ಗಾಬರಿಯಾದಳು.

" ಏನಾಯಿತಮ್ಮ? "

" ಕಮಲ! ಕಮಲ!! "

" ಏನಾಯಿತು ಕಮಲನಿಗೆ? "

" ಸಾಯುತ್ತಿದ್ದಾಳೆ. ಆಸ್ಪತ್ರೆಗೆ ಸಾಗಿಸಬೇಕು."

ನಾಗರಾಜ, ಮುತ್ತಮ್ಮ ಭಾಗ್ಯಮ್ಮನೊಂದಿಗೆ ಅವರ ಮನೆಗೆ ಹೋದರು.

ಕಮಲ ಹಾಸಿಗೆ ಹಿಡಿದು ಮಲಗಿದ್ದಳು. ಅವಳ ಸಂಕಟ, ಯಾತನೆ ಕಲ್ಲನ್ನು ಕರಗಿಸುತ್ತಿತ್ತು. ಹತ್ತಿರ ಜನ ಸುಳಿಯುವುದು ದುಸ್ಸಾಧ್ಯವಾಗಿತ್ತು. ಮೂಗಿನ ಸೆಲೆಯೊಡೆಯುವಂತೆ ದುರ್ನಾತ ಬರುತ್ತಿತ್ತು.

ಮುತ್ತಮ್ಮ ನಾಗರಾಜನನ್ನು ಕಳುಹಿಸಿ ಆಸ್ಪತ್ರೆಯ ' ಆಂಬ್ಯುಲೆನ್ಸ್ ವ್ಯಾನ್ ' ತರಿಸಿ ಕಮಲನನ್ನು ಆಸ್ಪತ್ರೆಗೆ ಸಾಗಿಸಿದಳು.

ಕಮಲನ ಕಾಹಿಲೆಯ ಸ್ವರೂಪಕಂಡು ಡಾಕ್ಟರು ಮುಖತಿರುವಿದರು. ನಾಗರಾಜ ಅವರನ್ನು ಬೇಡಿ ಸ್ಪೆಷಲ್ ವಾರ್ಡಿನಲ್ಲಿ ಒಂದು ರೂಮು ದೊರಕಿಸಿದ.

ನರ್ಸ್ ಬಂದು ರೋಗಿಯನ್ನು ತೊಳೆದು ಬಟ್ಟೆ ಬದಲಾಯಿಸಿದಳು. ಡಾಕ್ಟರು ಒಂದು ಇಂಜಕ್ಷನ್ ಚುಚ್ಚಿ ಹೋದರು. ನಾಗರಾಜನ ಧ್ವನಿ ಕೇಳಿ ಕಮಲ ಅವನನ್ನು ಹತ್ತಿರ ಕರೆದು

"ನಾಗರಾಜ."

"ಅಮ್ಮಯ್ಯ...."

"ನಾನು ಉಳಿಯುವುದಿಲ್ಲಪ್ಪ. ನನ್ನ ಕಾಲ ಸಮೀಪಿಸಿತು. ನನ್ನ ಕೊನೆಯ ಪ್ರಾರ್ಥನೆ ಒಂದಿದೆ ನೆರವೇರಿಸುವೆಯಾ ?"

"ಹೇಳಮ್ಮ."

"ಅವರನ್ನು ಬರಮಾಡು. ಒಂದು ಸಲ ಅವರ ಪಾದದ ಮೇಲೆ ತಲೆಯಿಟ್ಟು ಕ್ಷಮಾಭಿಕ್ಷೆ ಬೇಡಿ ನಿರಾತಂಕವಾಗಿ ಪ್ರಾಣ ಬಿಟ್ಟುಬಿಡುತ್ತೇನೆ."

"ಹಾಗೇ ಆಗಲಿ."

"ಅವರು ಎಲ್ಲಿದ್ದಾರೆ ?"

"ಮದರಾಸಿನಲ್ಲಿ."

"ಒಂದು ಟೆಲಿಗ್ರಾಂ ಕೊಡುವೆಯಾ ?"

"ಈಗಲೇ ಎಕ್ಸ್‌ಪ್ರೆಸ್ ಟೆಲಿಗ್ರಾಂ ಕಳಿಸುತ್ತೇನೆ."

"ಖಂಡಿತವೇ ?"

"ಪ್ರಮಾಣವಾಗಿ ಕಳಿಸುತ್ತೇನಮ್ಮಾ."

ಭಾಗ್ಯಮ್ಮನನ್ನು ಆಸ್ಪತ್ರೆಯಲ್ಲಿಯೇ ಬಿಟ್ಟು ಮುತ್ತಮ್ಮ, ನಾಗರಾಜ ಮನೆಗೆ ಹಿಂದಿರುಗಿದರು.

"ಆ ಮುದುಕಿಯನ್ನು ಸ್ವಲ್ಪ ನೋಡಿಕೋ ಮುತ್ತಾ" ಎಂದ ನಾಗರಾಜ.

"ನೋಡಿಕೊಳ್ಳುತ್ತೇನಪ್ಪಾ. ಈ ಹೊತ್ತಿನಲ್ಲಿ ಕೈಬಿಡುವುದಕ್ಕಾಗುತ್ತದೆಯೇ ?"

ನಾಗರಾಜ ಕೂಡಲೆ ಹೋಗಿ ಎಕ್ಸ್‌ಪ್ರೆಸ್ ಟೆಲಿಗ್ರಾಂ ಕೊಟ್ಟು ಬಂದ.

ನಾಗರಾಜನ ಟೆಲಿಗ್ರಾಂ ನೋಡಿ ಶ್ರೀನಾಥನಿಗೆ ಗಾಬರಿಯಾಯಿತು. ಕಾರಣವೇನಿರಬಹುದೆಂದು ತರ್ಕಿಸಿದ. ಸಮಾಧಾನ ಸಿಕ್ಕಲಿಲ್ಲ.

ಶ್ರೀನಾಥ ರಾತ್ರಿಯೇ ಹೊರಡಲು ನಿಶ್ಚಯಿಸಿ, ಫೋನ್ ಮಾಡಿ ಚೆಟ್ಟಿಯಾರರನ್ನು ಕಛೇರಿಗೆ ಬರಮಾಡಿಕೊಂಡು ಅವರಿಗೆ ಟೆಲಿಗ್ರಾಂ ತೋರಿಸಿದ.

"ಅವಶ್ಯಕವಾಗಿ ಹೋಗಿ ಬನ್ನಿ. ದುಡ್ಡು ಬೇಕಾದರೆ ತೆಗೆದುಕೊಂಡು ಹೋಗಿ. ನಿಮ್ಮ ಹಣವೇ ನನ್ನ ಹತ್ತಿರ ಸಾಕಷ್ಟಿದೆ."

"ಎಷ್ಟು ಕೊಡಲು ಸಾಧ್ಯ ?"

"ಸಾವಿರ ರೂಪಾಯಿ ಸಾಕೇ ?"

"ಸಾಕು" ಎಂದು ಹೇಳಿದ.

ಚೆಟ್ಟಿಯಾರರು ರತ್ನಂನನ್ನು ಜತೆಯಲ್ಲಿ ಕರೆದುಕೊಂಡು ಹೋಗಿ ಹಣ ಕಳಿಸಿದರು. ಶ್ರೀನಾಥ ತನ್ನ ಸಾಮಾನು ಕಟ್ಟಿ, ಕಾದಂಬರಿಯ ಹಸ್ತ ಪ್ರತಿಯನ್ನೂ ಗಂಟಿಗೆ ಸೇರಿಸಿದ. ಥಟ್ಟನೆ ನಾಗರಾಜನ ನೆನಪಾಯಿತು. ಅವನಿಗೆ ಒಂದು ಎಕ್ಸ್‌ಪ್ರೆಸ್ ಟೆಲಿಗ್ರಾಂ ಕಳಿಸಿ 'ರಾತ್ರಿ ಹೊರಟು ಬೆಳಿಗ್ಗೆ ಬರುವುದಾಗಿ' ತಿಳಿಸಿದ.

ಬೆಳಿಗ್ಗೆ ರೈಲ್ವೆ ಸ್ಟೇಷನ್ನಿಗೆ ನಾಗರಾಜ ಹೋಗಿ ಶ್ರೀನಾಥನನ್ನೆದುರುಗೊಂಡ. ಶ್ರೀನಾಥ ಗಾಬರಿಯಾಗಿ ಕೇಳಿದ

"ಏನು ವಿಷಯ ನಾಗರಾಜ ? ಎಕ್ಸ್‌ಪ್ರೆಸ್ ಟೆಲಿಗ್ರಾಂ ಕೊಟ್ಟು ಕರೆಸುವ ಕಾರಣವೇನಿತ್ತು ?"

"ರೂಮಿಗೆ ಹೋಗೋಣ ಸಾರ್. ನಿಧಾನವಾಗಿ ಹೇಳಬೇಕು."

ರೂಮಿನ ಬೀಗದ ಕೈಯನ್ನೂ ಕಾಫಿಯನ್ನೂ ನಾಗರಾಜ ಹೊಟೇಲ್ ಮಾಣಿಯ ಕೈಯಲ್ಲಿ ತೆಗೆಸಿಕೊಂಡು ಬಂದ.

ಶ್ರೀನಾಥ ಮತ್ತೆ ಕೇಳಿದ

"ಏನು ಸಮಾಚಾರ ನಾಗರಾಜ ?"

"ಹೇಳುತ್ತೇನೆ ಸಾರ್. ಸ್ನಾನ ಮಾಡಿ, ರಾತ್ರಿಯೆಲ್ಲಾ ದಣಿದು ಬಂದಿದ್ದೀರಿ."

"ಸ್ನಾನವಿರಲಿ ಹೇಳು."

"ಕಮಲನಿಗೋಸ್ಕರ ನಿಮ್ಮನ್ನು ಇಲ್ಲಿಗೆ ಬರಮಾಡಬೇಕಾಯಿತು."

ಶ್ರೀನಾಥನಿಗೆ ಕೋಪ ನೆತ್ತಿಗೇರಿತು.

"ಕಮಲನಿಗೋಸ್ಕರ....ಟೆಲಿಗ್ರಾಂನಲ್ಲಿ ತಿಳಿಸುವುದಕ್ಕೇನಾಗಿತ್ತು ?"

"ತಿಳಿಸುವಂತಿರಲಿಲ್ಲ. ಅವಳು ಬಹಳ ಕಾಹಿಲೆ ಮಲಗಿದ್ದಾಳೆ."

"ಏನಾಗಿದೆ ?"

"ಡಾಕ್ಟರಿಗೆ ಕೂಡ ಬಗೆ ಹರಿಯದಂತಾಗಿದೆ. ಆಸ್ಪತ್ರೆಯಲ್ಲಿದ್ದಾಳೆ. ನಿಮ್ಮನ್ನು ನೋಡಬೇಕೆಂದು ಅಂಗಲಾಚಿದಳು. ನನ್ನ ಕರುಳು 'ಚುರ್' ಎಂದಿತು, ತಂತೀ ವರ್ತಮಾನ ಕಳಿಸಿದೆ."

"ಪ್ರಾಣಕ್ಕೆ ಅಪಾಯವಿಲ್ಲವಷ್ಟೇ ?"

"ಧೈರ್ಯವಾಗಿ ಇಲ್ಲವೆಂದು ಹೇಳಲು ಸಾಧ್ಯವಿಲ್ಲ."

ಶ್ರೀನಾಥ ಹೆಚ್ಚು ಹೊತ್ತು ಕೂಡಲಿಲ್ಲ. ನಾಗರಾಜನನ್ನೆಳೆದುಕೊಂಡು ಹೊರಟುಬಿಟ್ಟ.

ಅವರು ಆಸ್ಪತ್ರೆಗೆ ಬಂದಾಗ ನರ್ಸ್ ಒಳಗೆ ರೋಗಿಗೆ ಉಪಚಾರಮಾಡುತ್ತಿದ್ದಳು. ಇಬ್ಬರೂ ಸ್ವಲ್ಪ ಕಾಲ ಹೊರಗೇ ಕಾಯಬೇಕಾಯಿತು. ಮೊದಲು ಹೊರಗೆ ಬಂದ ಭಾಗ್ಯಮ್ಮ ಶ್ರೀನಾಥನನ್ನು ನೋಡಿ ಅಳುವುದಕ್ಕುಪಕ್ರಮಿಸಿದಳು. ಶ್ರೀನಾಥ ಅವಳ ಸಮೀಪಕ್ಕೆ ಹೋಗಿ

"ಅಳಬೇಡಮ್ಮ. ಎಲ್ಲಾ ಸರಿ ಹೋಗುತ್ತದೆ" ಎಂದು ಸಮಾಧಾನ ಹೇಳಿದ.

ನರ್ಸ್ ಹೊರಗೆ ಬರಲು ಶ್ರೀನಾಥ, ನಾಗರಾಜ ಒಳಗೆ ಪ್ರವೇಶಿಸಿದರು.

ಕಮಲನ ಮೈಯಿಂದ ಕಾರುತ್ತಿದ್ದ ದುರ್ಗಂಧ ಅಸಹನೀಯವಾಗಿತ್ತು. ಜೀವಶವದಂತೆ ಮಲಗಿದ್ದ ಕಮಲನನ್ನು ನೋಡಿ ಶ್ರೀನಾಥನ ಕರುಳು ಕಿತ್ತು ಬಂತು.

ನಾಗರಾಜ ಹಾಸಿಗೆಯ ಬಳಿಗೆ ಹೋಗಿ

"ಅಮ್ಮಯ್ಯಾ" ಎಂದ.

"ಯಾರು ? ನಾಗರಾಜನೇ ? ಅವರು....ಅವರು ಬಂದರೇ ?"

ಶ್ರೀನಾಥ ಅವಳ ಸಮೀಪ ಸಾರಿ, ಪಕ್ಕದಲ್ಲಿ ಕುಳಿತು

"ಕಮಲಾ" ಎಂದ.

ಕಮಲ ಶ್ರೀನಾಥನ ಕೈಗೆ ಹುಡುಕಿದಳು. ಶ್ರೀನಾಥ ಅವಳ ಕೈ ಹಿಡಿದ.

"ಬಂದಿರಾ ! ಕ್ಷೇಮವೇ ?"

ಶ್ರೀನಾಥನ ಬಾಯಲ್ಲಿ ಮಾತು ಹೊರಡಲಿಲ್ಲ. ಮೃದುವಾಗಿ ಅವಳ ಮುಖ ನೇವರಿಸಿದ.

"ನಿಮ್ಮನ್ನು ನೋಡುವ ಭಾಗ್ಯವಿಲ್ಲ. ಎರಡು ಕಣ್ಣುಗಳೂ ಹೋದವು. ಮನಸ್ಸಿನಲ್ಲಿಯೇ ನೋಡುತ್ತೇನೆ."

"ಗುಣವಾಗುತ್ತದೆ – ಭಯಪಡಬೇಡ."

"ಇಲ್ಲ ಸ್ವಾಮಿ – ಆ ಸ್ಥಿತಿ ಮೀರಿದೆ. ನಿಮ್ಮ ದರ್ಶನಕ್ಕಾಗಿ ಈ ಜೀವ ಇನ್ನೂ ಈ ಪಂಜರದಲ್ಲಿದೆ. ನಾನು...."

"ನೀನು ಹಾಗೆ ಮಾತನಾಡಬಾರದು."

"ಇದೊಂದು ದಿವಸ ನಾನು ಹೇಳುವುದನ್ನು ಕೇಳಿಬಿಡಿ. ನಾನು ನಿಮಗೆ ದ್ರೋಹ ಮಾಡಿದೆ – ವಂಚನೆ ಮಾಡಿದೆ."

"ಕಳೆದುಹೋದುದನ್ನು ಜ್ಞಾಪಿಸಿಕೊಂಡು ಏನು ಪ್ರಯೋಜನ?"

"ಕೈ ಜೋಡಿಸಿ ಕೇಳಿಕೊಳ್ಳುತ್ತೇನೆ. ನನ್ನ ಸರ್ವಾಪರಾಧಗಳನ್ನು ಕ್ಷಮಿಸಿಬಿಡಿ."

"ನೀನು ಕೇಳಬೇಕಾದ ಅಗತ್ಯವೇ ಇಲ್ಲ. ಎಂದೆಂದಿಗೂ ನೀನು ನನ್ನ ಹೃದಯದ ದೇವಿ. ಅಲ್ಲಿ ಮತ್ತೆ ಯಾರಿಗೂ ಪ್ರವೇಶವಿಲ್ಲ."

"ಸ್ವಾಮಿ, ನನ್ನದೊಂದು ಪ್ರಾರ್ಥನೆ ಇದೆ. ನಡೆಸಿಕೊಡಿ."

"ಹೇಳು."

"ನೀವು ಲಗ್ನವಾಗಬೇಕು."

"ಅದು ಸಾಧ್ಯವಿಲ್ಲ ಕಮಲಾ. ಅದೊಂದು ಬಿಟ್ಟು ಬೇಕಾದ್ದು ಹೇಳು. ಮಾಡಲು ಸಿದ್ಧನಾಗಿದ್ದೇನೆ."

ಕಮಲನ ಕಣ್ಣಲ್ಲಿ ನೀರು ಕೋಡಿ ಹರಿಯಿತು.

"ಸ್ವಾಮಿ, ಈ ಮಹಾ ಪಾಪಿಯನ್ನೇಕೆ ಪ್ರೀತಿಸಿದಿರಿ? ಒಂದು ದಿನವೂ ನಿಮ್ಮನ್ನು ನಾನು ಸರಿಯಾಗಿ ಆದರಿಸಲಿಲ್ಲ. ನನಗಾಗಿ ಜೀವ ತೇದಿರಿ – ಉಪವಾಸ ಮಾಡಿದಿರಿ – ಹಿಡಿ ಹಿಡಿಯಲ್ಲಿ ಹಣ ಸಂಪಾದಿಸಿ ತಂದು ಕೊಟ್ಟಿರಿ – ಈ ನಾಯಿಯನ್ನು ತಲೆಯ ಮೇಲಿಟ್ಟುಕೊಂಡಿರಿ – ಇದಕ್ಕೆಲ್ಲಾ ಪ್ರತಿಯಾಗಿ ನಾನು ನಿಮ್ಮನ್ನು ನಾಶಮಾಡಿದೆನಲ್ಲಾ."

"ಕಮಲಾ, ಅದು ನನ್ನ ಕರ್ಮ. ನೀನೇನು ಮಾಡಬಲ್ಲೆ? ನನ್ನ ಕರ್ಮ ನಿನ್ನನ್ನು ಆಯುಧವಾಗಿ ಬಳಸಿಕೊಂಡಿತು. ನನ್ನನ್ನು ಆದರಿಸಲಿಲ್ಲವೆಂದೇಕೆ ಹೇಳುವೆ – ನಾಲ್ಕುದಿನವಾದರೂ ನನಗೆ ಸ್ವರ್ಗವಾಸ ಮಾಡಿಸಿದೆ –

ನನ್ನ ಮನಸ್ಸಿನಲ್ಲಿ ಸಂತೋಷದ ಬೆಳೆಯನ್ನು ಬಿತ್ತಿದೆ – ಅದನ್ನು ನಾನು ಎಂದಿಗೂ ಮರೆಯಲಾರೆ."

"ನನಗಾಗಿ ನಿಮ್ಮ ಹೃದಯದಲ್ಲಿ ಎಷ್ಟು ಪ್ರೇಮ ತುಂಬಿದೆ ಸ್ವಾಮಿ! —ನಾನು ತೃಪ್ತಳಾಗಿ ಕಣ್ಣು ಮುಚ್ಚುತ್ತೇನೆ. ನನ್ನ ಸ್ವಾಮಿಯ ಆಶೀರ್ವಾದ ಹೊತ್ತು ಧರ್ಮಕರ್ತನ ಮುಂದೆ ನಿಂತು 'ನಾನು ಮಹಾಪಾಪಿ – ಘೋರ ಶಿಕ್ಷೆಯನ್ನು ವಿಧಿಸು. ಅದನ್ನು ಅನುಭವಿಸಿದ ಮೇಲೆ ನನ್ನ ಸ್ವಾಮಿಯ ಪಾದದ ಮೇಲೆ ಹಾಕು' ಎಂದು ಬೇಡುತ್ತೇನೆ. ಹೋಗಿ ದೊರೆ. ಇಲ್ಲಿ ಹೆಚ್ಚು ಹೊತ್ತು ಕೂಡಬೇಡಿ. ನಾನು ಮಾಡಿದ ಪಾಪವನ್ನು ನನ್ನ ಮೈ ಕೂಗಿ ಕೂಗಿ ಹೇಳುತ್ತಿದೆ."

ನಾಗರಾಜ ಮೆಲ್ಲನೆ ಬಂದು ಶ್ರೀನಾಥನನ್ನೆಬ್ಬಿಸಿದ. ಶ್ರೀನಾಥ ಕೊನೆಗೊಮ್ಮೆ ಕಮಲನನ್ನು ನೇವರಿಸಿ ಅವನ ಜತೆ ಹೊರಟ.

ಬಾಗಿಲಿನಲ್ಲಿ ಡಾ. ನೀಲಕಂಠ ಕಾದಿದ್ದ. ಶ್ರೀನಾಥನನ್ನು ಡ್ರೆಸ್ಸಿಂಗ್ ರೂಮಿಗೆ ಕರೆದೊಯ್ದು ಅವನ ಕೈಯನ್ನು ಡೆಟ್ಟಾಲ್ ಹಾಕಿ ಚೆನ್ನಾಗಿ ತೊಳೆದು

"ಯಾವಾಗ ಬಂದೆ ಶ್ರೀನಾಥ?"

"ಬೇಗ್ಗೆ"

"ರೂಮಿನಲ್ಲಿರುವೆಯಷ್ಟೇ – ಡ್ಯೂಟಿ ಮುಗಿಸಿಕೊಂಡು ಬರುತ್ತೇನೆ."

"ಇಲ್ಲ ಡಾಕ್ಟರ್ – ನನಗೆ ಬೇರೆ ಕೆಲಸವಿದೆ. ನಾಳೆ ನೋಡುತ್ತೇನೆ. ಕಮಲ ಬದುಕುವ ಸಂಭವವಿದೆಯೇ – ನಿಜ ಹೇಳು."

"ನಾನು ಹೆಚ್ಚು ಆಸೆ ಇಟ್ಟುಕೊಂಡಿಲ್ಲ."

ಶ್ರೀನಾಥ ನಾಗರಾಜನೊಂದಿಗೆ ರೂಮಿಗೆ ಬಂದು ಕುಳಿತ. ಅವನಿಗೆ ಯಾವ ರೀತಿಯಲ್ಲಿ ಸಮಾಧಾನ ಹೇಳಬೇಕೋ ನಾಗರಾಜನಿಗೆ ತಿಳಿಯದಾಯಿತು.

ಸ್ವಲ್ಪ ಹೊತ್ತು ಕಳೆಯಲು ಶ್ರೀನಾಥ

"ನಾಗರಾಜ, ನೀನು ಆಸ್ಪತ್ರೆಗೆ ಹೋಗಿ ಕಮಲನ ಸ್ಥಿತಿಯನ್ನು ಬಂದು ನನಗೆ ತಿಳಿಸು."

ಎಂದ. ತಾನು ಹೊರಡಬೇಕೆಂದು ಸೂಚಿಸುತ್ತಿದ್ದಾನೆಂದು ತಿಳಿದ ನಾಗರಾಜ ಅಲ್ಲಿಂದೆದ್ದ.

ಶ್ರೀನಾಥ ಕೈಯಲ್ಲಿ ಪ್ಯಾಡ್ ಹಿಡಿದು ಕುಳಿತುಬಿಟ್ಟ. ಹೊಟೇಲ್ ಮಾಣಿ ಅನ್ನ ತಂದಿಟ್ಟುಹೋದ. ಅದು ಮೂಲೆಯಲ್ಲಿ ಕೊಳೆಯುತ್ತ ಬಿದ್ದಿತ್ತು.

ಶ್ರೀನಾಥ ಕುಳಿತ ಸ್ಥಳದಿಂದ ಮೇಲಕ್ಕೇಳಲಿಲ್ಲ. ಅವನ ಬರವಣಿಗೆ ನಾಗಿತ್ತು.

ನಾಲ್ಕುಗಂಟೆ ಹೊಡೆಯಿತು. ನಾಗರಾಜ ಗಾಡಿಯಲ್ಲಿ ಬಂದಿಳಿದು ಒಳಕ್ಕೆ ಬಂದ. ಶ್ರೀನಾಥ ಕತ್ತೆತ್ತಿ ನೋಡಿದ.

" ಎರಡು ಗಂಟೆಗೆ ಆಗಿಹೋಯಿತು ಸಾರ್."

ಶ್ರೀನಾಥ ಮಾತನಾಡಲಿಲ್ಲ. ನಾಗರಾಜನ ಕೈಗೆ ನೂರು ರೂಪಾಯಿಯ ಎರಡು ನೋಟುಗಳನ್ನಿಟ್ಟು, ಅವನ ಜತೆ ಬಂದು ಗಾಡಿಯಲ್ಲಿ ಕುಳಿತ.

ಶವ ಸಾಗಿಸುವುದಕ್ಕೆ ಎಲ್ಲ ಏರ್ಪಾಟೂ ಆಗಿತ್ತು. ಡಾಕ್ಟರು, ಶರ್ಮಾ, ಮುತ್ತಮ್ಮ ಅಲ್ಲಿಯೇ ಇದ್ದರು. ಶ್ರೀನಾಥ ಶವದ ಜತೆ ನಡೆದು ಹೋದ. ಮೊದಲೇ ಸಿದ್ಧವಾಗಿದ್ದ ಗುಣಿಯಲ್ಲಿ ಕಮಲನ ಪಾರ್ಥಿವ ಶರೀರವನ್ನಿಳಿ ಹಿದರು. ಯಾರೋ ಶ್ರೀನಾಥನ ಕೈಗೆ ಒಂದು ಹಿಡಿ ಮಣ್ಣುಕೊಟ್ಟರು. ಅದನ್ನು ಗುಣಿಯೊಳಗೆ ಹಾಕಿದ.

ಸಂಸ್ಕಾರ ವಿಧಿ ಪೂರೈಸಿದ ಮೇಲೆ ಶ್ರೀನಾಥನ ಜತೆ ನಾಗರಾಜ, ಶರ್ಮ, ಡಾಕ್ಟರು ಹೊರಟರು. ದಾರಿಯಲ್ಲಿ ಸಿಕ್ಕಿದ ಒಂದು ಗಾಡಿಯನ್ನು ನಾಗರಾಜ ನಿಲ್ಲಿಸಿದ. ಶ್ರೀನಾಥ ಹತ್ತಿಕುಳಿತ.

" ನಾನೂ ಬರುತ್ತೇನೆ" ಎಂದು ಶರ್ಮ ಹೇಳಿದ.

" ಇವತ್ತು ಯಾರೂ ಬರಬೇಡಿ. ನನ್ನ ಪಾಡಿಗೆ ನನ್ನ ಇವತ್ತು ಬಿಟ್ಟುಬಿಡಿ "

ಎಂದ. ಮೂವ್ವರೂ ನಿಂತರು. ಗಾಡಿ ಮುಂದಕ್ಕೆ ನಾಗಿತು.

ಮಾರನೆಯ ಬೆಳಿಗ್ಗೆ ಎಂಟು ಗಂಟೆಯ ವೇಳೆಗೆ ಮಾಣಿ ಎಂದಿನಂತೆ ಕಾಫಿ ತಂದು, ಶ್ರೀನಾಥನ ರೂಮಿನ ಬಾಗಿಲು ಬಡಿದ. ಎಷ್ಟು ಬಡಿದರೂ ಒಳಗಿನಿಂದ ಮಾರುತ್ತರ ಬರಲಿಲ್ಲ. ಅವನು ಬೇಸತ್ತು ಕಾಫಿಯನ್ನು ಹಿಂದಕ್ಕೆ ತೆಗೆದುಕೊಂಡು ಹೋಗಿ ಮಾಲಿಕನಿಗೆ ತಿಳಿಸಿದ.

ಮಾಲಿಕ ಗಾಬರಿಯಾಗಿ ಬಂದು ಬಾಗಿಲು ತಟ್ಟಿದ. ಒಳಗಿನಿಂದ ಧ್ವನಿ ಬರಲಿಲ್ಲ. ಅವನಿಗೆ ಭಯ ಹೆಚ್ಚಿತು. ಅಕ್ಕಪಕ್ಕದವರನ್ನು ಸಹಾಯಕ್ಕೆ ಕರೆದು ಬಾಗಿಲು ಒಡೆದು ಒಳಕ್ಕೆ ಪ್ರವೇಶಿಸಿದ.

ಕಣ್ಣಿಗೆ ಬಿದ್ದ ದೃಶ್ಯ ಅವನನ್ನು ಅವಾಕ್ಕಾಗಿ ಮಾಡಿತು. ತಾರಸಿಯಲ್ಲಿದ್ದ ಗೂಟವೊಂದಕ್ಕೆ ಹಗ್ಗ ಬಿಗಿಯಲ್ಪಟ್ಟಿತ್ತು. ಆ ಹಗ್ಗದ ಕೊನೆಯಲ್ಲಿ ಶ್ರೀನಾಥನ ಮೃತಶರೀರ ತೂಗಾಡುತ್ತಿತ್ತು.

ಪೋಲೀಸಿಗೆ ಸುದ್ದಿ ಹೋಯಿತು. 'ಇನ್‌ಕ್ವೆಸ್ಟ್' ಕ್ರಮ ನಡೆಯಿತು. ಪೋಲೀಸಿನವರೇ ನಾಗರಾಜ, ಶರ್ಮ, ಡಾಕ್ಟರ್ ನೀಲಕಂಠರಾಯರಿಗೆ ಸುದ್ದಿ ಕೊಟ್ಟರು.

ಮೂವರಿಗೂ ಮೂರು ಕಾಗದ ಕಾದಿತ್ತು. ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರಿಗೆ ಬರೆದಿದ್ದ ಕಾಗದದಲ್ಲಿ

"ನಾನು ಆತ್ಮಹತ್ಯ ಮಾಡಿಕೊಂಡಿದ್ದೇನೆ. ನನ್ನ ಸಾವಿಗೆ ಯಾರೂ ಕಾರಣಕರ್ತರಲ್ಲ" ಎಂದಿತ್ತು.

ಶರ್ಮನಿಗೆ ಬರೆದಿದ್ದ

"ನನ್ನ ಹೊಸಕಾದಂಬರಿಯ ಹಸ್ತಪ್ರತಿ ಇಲ್ಲೇ ಇದೆ. ಇದನ್ನು ಮಾರಿ ಬಂದುದನ್ನು ಭಾಗ್ಯಮ್ಮನಿಗೆ ಕೊಟ್ಟುಬಿಡು. ನಗದು ಎಂಟುನೂರು ರೂಪಾಯಿ ಹಣವಿದೆ. ಅದರಲ್ಲಿ ಅರ್ಧ ನಾಗರಾಜನಿಗೆ – ಉಳಿಧರ್ದ ಮಾಗಡಿಯಲ್ಲಿರುವ ನನ್ನ ತಂಗಿಗೆ ಕಳುಹಿಸು."

ಡಾ. ನೀಲಕಂಠರಾಯನಿಗೆ

"ನಿನ್ನ – ಶರ್ಮನ ವಿಶ್ವಾಸಕ್ಕೆ ಸರಿಯಾದ ಮರುವಿಶ್ವಾಸ ನಾನು ತೋರಿಸಲಿಲ್ಲ. ನೀವು ಕ್ಷಮಿಸಬೇಕು. ನನ್ನ ದುರಂತ ಬಾಳಿನಲ್ಲಿ ಸುಳಿದ ಬೆಳ್ಳಿಯ ಮಿಂಚೆಂದರೆ ನಿಮ್ಮ ಸ್ನೇಹ. ನನ್ನ ಸೌಭಾಗ್ಯವತಿ ಅಕ್ಕನಿಗೆ ನಮಸ್ಕಾರ ತಿಳಿಸು. ಈ ಅವಿವೇಕಿ ತಮ್ಮನ ಅನಂತ ಅಪರಾಧಗಳನ್ನು ಕ್ಷಮಿಸಬೇಕೆಂದು ಪ್ರಾರ್ಥಿಸು."

ಎಂದು ನಿವೇದಿಸಿಕೊಂಡಿದ್ದ.

# ೧೩

ಶ್ರೀನಾಥ ಕಣ್ಮರೆಯಾದರೂ ಅವನ ನೆನಪು ಕಣ್ಮರೆಯಾಗಲಿಲ್ಲ. ' ಜೀವನದ ಕಣ್ಣು ' ಅಚ್ಚಾಗಿ ಎಲ್ಲರ ಕಣ್ಣು ತೆರಸಿತು.

ಮುತ್ತಮ್ಮ, ಭಾಗ್ಯಮ್ಮನ ಕೈಹಿಡಿದಳು.

" ನೀನು ಒಬ್ಬಂಟಿಗಳು – ನಾನೂ ಒಬ್ಬಂಟಿಗಳು. ಬಾ, ಜತೆಯಲ್ಲಿರು ಒಬ್ಬರಿಗೊಬ್ಬರು ಆಸರೆಯಾಗುತ್ತವೆ "

ಎಂದು ತನ್ನ ಮನೆಗೇ ಕರೆದುಕೊಂಡು ಹೋದಳು.

ಮುತ್ತಮ್ಮ ತನ್ನ ವೃತ್ತಿಗೆ ಶರಣು ಹೊಡೆದುದು ರಾಮರಾಜಪ್ಪ, ವೆಂಕಟಿ, ನಾಗೂ, ಮತ್ತೆ ಇತರರಿಗೆ ಬೇಸರವಾಯಿತು. ಅವರು ಅವಳ ಮನೆಯ ಕಡೆ ನುಳಿಯುವುದನ್ನೇ ಬಿಟ್ಟುಬಿಟ್ಟರು.

ಮುತ್ತಮ್ಮನ ಜೀವನ ನೇರವಾದ ಪಥದಲ್ಲಿ ನಾಗಿತು. ಎಮ್ಮೆಯ ಮೇಲೂ, ಆಳಿನ ಮೇಲೂ ಅವಳು ಯಥಾ ಪ್ರಕಾರ ಸಿಡುಗುಟ್ಟಿಕೊಳ್ಳುತ್ತಿದ್ದಳು. ನಾಗರಾಜನನ್ನು ಮೊದಲಿನ ನಲಿಗೆಯಿಂದಲೇ ಬಯ್ಯುತ್ತಲೂ ಇದ್ದಳು. ಆದರೆ ಅವಳ ಬೈಗಳಲ್ಲಿ ಮೊದಲಿನ ಮೊನಚು ಮಾಯವಾಗಿತ್ತು.

